# ಭಾವಚಿಂತಾರತ್ನ



ಸಂಪಾದಕ:

**ಸಿ. ಮಹಾದೇವಪ್ಪ, ಎಂ. ಎ.,**

ಪ್ರಿನ್ಸಿಪಾಲ್

ಪ್ರಥಮ ದರ್ಜೆ ಕಾಲೇಜ್, ಚಿಕ್ಕಮಗಳೂರು

# ಭಾವಚಿಂತಾರತ್ನ

ಸಂಪಾದಕ :

**ಸಿ. ಮಹಾದೇವಪ್ಪ,** ಎಂ. ಎ.,

ಪ್ರಿನ್ಸಿಪಾಲ್

ಪ್ರಥಮ ದರ್ಜೆ ಕಾಲೇಜ್, ಚಿಕ್ಕಮಗಳೂರು.

ಅಧಿಕೃತ ಮಾರಾಟಗಾರರು

ಶ್ರೀ ಗೌರೀಶಂಕರ ಬುಕ್ ಡಿಪೋ

**ದೇವರಾಜ ಮಾರ್ಕೆಟ್, ಮೈಸೂರು.**

# ಮೊದಲನೆಯ ಮುದ್ರಣದ ಮುನ್ನುಡಿ

ಇದು ಈಗ್ಗೆ ಸುಮಾರು ಆರು ವರ್ಷಗಳ ಹಿಂದೆ ಕೈಕೊಂಡ ಕೆಲಸ ಷಡಕ್ಷರದೇವನ ಕಾವ್ಯದೃಷ್ಟಿಯನ್ನು ಕುರಿತು ಒಂದು ಪುಟ್ಟ ಲೇಖನವನ್ನು ಬರೆಯಲು ಹೊರಟು ರಾಜಶೇಖರ ವಿಲಾಸದ ಮೂಲವಾದ ಈ ಕೃತಿಯ ಪರಿಶೀಲನೆಗೆ ಕೈಹಾಕಿದ ಸಂದರ್ಭ ನೆನಪಿಗೆ ಬರುತ್ತದೆ. ಅಂದು ಮೊದಲು ಮಾಡಿದ ಕಾರ್ಯ ಇಂದು ಮುಗಿದಿದೆ.

ಮಲ್ಲಣಾರ್ಯನ ಭಾವಚಿಂತಾರತ್ನ ಈಗಾಗಲೆ ನಾಲ್ಕು ಶತಮಾನಗಳಿಂದ ಕನ್ನಡ ಸಾಹಿತ್ಯ ಹಾಗೂ ಜನತೆಯ ಬದುಕಿನ ಮೇಲೆ ತನ್ನ ಪ್ರಭಾವವನ್ನು ಬೀರಿ ಗಣ್ಯಸ್ಥಾನವನ್ನು ಪಡೆದಿದೆ; ಮುಂದೆಯೂ ಪಡೆಯಲಿದೆ. ಕೃತಿಯ ಹೆಸರೇ ಸೂಚಿಸ ವಂತೆ ಅದರಲ್ಲಿ ಭಾವಪುಷ್ಟಿ, ಚಿಂತನೆಯ ಗಾಢತೆ, ಕಲ್ಪನೆಯ ವಿಸ್ತಾರವನ್ನು ಕಾಣ ಬಹುದು. ಭಕ್ತಿ, ಧರ್ಮ, ನಿಷ್ಠೆಗಳ ಸಾರಸತ್ವಲಪೂರ್ಣವಾದ ಈ ರಸಕೃತಿ ಕವಿದರ್ಶನದಲ್ಲಿ ಪಾವನವಾಗಿದೆ. ಕವಿಯ ದೇವಧರ್ಮಾರ್ಥದ ವಿಶೇಷಜ್ಞತೆಯಿಂದ ಮೂಡಿದ ಈ ಕೃತಿಯನ್ನು ನಾಡಿನ ಜನಸಾಮಾನ್ಯರಿಗೂ, ವಿದ್ಯಾರ್ಥಿಗಳಿಗೂ ಪರಿಚಯ ಮಾಡಿಕೊಡುವ ಉದ್ದೇಶದಿಂದ ಸಂಗ್ರಹಿಸಲಾಗಿದೆ. ಇಡೀ ಕಾವ್ಯವನ್ನು ಓದಬೇಕೆಂದು ಬಯಸುವವರ ಸೌಕರ್ಯಕ್ಕಾಗಿ ಸಂಗ್ರಹದಲ್ಲಿ ಬಿಟ್ಟಿರುವ ಪದ್ಯಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಅಲ್ಲದೆ ಇಡೀ ಗ್ರಂಥಕ್ಕೆ ಸಾಕಷ್ಟು ಓಲೆಪ್ರತಿಗಳ ಆಧಾರದಿಂದ ಪಾಠಾಂತರವನ್ನೂ ಕೊಟ್ಟಿದೆ.

ಈ ಕೃತಿಯ ಕಥಾಸಂದರ್ಭಗಳಲ್ಲಿ ಬರುವ ಭಕ್ತರ ಚಾರಿತ್ರಗಳು ಗೊತ್ತಿದ್ದರೆ ಮಾತ್ರ ಕಥೆಯ ಸ್ವಾರಸ್ಯವನ್ನು ಸವಿದು, ಕವಿಯ ಸಾಮರ್ಥ್ಯವನ್ನು ಮನಗಾಣ ಬಹುದು. ಈ ಬಗೆಯ ಪೂರ್ವ ಸಿದ್ಧತೆಯಾಗಲಿ, ಸಂಸ್ಕಾರವಾಗಲಿ ಇಲ್ಲದೆ ಯಾವ ಮಹಾಕವಿಯ ಕೃತಿಯನ್ನೂ ಓದಿ ಅರ್ಥಮಾಡಿಕೊಳ್ಳುತ್ತೇವೆಂದು ಧೈರ್ಯವಾಗಿ ಹೇಳಲಾಗದು. ಆ ಕಾರಣ ಭಾವಚಿಂತಾರತ್ನ ಸಂಗ್ರಹದಲ್ಲಿರುವ ಶೈವ, ವೀರಶೈವ ಭಕ್ತರ ಕಥಾಪ್ರಸಂಗಗಳನ್ನು ಇಲ್ಲಿ ಕೊಡಲು ಯತ್ನಿಸಿದೆ. ಭಾವಚಿಂತಾರತ್ನದ ಕಥೆ ಯನ್ನು ಹೋಲುವ ಹರಿಹರನ ಮನುಚೋಳರಗಳೆಯನ್ನು ಪ್ರಪ್ರಥಮವಾಗಿ ಓದುಗರಿಗಾಗಿ ಅನುಬಂಧದಲ್ಲಿ ಕೊಡಲಾಗಿದೆ.

ನನ್ನ ವಿದ್ಯಾಗುರುಗಳಾದ ಪ್ರೊ| ಕೆ. ವಿ. ಪುಟ್ಟಪ್ಪ, ಎಂ.ಎ. ಅವರು, ಶ್ರೀ ಡಿ.ಎಲ್. ನರಸಿಂಹಾಚಾರ್ಯ,ಎಂ.ಎ. ಅವರು, ಶ್ರೀ ಕೆ.ವಿ. ರಾಘವಾಚಾರ್ಯ,ಎಂ.ಎ. ಅವರೂ ನನಗೆ ಉಪಯುಕ್ತ ಸಲಹೆಗಳನ್ನಿತ್ತು ನನ್ನ ಈ ಕಾರ್ಯಕ್ಕೆ ಪ್ರೋತ್ಸಾಹ ವನ್ನಿತ್ತಿರುವರು. ನಾನು ಅವರಿಗೆ ತುಂಬಾ ಕೃತಜ್ಞತೆಯನ್ನು ಸಲ್ಲಿಸುತ್ತೇನೆ.

ಮೊತ್ತಮೊದಲು ನನ್ನ ಈ ಪ್ರಯತ್ನವನ್ನು ಪ್ರೊ॥ ಶಿ.ಶಿ. ಬಸವನಾಳ್, ಎಂ.ಎ. ಅವರಲ್ಲಿ ತಿಳಿಸಿದಾಗ ನಗೆಮೊಗದಿಂದ ಅವರು ಭಾವಚಿಂತಾರತ್ನ ಬಹಳ ಸುಂದರವಾದ ಕಾವ್ಯ. ಅದನ್ನು ಪರಿಷ್ಕರಿಸಿ ಮುದ್ರಿಸಬೇಕಾದ ಕೆಲಸ ಅಗತ್ಯವಾದದ್ದು. ನೀವು ಆ ಕಾರ್ಯವನ್ನು ಮಾಡಿರಿ. ಒಳ್ಳೆಯದು. ಗ್ರಂಥ ಸಂಪಾದನೆಯ ಕೆಲಸ ಮುಗಿಸಿ ತಿಳಿಸಿ; ನಮ್ಮ ಧಾರವಾಡದ ಸಂಸ್ಥೆಯಲ್ಲಿಯೇ ಪ್ರಕಟಿಸುವ ಏರ್ಪಾಡು ಮಾಡೋಣವೆಂದು ಪ್ರೋತ್ಸಾಹಿಸಿದರು. ಆ ಮಹನೀಯರು ಇಂದು ಕಣ್ಮರೆಯಾಗಿರುವರು. ಆದರೆ ಅವರು ಸಲ್ಲಿಸಿರುವ ಸಾಹಿತ್ಯ ಸೇವೆಯ ನೆನಪು ಕನ್ನಡಿಗರಲ್ಲಿದೆ. ಅವರು ನನಗಿತ್ತ ಬೆಂಬಲದ ನುಡಿಯನ್ನು ಕೃತಜ್ಞತೆಯಿಂದ ಸ್ಮರಿಸುವುದು ನನ್ನ ಕರ್ತವ್ಯವೆಂದು ಭಾವಿಸಿದ್ದೇನೆ.

ಮಲ್ಲಣಾರ್ಯನ ಈ ಕೃತಿಯ ಶುದ್ಧ ಪ್ರತಿಯನ್ನು ಪಾಠಾಂತರ ಸಹಿತ ಇಲ್ಲಿ ಕೊಡಲು ಸಾಧ್ಯವಾದದ್ದು ಸಾಕಷ್ಟು ಓಲೆಯ ಪ್ರತಿಗಳು ದೊರಕಿದುದರಿಂದಲೆ. ಅವುಗಳನ್ನು ದಯವಿಟ್ಟು ಒದಗಿಸಿಕೊಟ್ಟ ನನ್ನ ಮಿತ್ರರಾದ ಶ್ರೀ ಡಿ.ಹೆಚ್. ಸಿದ್ಧವೀರಪ್ಪನವರಿಗೂ, ಹಿರಿಯರಾದ ಗುಬ್ಬಿಯ ಶ್ರೀ ಜಿ.ಎಸ್. ಮುರಿಗಪ್ಪ, ಪ್ಲೀಡರ್, ಅವರಿಗೂ ಸದ್ಧರ್ಮದೀಪಿಕೆಯ ಪ್ರಕಾಶಕರಾದ ಶ್ರೀ ಮಲ್ಲಿಕಾರ್ಜುನರವರಿಗೂ ನನ್ನ ಹೃತ್ಪೂರ್ವಕ ವಂದನೆಗಳನ್ನು ಅರ್ಪಿಸುತ್ತೇನೆ. ಓರಿಯಂಟಲ್ ರಿಸರ್ಚ್ ಇನ್ಸ್ಟಿಟ್ಯೂಟಿನ ಮುಖ್ಯಾಧಿಕಾರಿಗಳು ಅವರಲ್ಲಿದ್ದ ಪ್ರತಿಗಳ ಪಾಠಾಂತರಗಳನ್ನು ಗುರುತುಹಾಕಿಕೊಳ್ಳಲು ಅವಕಾಶವನ್ನಿತ್ತುದಕ್ಕಾಗಿ ಅವರಿಗೆ ನನ್ನ ವಂದನೆಗಳು.

೨೪–೬–೫೪. ಸಿ. ಮಹಾದೇವಪ್ಪ.

## ಎರಡನೆಯ ಮುದ್ರಣ

ಮೈಸೂರು ವಿಶ್ವವಿದ್ಯಾನಿಲಯದವರು ಬಿ. ಎ. ಮತ್ತು ಬಿ. ಎಸ್‌ಸಿ. ತರಗತಿಗಳಿಗೆ ೧೯೬೩-೬೪ ನೆಯ ಇಸ್ವಿಯ ಪಠ್ಯಗ್ರಂಥವಾಗಿ ನಿಯಮಿಸಿರುವ ಕಾರಣ ಈ ಗ್ರಂಥ ಎರಡನೆಯ ಮುದ್ರಣವನ್ನು ಈಗ ಕಾಣುವಂತಾಗಿದೆ. ವಿಶ್ವವಿದ್ಯಾನಿಲಯದವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಸಕಾಲದಲ್ಲಿ ಅಂದವಾಗಿ ಮುದ್ರಣವಾಗಲು ನೆರವಾದ ತಾಂಡವಮೂರ್ತಿ ಮುದ್ರಣಾಲಯದ ಚಿ॥ ಸಿ. ನಟರಾಜ್ ಬಿ ಎಸ್‌ಸಿ. ಅವರಿಗೂ ತಿದ್ದುಪಡಿಯ ಕಾರ್ಯವನ್ನು ನಿರ್ವಹಿಸಿದ ಚಿ॥ ಚ. ಸುಂದರೇಶನ್ ಎಂ. ಎ. ಅವರಿಗೂ ನನ್ನ ನೆಚ್ಚಿನ ಮೆಚ್ಚಿಕೆಯನ್ನು ವ್ಯಕ್ತಪಡಿಸುತ್ತೇನೆ.

೨೪–೬–೧೯೬೩ ಸಿ. ಮಹಾದೇವಪ್ಪ

# ವಿಷಯಸೂಚಿಕೆ :

# ಪೀಠಿಕೆ

## ಕವಿಪರಿಚಯ

ಅಮರಗುಂಡದ ಮಲ್ಲಿಕಾರ್ಜುನ ಪಂಡಿತರ ಶಿಷ್ಯನಾದ ಗುರುಭಕ್ತನ ವಂಶೋದ್ಭವನೂ ಭಾವಚಿಂತಾರತ್ನ, ವೀರಶೈವಾಮೃತ ಪುರಾಣಗಳನ್ನೂ ರಚಿಸಿ ಪ್ರಸಿದ್ಧನಾದ ಕವಿ ಮಲ್ಲಣಾರ್ಯನ ವಿಷಯವಾಗಿ ಆತನ ಗ್ರಂಥಗಳಿಂದಲೂ ಇತರ ಗ್ರಂಥಗಳಿಂದಲೂ ತಿಳಿದುಬರುವ ಸಂಗತಿಗಳನ್ನಿಲ್ಲಿ ನಿರೂಪಿಸಲು ಯತ್ನಿಸಿದೆ.

ಮಲ್ಲಣಾರ್ಯನ ಸ್ಥಳ ಗುಬ್ಬಿ. ಇದು ತುಮಕೂರಿಗೆ ಹನ್ನೆರಡು ಮೈಲಿ ದೂರದಲ್ಲಿ ಪಶ್ಚಿಮ ದಿಕ್ಕಿನಲ್ಲಿದೆ. ಹಿಂದೆ ಇದಕ್ಕೆ ಅಮರಗುಂಡ ಕ್ಷೇತ್ರವೆಂದು ಹೆಸರಿದ್ದಿತು. ಅಮರಗುಂಡ ಮಲ್ಲಿಕಾರ್ಜುನಪಂಡಿತರೆಂಬ ಒಬ್ಬ ವೀರಶೈವ ಮಹಿಮಾ ಪುರುಷರು ನೆಲಸಿದ ಪುಣ್ಯಸ್ಥಳವೆಂದು ಈ ಗುಬ್ಬಿ ಪ್ರಖ್ಯಾತಿಯನ್ನು ಹೊಂದಿದೆ. ಅಮರಗುಂಡವನ್ನೇ ಗುಬ್ಬಿಯೆಂದು ಕರೆದುದಕ್ಕೆ ಒಂದು ಜನಪ್ರತೀತಿಯುಂಟು. ಶಿಷ್ಯರ ಸಮೂಹಕ್ಕೆ ಜ್ಞಾನೋಪದೇಶವನ್ನು ಮಾಡುತ್ತಲಿದ್ದ ಆ ಅಮರಗುಂಡದ ಮಲ್ಲಿಕಾರ್ಜುನ ಪಂಡಿತರು ಭಕ್ತರಿಗೆ ಪುರಾಣವನ್ನು ಹೇಳಿ ಅದರ ಅರ್ಥವನ್ನು ತಿಳಿಸುತ್ತಲಿದ್ದರೆಂದೂ ಆಗ ಎರಡು ಗುಬ್ಬಚ್ಚಿಗಳು ನಿತ್ಯವೂ ಅವರು ಹೇಳುತ್ತಿದ್ದ ಪುರಾಣಾರ್ಥವನ್ನು ಕೇಳುತ್ತ ಕುಳಿತಿದ್ದು ಪುರಾಣಶ್ರವಣವು ಪೂರೈಸಿದ ದಿವಸ ಆ ಎರಡು ಹಕ್ಕಿಗಳೂ ಒಟ್ಟಿಗೆ ಅಲ್ಲಿಯೇ ಪ್ರಾಣವನ್ನು ಬಿಟ್ಟುವೆಂದೂ ಅಂದಿನಿಂದ ಅಮರಗುಂಡಕ್ಷೇತ್ರಕ್ಕೆ ಗುಬ್ಬಿ ಅಥವಾ ಚಟಕಪುರಿ ಎಂಬ ಹೆಸರಾಯಿತೆಂದೂ ಹೇಳುವರು. ಆ ಗುಬ್ಬಚ್ಚಿಗಳ ಸ್ಮಾರಕವಾಗಿ ಇಂದೂ ಗುಬ್ಬಿಯಲ್ಲಿರುವ ಅಮರ ಗುಂಡ ಮಲ್ಲೇಶ್ವರಸ್ವಾಮಿಯ ದೇವಸ್ಥಾನದಲ್ಲಿ 'ಗುಬ್ಬಚ್ಚಿ ಬಸವನ' ಶಿಲಾ ಮೂರ್ತಿಯಿದೆ. ಈ ಗುಬ್ಬಿಯಲ್ಲಿ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಗುರುವಾದ ಹರದನಹಳ್ಳಿ ಶ್ರೀ ಗೋಸಲ ಚೆನ್ನಬಸವೇಶ್ವರರು ತಪಸ್ಸು ಮಾಡಿ ಕೊಂಡಿದ್ದು ಶಿವಯೋಗ ಸಮಾಧಿಯಲ್ಲಿರುವರು. ಇಂಥ ತಪೋಭೂಮಿಯಲ್ಲಿ ಜನಿಸಿದ ಮಲ್ಲಣಾರ್ಯನ ವಂಶದ ಖ್ಯಾತಿಯಾದರೊ ಅದ್ವಿತೀಯವಾದುದು. ಶೂಲವನ್ನೇರಿದ ಮಹತ್ವವುಳ್ಳ ಗುರುಭಕ್ತನ ಪವಿತ್ರಚಾರಿತ್ರ ಹಾಗು ಅಮರ ಗುಂಡ ಮಲ್ಲಿಕಾರ್ಜುನ ಪಂಡಿತರ ಚಿದಂಶವೇ ಮೈವೆತ್ತಂತಿದ್ದ ಮಲ್ಲಣಾರ್ಯನ ಹಿರಿಯರು ಸಾಮಾನ್ಯರಾದವರೇನಲ್ಲ. ಗುರುಭಕ್ತನ ಪುತ್ರ ದೇಶಿಕಪಟ್ಟವರ್ಧನ

ಸೌಂದರ್ಯ ಮಲ್ಲಿಕಾರ್ಜುನ ಪಂಡಿತ. ಆತನ ಮಗ ಶಿವನನ್ನು ಮಾತನಾಡಿಸಿದ ನಾಗನಾಥಾರ್ಯ. ಆತನ ಮಗ ಸರ್ಪವನ್ನು ಲಿಂಗಕ್ಕೆ ಛತ್ರಿಯನ್ನಾಗಿ ಮಾಡಿದ ಅಮರಗುಂಡಾರ್ಯ; ಶೂದ್ರನಿಂದ ವೇದವನ್ನು ಓದಿಸಿ ಆತನನ್ನು ಭಕ್ತನನ್ನಾಗಿ ಮಾಡಿದ ಖ್ಯಾತಿವಂತ. ಈ ಅಮರಗುಂಡಾರ್ಯನ ವಂಶದಲ್ಲಿ ಹುಟ್ಟಿದ ಗುಬ್ಬಿಯ ಮಲ್ಲಣ್ಣನೇ ಗಣಭಾಷ್ಯರತ್ನಮಾಲೆ, ವಾತೂಲತಂತ್ರ ಟೀಕೆಗಳನ್ನು ಬರೆದು ಪ್ರಸಿದ್ಧನಾದವನು. ಆತನ ಮಗ ಗುರುಭಕ್ತ. ಈ ಗುರುಭಕ್ತನ ಸತಿಯಾದ ಸಪ್ಪೆಯಮ್ಮನಾದರೋ ಶೀಲಸಂಪನ್ನೆಯಾದ ಶಿವಶರಣೆ. ಆಕೆಯ ಪುಣ್ಯ ಗರ್ಭದಲ್ಲಿ ಜನಿಸಿದವನೇ ಕವಿ ಮಲ್ಲಣಾರ್ಯ. ಈತನೇ ಭಾವಚಿಂತಾರತ್ನದ ಕರ್ತೃ.

## ಕವಿಯ ಪಿತಾಮಹ

ಕವಿ ಮಲ್ಲಣಾರ್ಯನ ತಾತನಾದ 'ಗುಬ್ಬಿಯ ಮಲ್ಲಣ್ಣ'ನೂ ಕವಿಯಾಗಿದ್ದ ವನು. ಆತನು ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಅಸಾಧಾರಣವಾದ ಪಾಂಡಿತ್ಯ ವನ್ನು ಪಡೆದಿದ್ದವನು. ಆತನನ್ನು ಮಲ್ಲಣಾಚಾರ್ಯ, ಮಲ್ಲಣಾರ್ಯ ಎಂದೂ ಕರೆಯುತ್ತಿದ್ದ ರೂಢಿಯಿದ್ದಿತು. ಹದಿನೈದನೆಯ ಶತಮಾನದಲ್ಲಿ ವೀರಶೈವ ಸಾಹಿತ್ಯ ಹಾಗೂ ಧರ್ಮದ ಪುನರುಜ್ಜೀವನವನ್ನು ಮಾಡಿ ಕನ್ನಡನಾಡಿನಲ್ಲಿ ಭಕ್ತಿಯ ಹೊನಲನ್ನು ಹರಿಸಿದ ದಿವ್ಯ ಶಿವಯೋಗಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಲ್ಲಿ ಗುಬ್ಬಿಯ ಮಲ್ಲಣ್ಣನೂ ಒಬ್ಬ. ಆತನು ವಾತುಲಾಗಮದ ಶುದ್ಧಾಖ್ಯ ತಂತ್ರಕ್ಕೆ ಕನ್ನಡ ಟೀಕನ್ನು ರಚಿಸಿರುತ್ತಾನೆ.

ಆ ಟೀಕಾಗ್ರಂಥದ ಮೊದಲಲ್ಲಿ ಶಿವಸ್ತುತಿಯ ಒಂದು ವೃತ್ತವಿದೆ. ಆ ಬಳಿಕ ಈ ಶ್ಲೋಕವಿದೆ:–

"ಶ್ರೀಮಚ್ಛುದ್ಧಾಖ್ಯ ತಂತ್ರೇಸ್ಮಿನ್ ಮಲ್ಲಿಕಾರ್ಜನ ಧೀಮತಾ।
ಕರ್ಣಾಟ ಭಾಷಯಾ ಟೀಕಾ ಕ್ರಿಯತೇದ್ಯ ಮಯಾ ಸ್ಫುಟಂ॥"

ಈ ಶ್ಲೋಕಕ್ಕೆ ಅರ್ಥವನ್ನು ತಿಳಿಸುತ್ತಾ "ಮಲ್ಲಿಕಾರ್ಜುನ ಧೀಮತಾ" ಎಂಬುದಕ್ಕೆ ಶ್ರೀಮದಮರಗುಂಡ ಮಲ್ಲಿಕಾರ್ಜುನನ ಚಿದಂಶವನ್ನುಳ್ಳಂಥ, ಮತ್ತೆ ಮಲ್ಲಿಕಾರ್ಜುನ ನೆಂಬ ಬುದ್ಧಿವಾನುವಾದ ತನ್ನಿಂದ ಕರ್ಣಾಟ ಭಾಷೆಯಲ್ಲಿ ಈ ಶುದ್ಧವೆಂಬ ಹೆಸರುಳ್ಳ ವಾತುಲಾಗಮದಲ್ಲಿಯ ಟೀಕೆ ಸ್ಪಷ್ಟವಾಯಿತೆಂದು ಹೇಳಿರುವನು.

ಅಮರಗುಂಡ ಮಲ್ಲಿಕಾರ್ಜುನ ಪಂಡಿತರ ಶಿಷ್ಯಪರಂಪರೆಗೆ ಈ ಮಲ್ಲಣ್ಣ ಸೇರಿದವ ನೆಂಬುದು ಇದರಿಂದ ಸುಸ್ಪಷ್ಟವಾಗಿದೆ.

ಈ ಶುದ್ಧಾಖ್ಯತಂತ್ರದಲ್ಲಿ ತತ್ತ್ವಭೇದ, ವರ್ಣಭೇದ, ಚಕ್ರಭೇದ, ವರ್ಗ ಭೇದ, ಮಂತ್ರಭೇದ, ಪ್ರಣವಭೇದ, ಬ್ರಹ್ಮಭೇದ, ಅಂಗಭೇದ, ಮಂತ್ರಜಾತ, ಮಂತ್ರಕೀಲಕಗಳೆಂಬ ದಶಪಟಲಗಳಿವೆ. ಈ ಆಗಮಗ್ರಂಥದ ಆದಿಯಲ್ಲಿ ಶಿವ ಸಾಧಕರಿಗೆ ಹಿತವಾಗುವ ಪ್ರಯೋಜನಕ್ಕಾಗಿ ವಾತುಲವೆಂಬ ಮಹಾಗಮದಲ್ಲಿಯ ಸಾರಗ್ರಂಥಕ್ಕಿಂತಲೂ ಸಾರವಾದ ಗ್ರಂಥವನ್ನು ಲೇಸಾಗಿ ಉದ್ಧರಿಸಿ, ಸಾವಿರ ಗ್ರಂಥದೊಡನೆ ಕೂಡಿ ಭುಕ್ತಿ ಮುಕ್ತಿಗಳನ್ನು ಕೊಡುವಂತಹ ಸಮಸ್ತ ಶಿವಜ್ಞಾನ ವನ್ನುಳ್ಳ ಶುದ್ಧಾಖ್ಯತಂತ್ರವು ದಧಿಯಲ್ಲಿ ಬೆಣ್ಣೆ ಹೇಗೊ ಹಾಗೆ ತಮ್ಮಿಂದ ಉದ್ಧರಿಸಲ್ಪಟ್ಟಿತೆಂದು ಶಿವನು ಸುವ್ರತನಾದ ಷಣ್ಮುಖನಿಗೆ ಹೇಳಿದ ಹಾಗೆ ನಿರೂಪಿತವಾಗಿದೆ. ಎಲ್ಲ ಆಗಮಗಳ ಅರ್ಥಸಮೂಹವನ್ನುಳ್ಳ ಈ ತಂತ್ರದ ದಶಪಟಲಗಳಿಗೆ ಕನ್ನಡದಲ್ಲಿ ಶಿವಭಕ್ತರಿಗೆ ಪ್ರಿಯವಾದ ಟೀಕನ್ನು ಬರೆದು ಪೂರೈಸಿದ ಬಳಿಕ ಆ ಬಗ್ಗೆ ಮಲ್ಲಣ್ಣನು ಹೀಗೆ ಹೇಳಿರುವನು :—

"ದಶಭಿಃ ಪಟಲಾನಾಂ ಸಂಯುತಂ ಶುದ್ಧಾಖ್ಯತಂತ್ರಕಂ ।
ಕರ್ಣಾಟ ಭಾಷಾವಿವೃತಂ ಸಂಪೂರ್ಣಂ ಶೈವವಲ್ಲಭಂ ॥"

'ಇತಿ ಶ್ರೀ ವಾತುಲತಂತ್ರೇ ಶುದ್ಧಾಖ್ಯೇ ಸಹಸ್ರಗ್ರಂಥ ಸಂಹಿತಾಯಾಂ ಶ್ರೀ ಮಲ್ಲಿಕಾರ್ಜುನೀಯ ಕರ್ಣಾಟಭಾಷಾ ವಿವೃತಃ.' ಇಲ್ಲಿಂದ ಮುಂದೆ ಬರುವ ಮಲ್ಲಿಕಾರ್ಜುನನ—ಟೀಕೆಯ ಆದಿಯಲ್ಲಿ ಹೇಳಿಕೊಂಡಿರುವಂತೆ ಇಲ್ಲಿಯೂ ಸಂಸ್ಕೃತದಲ್ಲಿ ತನ್ನನ್ನು ಮಲ್ಲಿಕಾರ್ಜುನ ಎಂದು ಕರೆದುಕೊಂಡಿರುವ ಮಲ್ಲಣ್ಣನ—ವಂದನಾರ್ಪಣೆಯ ಈ ಶ್ಲೋಕ ಗಮನಾರ್ಹವಾದುದು :—

ನಮಸ್ತೇ ಬಸವಾಖ್ಯಾಯ । ಮರಗುಂಡಾದಿದೇಶಿನೇ ।
ತಂತ್ರಂ ವೇತ್ರೇ ಸತಾಂ ನೇತ್ರೇ । ಷಟ್ಸ್ಥಲಬ್ರಹ್ಮರೂಪಿಣೇ ॥

ತನಗಿಂತಲೂ ಹಿಂದೆ ಅಮರಗುಂಡದಲ್ಲಿದ್ದ ಬಸವ ಎಂಬ ಹೆಸರನ್ನುಳ್ಳ ಒಬ್ಬ ದೇಶಿಕನನ್ನಿಲ್ಲಿ ಮಲ್ಲಣ್ಣನು ಸ್ಮರಿಸಿರುವನು. ಷಟ್ಸ್ಥಲ ಬ್ರಹ್ಮರೂಪಿಯಾದ ಆ ಅಮರಗುಂಡ ದೇಶಿಕನು ಸಿದ್ಧಾಂತವೇತ್ತೃವೂ ಸತ್ಪುರುಷರ ಮಾರ್ಗದರ್ಶಿಯೂ ಆಗಿದ್ದವನು. ಆತನು ಮಲ್ಲಣ್ಣನ ವಂಶಕ್ಕೆ ಸೇರಿದ ಒಬ್ಬ ಹಿರಿಯ ದೇಶಿಕ ನಾಗಿರಬೇಕು. ಬಹುಶಃ ಮಲ್ಲಣ್ಣನಿಗಿಂತ ಹಿಂದೆ ಆತನ ವಂಶದಲ್ಲಿ ಮಹಾ

ಮಹಿಮನಾಗಿ ಮೆರೆದ ಅಮರಗುಂಡಾರ್ಯನಿಗೆ ಇದ್ದ ಬೇರೊಂದು ಹೆಸರೊ ಏನೊ ಎಂಬುದು ವಿಮರ್ಶಿಸಿ ನಿರ್ಣಯಿಸಬೇಕಾದ ವಿಷಯ. ಅಂತು ಮಲ್ಲಣ್ಣನಿಗಿಂತ ಹಿಂದೆ ಇದ್ದ ಈ ಬಸವದೇಶಿಕನು ಆಗಮಜ್ಞನಾಗಿ ವೀರಶೈವ ಧರ್ಮದ ಮರ್ಮವನ್ನರಿತು ಅದರಂತೆ ನಡೆಯುತ್ತಿದ್ದ ಒಬ್ಬ ದೇಶಿಕೋತ್ತಮ. ಸಕಲ ಶಾಸ್ತ್ರಗಳನ್ನು ಅರಿತಿದ್ದ ಮಲ್ಲಣ್ಣನ ಮೇಲೆ ಆ ಬಸವದೇಶಿಕನ ಪ್ರಭಾವ ಬಿದ್ದಿದೆಯೆಂಬುದನ್ನು ನಾವು ಈ ಸಂದರ್ಭದಲ್ಲಿ ಅರಿಯಬಹುದಾಗಿದೆ.

ಮಲ್ಲಣ್ಣನು ಬಸವದೇಶಿಕನನ್ನು ಸ್ತುತಿಸಿದ ಬಳಿಕ ವೀರಶೈವವನ್ನು ಚೆನ್ನಾಗಿ ತಿಳಿದು ಸಮವೀರಮಾರ್ಗದಲ್ಲಿ ಅದ್ವಯ ಭಕ್ತಿಯೋಗದಿಂದ ಪ್ರವರ್ತಿಸುವಂತಹ ವಿಶ್ವಪವಿತ್ರಕಾರಿಗಳಿಗೆ ನಮಸ್ಕಾರವೆಂದು ಹೇಳಿ ತನ್ನ ಟೀಕಾಗ್ರಂಥ ರಚನೆಯ ಕಾಲವನ್ನು ಸೂಚಿಸಿರುವನು. ನಮಗೆ ದೊರೆತಿದ್ದ ಒಂದು ಓಲೆಯ ಪ್ರತಿಯ ಪ್ರಕಾರ ಕ್ರಿ. ಶ. ೧೪೪೭ನೆಯ ಇಸವಿ ಮಾರ್ಚ್ ೬ನೆಯ ತಾರೀಖು ಗುರುವಾರ (ಪರಾಭವ ಸಂವತ್ಸರ) ದಲ್ಲಿ ಆ ವ್ಯಾಖ್ಯಾನಪಟಲ ಸಮಾಪ್ತಿಯಾಯಿತೆಂದೂ ಅದನ್ನು ಬರೆದಾತನು ಶ್ರೀ ಗುರು ತೋಂಟದಾರ್ಯರ ಶಿಷ್ಯನಾದ ಮಹಂತಯ್ಯನೆಂದೂ ತಿಳಿದುಬರುತ್ತದೆ. ಈ ಆಗಮಗ್ರಂಥದ ಟೀಕೆಯನ್ನು ನೋಡಿದಲ್ಲಿ ಸಕಲ ಶಾಸ್ತ್ರಾಗಮಗಳನರಿತು ವೀರಶೈವ ಧರ್ಮದ ಸೂಕ್ಷ್ಮ ತತ್ತ್ವಗಳನ್ನು ಪ್ರತಿಪಾದಿಸುವ ಮೂಲಕ ಲೋಕವನ್ನು ಪಾವನಗೊಳಿಸಬಯಸಿದ ಮಲ್ಲಣ್ಣನು ಸಮದರ್ಶಿಯೂ ಜ್ಞಾನನಿಧಿಯೂ ಆದ ವ್ಯಕ್ತಿ ಎಂಬುದು ಮನದಟ್ಟಾಗುತ್ತದೆ.

ಚರಸೇವಾನಿರತನೂ ಶಿವಶರಣರ ಶಿಶುವೂ ಆದ ಮಲ್ಲಣ್ಣನ ಮತ್ತೊಂದು ಕೃತಿ ಗಣಭಾಷ್ಯರತ್ನಮಾಲೆ. ಕನ್ನಡ ಸಾಹಿತ್ಯದ ಅಮೂಲ್ಯ ಗ್ರಂಥಗಳಲ್ಲಿ ಅದೊಂದು. ಆ ಗ್ರಂಥಮಹಿಮೆಯನ್ನು ಕುರಿತು ಮಲ್ಲಣ್ಣನೇ ಹೇಳಿರುವ ಮಾತುಗಳಿವು: "ಇದು ಪರಮ ವೀರಶೈವ ಸಿದ್ಧಾಂತ ತತ್ತ್ವಜ್ಞಾನಂ, ಇದು ವೀರಶೈವ ಪ್ರತಿಷ್ಠಾಪನಾಚಾರ್ಯ, ಇದು ದಿವ್ಯ ವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರ ಮುಖ್ಯ ಮುಖದರ್ಪಣ, ಇದು ಮಹಾ ಜ್ಞಾನಪ್ರವರ್ಧನ ಪರಮಾನುಭಾವ ಸಂಬೋಧೆ, ಇದು ಸರ್ವಾಚಾರಸಂಪನ್ನ ಸಮಾರೂಢ ಸಂಗ್ರಹ, ಇದು ರಾಜಯೋಗಸಾಧ್ಯ ಸನ್ನಿಧಾನ, ಇದು ರಸಾಮೃತಪ್ರಸನ್ನಪ್ರಸಾದ, ಇದು ಅಜ್ಞಾನತಿಮಿರಾಂಜನಮಪ್ಪ ಮಹಾಪ್ರಸಂಗ."

ಕಲ್ಯಾಣದಲ್ಲಿ ಬಸವರಾಜದೇವರು, ಚೆನ್ನಬಸವರಾಜದೇವರು, ಪ್ರಭುದೇವರು ಮುಖ್ಯವಾದ ಮಹಾಗಣಂಗಳು ನೂರೊಂದು ಸ್ಥಲದಲ್ಲಿ ನಡೆದು ನುಡಿದ ವಚನಂಗಳು ಸ್ಥಲಭಿನ್ನವಾಗಿರ್ದಡೆ ಚೆಂದವಲ್ಲೆಂದು ಕಂಠಮಾಲೆಯ ಪವಣಿಗೆಯನರಿದು ಸೇರಿಸಿದ ಈ ಗಣಭಾಷ್ಯರತ್ನಮಾಲೆಯು ಅನುಭವಾನಂದ ಸುಖಾಂಭೋರಾಶಿ, ಪರಮ ಷಟ್ಸ್ಥಲ ಮಾರ್ಗದ ಕರು, ಪರಮ ಲಿಂಗಾಂಗದ ಸಿರಿ, ಹರನೊಳೆರೆವಿಲ್ಲದಿಪ್ಪುದಕ್ಕೆ ಪರಮ ಚಾರಿತ್ರವೆನಿಸಿದುದು. ಇದನ್ನು ಗುರುನಾಥನಾಜ್ಞೆಯಿಂದ ಲೋಕದ ನೂತನ ಗಣಂಗಳರಿಯಲೆಂಬ ಉದ್ದೇಶದಿಂದ ಮಲ್ಲಣ್ಣನು ಕೃತಿ ಮಾಡಿದನು. ಆ ಮೂಲಕ ವೀರಶೈವ ಧರ್ಮದ ಜಾಗೃತಿಗೆ ಹೊಸ ತೇಜಸ್ಸನ್ನು ಕೊಟ್ಟು ನಾಡಿನಲ್ಲಿ ಆಗ ಕವಿದಿದ್ದ ಕತ್ತಲೆಯನ್ನು ಹೋಗಲಾಡಿಸಿದನು. ಶಿವಭಕ್ತಿ ಮಾರ್ಗವನ್ನು ಸ್ಥಲವಿಟ್ಟು ಶಿವಶರಣರು ನುಡಿದ ವಚನಗಳ ಪರಮಾನುಭಾವದ ರಸಾಮೃತವನ್ನು ಪಾನಮಾಡಿಸಿ ತಣಿಸಿದನು. ಆತನ ಕಾವ್ಯಾನುಭವದ ಉಜ್ಜ್ವಲ ಪ್ರತಿಭೆ, ಶಿವಾನುಭವಶೀಲದ ಸೂಕ್ಷ್ಮದೃಷ್ಟಿ ಹಾಗೂ ವೇದಾಗಮಪುರಾಣೇತಿಹಾಸಗಳ ಸುಪರಿಚಿತತೆಗಳಿಗೆ ಹಿಡಿದ ಕೈಗನ್ನಡಿಯೇ ಗಣಭಾಷ್ಯರತ್ನಮಾಲೆ.

ಮಲ್ಲಣ್ಣನ ಈ ಕೃತಿರಚನೆಯ ಸ್ಥೂಲಪರಿಚಯವನ್ನಿಲ್ಲಿ ಕೊಡಬಹುದು. ಆಯಾಸ್ಥಲದ ಪರಿಚಯವನ್ನು ಮೊದಲಲ್ಲಿ ಮಾಡಿಕೊಟ್ಟು ವೇದ, ಆಗಮ, ಪುರಾಣವೇ ಮೊದಲಾದುವುಗಳ ಆಧಾರಗ್ರಂಥಗಳನ್ನು ಉದ್ಧರಿಸಿ ಅವುಗಳಿಗೆ ತಾನೆ ತಿಳಿಗನ್ನಡದಲ್ಲಿ ಅನುವಾದವನ್ನು ಮಾಡಿರುತ್ತಾನೆ. ಆ ಅಭಿಪ್ರಾಯಗಳನ್ನೊಳಗೊಂಡ ವಚನಗಳ ಸಂಗ್ರಹ ಆ ಅನಂತರ ಬರುತ್ತದೆ. ಮಲ್ಲಣ್ಣನ ಗದ್ಯದ ಸರಳ ಶೈಲಿ, ಅರ್ಥಸ್ಫೂರ್ತಿಗಳಿಗೆ ಒಂದೆರಡು ಉದಾಹರಣೆಗಳನ್ನು* ನೋಡೋಣ :—

ಪ್ರಕಾಶಮಾನೇ ಪರಮಾತ್ಮಭಾನೌ ನಶ್ಯತ್ಯವಿದ್ಯಾತಿಮಿರಂ ಸಮಸ್ತಮ್ ।
ಅಹೋ ಬುಧಾ ನಿರ್ಮಲದೃಷ್ಟಿಯೋಗಾತ್ಕಿಂಚಿನ್ನಪಶ್ಯಂತಿ ಜಗತ್ಪ್ರಪಂಚಮ್ ॥

ಪರಮಾತ್ಮನೆಂಬ ಸೂರ್ಯನು ಪ್ರಕಾಶಿಸುತ್ತಿರಲಾಗಿ ಅವಿದ್ಯೆಯೆಂಬ ಕತ್ತಲೆಯೆಲ್ಲಾ ನಾಶವಾಗುವುದು. ವಿದ್ವಾಂಸರುಗಳಿರಾ, ನಿರ್ಮಲವಾದ ಜ್ಞಾನದೃಷ್ಟಿಯ ಯೋಗದಿಂದ ಮಾಯಾರೂಪವಾದ ಜಗತ್ಪ್ರಪಂಚವನ್ನು ಸ್ವಲ್ಪವಾದರೂ ನೋಡದಿರುವುದು ಆಶ್ಚರ್ಯವು.

---

* ಗ.ಭಾ.ರ. ಜ್ಞಾನಪರಾಮರಿಕೆಯ ಸ್ಥಲ.

ಯಥಾ ಚಂದ್ರಮಸಾ ರಾತ್ರೌ ಮಹೀ ಸರ್ವಾ ಪ್ರಕಾಶಿತಾ |
ಲೋಭಮೋಹೌ ಸ್ಥಿತೌ ದೇಹೇ ಶಿವಜ್ಞಾನಾದ್ವಿನಶ್ಯತಃ ||

ಹೇಗೆ ರಾತ್ರಿಯಲ್ಲಿ ಚಂದ್ರನಿಂದ ಭೂಮಂಡಲವೆಲ್ಲವು ಬೆಳಗುವುದೋ ಆದರಂತೆ ದೇಹದಲ್ಲಿರತಕ್ಕ ಲೋಭಮೋಹಗಳು ಶಿವಜ್ಞಾನದಿಂದ ನಾಶವಾಗುವುವು.

## ವಚನ

ವಾಯುಗುಣವ ಸರ್ಪ ಬಲ್ಲುದು, ಮಧುರಗುಣವನಿರುವೆ ಬಲ್ಲುದು, ಗೋತ್ರದ ಗುಣವ ಕಾಗೆ ಬಲ್ಲುದು, ವೇಳೆಯ ಗುಣವ ಕೋಳಿ ಬಲ್ಲುದು. ಇದು ಕಾರಣ ಮನುಷ್ಯ ಜನ್ಮದಲ್ಲಿ ಬಂದು ಶಿವಜ್ಞಾನವಿಲ್ಲದಿರೆ ಆ ಕಾಗೆ ಕೋಳಿಗಳಿಂದ ಕರಕಷ್ಟ ಕಾಣಾ ಕಲಿದೇವರ ದೇವಾ.

ಹೀಗೆ ವಚನಗಳಲ್ಲಡಗಿರುವ ತತ್ತ್ವಮಹಿಮೆಯನ್ನು ಶಾಸ್ತ್ರೋಕ್ತಿಗಳ ಹಿನ್ನೆಲೆಯಲ್ಲಿ ವಿಶದಪಡಿಸಿ ವಚನ ವಾಙ್ಮಯದ ಅಪಾರ ಸಾರಸಂಪತ್ತನ್ನು ಸಂಗ್ರಹಿಸಿ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿರುವ ಮಲ್ಲಣ್ಣನ ಕೃತಿಗೆ ಎಂದೆಂದಿಗೂ ಒಂದು ಗಣ್ಯಸ್ಥಾನವಿದೆ. ಹಿಂದೆ ಬಿಜ್ಜಾವರದ ಇಮ್ಮಡಿ ಚಿಕ್ಕೇಂದ್ರನು ರಾಜ್ಯಭಾರವನ್ನು ಮಾಡುತ್ತಿದ್ದಾಗ್ಗೆ ಅಲ್ಲಿನ ಗುರುಸಿದ್ಧ ಮಲ್ಲಿಕಾರ್ಜುನನ ಮಠದ ಅನುಭವಮಂಟಪದಲ್ಲಿ ಗಣಭಾಷ್ಯ ರತ್ನಮಾಲೆಯ ಪ್ರಸಂಗ ನಡೆಯುತ್ತಿತ್ತೆಂಬ ಸಂಗತಿ ಮಲ್ಲಿಕಾರ್ಜುನ ಕವಿ (ಕ್ರಿ. ಶ. ೧೫೫೩)ಯ ಕರ್ಣರಸಾಯನದಿಂದ* ತಿಳಿದುಬರುತ್ತದೆ. ಶಾಂತಲಿಂಗ ದೇಶಿಕನು (ಕ್ರಿ. ಶ. ೧೬೭೨) ತನ್ನ ಸಾಸಲ ಭೈರವೇಶ್ವರಕಾವ್ಯದ ಕಥಾಸೂತ್ರ ರತ್ನಾಕರದ ರಚನೆಗೆ ಗುಬ್ಬಿಯ ಮಲ್ಲಣ್ಣನ ಕೃತಿಸಹಾಯವನ್ನು ಪಡೆದಿರುವನೆಂಬ ಅಂಶ ಪ್ರಸಿದ್ಧವಾಗಿದೆ. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯ ಪರಂಪರೆಯವನಾದ ಗೂಳೂರು ಸಿದ್ಧವೀರಣಾಚಾರ್ಯರೇ ಮೊದಲಾದ ವಚನ ಸಂಪಾದನಕಾರರ ಮೇಲೆ ಗುಬ್ಬಿಯ ಮಲ್ಲಣ್ಣನ ಕೃತಿಯ ಪ್ರಭಾವ ಬಿದ್ದಿರುವುದನ್ನು ಮನಗಾಣಬಹುದಾಗಿದೆ. ಷಟ್ಸ್ಥಲಾಚಾರ್ಯ ಶ್ರೀ ಬೋಳಬಸವೇಶ, ಹಲಗೆಯಾಚಾರ್ಯರೇ ಮೊದಲಾದ ಯತೀಶ್ವರರು ಗುಬ್ಬಿಯ ಮಲ್ಲಣ್ಣನ ಅಸಾಧಾರಣ ಶಕ್ತಿಯನ್ನು ಮನವಾರೆ ಕೊಂಡಾಡಿ ಆತನ ಪೌತ್ರನಾದ ಕವಿ ಮಲ್ಲಣಾರ್ಯನ ಕವಿತಾಶಕ್ತಿ ದಾಂಗುಡಿಯಿಡುವಂತೆ ಪ್ರೇರಿಸಿರುವುದೇ ಮಲ್ಲಣ್ಣನ ಹಿರಿಮೆಯನ್ನು ಸಾರುತ್ತದೆ.

---

* ಕ. ರ. ೧೧ನೆಯ ಸಂ., ಪದ್ಯ ೧೬.

ಮಲ್ಲಣ್ಣನು ಶುದ್ಧಾಖ್ಯತಂತ್ರಕ್ಕೆ ಬರೆದಿರುವ ಕನ್ನಡ ಟೀಕು ಮಾತ್ರ ಇನ್ನೂ ಮುದ್ರಣವಾಗಿಲ್ಲ. ಗಣಭಾಷ್ಯರತ್ನಮಾಲೆ ಈಗಾಗಲೆ ಎರಡು ಬಾರಿ, ಒಮ್ಮೆ (ಕ್ರಿ. ಶ. ೧೯೧೦) ಕೈ.ನಂ ಶಿವಪ್ಪಶಾಸ್ತ್ರಿಗಳಿಂದಲೂ. ಇನ್ನೊಮ್ಮೆ (ಕ್ರಿ. ಶ. ೧೯೪೮) ಶ್ರೀ ಮ.ನಿ.ಪ್ರ. ಪ್ರಭುಸ್ವಾಮಿಯವರಿಂದಲೂ ಬೆಳಕು ಕಂಡಿದೆ. ಮೇಲೆ ತಿಳಿಸಿದ ವ್ಯಾಖ್ಯಾನ ಹಾಗು ಸಂಗ್ರಹಗ್ರಂಥಗಳಲ್ಲದೆ ಮಲ್ಲಣ್ಣನು ಬೇರಾವ ಕನ್ನಡ ಕೃತಿಗಳನ್ನು ರಚಿಸಿದ ಹಾಗೆ ತೋರದು. ಆದರೆ ಮಲ್ಲಣಾರ್ಯನು 'ರಾಮಸ್ತವ ರಾಜ' ಎಂಬ ಒಂದು ಯೋಗಶಾಸ್ತ್ರ ಗ್ರಂಥವನ್ನು ತೆಲುಗಿನಲ್ಲಿ ಬರೆದಿರುವುದಾಗಿ ರೆ. ಎಫ್. ಕಿಟ್ಟೆಲ್ ಅವರು ತಿಳಿಸಿರುತ್ತಾರೆ.೧ ದೇಹವೇ ಪಟ್ಟಣ, ಆತ್ಮನೇ ಅಲ್ಲಿನ ನಿವಾಸಿ ಎಂದು ನಿರೂಪಿಸಿರುವ ಆ ಗ್ರಂಥವು ಒಂದು ರೂಪಕಕೃತಿ ಎಂದೂ ಅವರು ಆ ಬಗ್ಗೆ ಹೇಳಿರುವರು. ಅವರ ಅಭಿಪ್ರಾಯದಲ್ಲಿ ಈ ಗ್ರಂಥ ಕವಿಮಲ್ಲಣಾರ್ಯನದೆಂದು. ಆದರೆ ಆ ಕೃತಿಯನ್ನು ಮಲ್ಲಣಾರ್ಯನೇ ಬರೆದಿರುವುದಾದರೆ ಅದು ಗುಬ್ಬಿಯ ಮಲ್ಲಣ್ಣನದಿರಬೇಕು. ಗುಬ್ಬಿಯ ಮಲ್ಲಣ್ಣನಿಗೂ ಮಲ್ಲಣಾರ್ಯ೨ನೆಂದು ಹೆಸರಿದ್ದುದು ನಾವು ಮನಗಂಡಿರುವ ವಿಷಯ. ಗುಬ್ಬಿಯ ಮಲ್ಲಣ್ಣನು ಯೋಗಶಾಸ್ತ್ರವನ್ನು ಬಲ್ಲವನಾಗಿದ್ದನೆಂಬುದು ಆತನ ಮಾತಿನಿಂದಲೆ ತಿಳಿದುಬರುತ್ತದೆ. ಅಲ್ಲದೆ ಆ ರೂಪಕಕೃತಿಯಲ್ಲಿದೆಯೆಂದು ಹೇಳುವ ಗ್ರಂಥವಿಷಯವನ್ನು ಗಣಭಾಷ್ಯ ರತ್ನಮಾಲೆಯಲ್ಲಿ೩ ಗುಬ್ಬಿಯ ಮಲ್ಲಣ್ಣನು ಕೊಂಚ ವಿಚಾರಮಾಡಿರುತ್ತಾನೆ. ಆ ಗ್ರಂಥ ಈತನದೇ ಆಗಿದ್ದಲ್ಲಿ ಕನ್ನಡಿಗರಲ್ಲಿ ಅದರ ಪ್ರಚಾರ ವಾಗದಿರುವುದು ಅದು ತೆಲುಗು ಗ್ರಂಥವಾದುದರಿಂದಲೋ ಏನೊ. ಆದರೆ ಆ ಗ್ರಂಥದ ಬಗ್ಗೆ ಕವಿ ಮಲ್ಲಣಾರ್ಯನಾಗಲಿ, ಶಾಂತೇಶನಾಗಲಿ ಏನೊಂದನ್ನೂ ಹೇಳದಿರುವುದು ಆಶ್ಚರ್ಯ!

## ಕವಿಪುತ್ರ, ಆತನ ಕೃತಿ ವಿಚಾರ

ಮಲ್ಲಣಾರ್ಯನ ಮಗನಾದ ಶಾಂತೇಶನು 'ತೋಂಟದ ಸಿದ್ಧೇಶ್ವರ ಪುರಾಣ' ವನ್ನು ಬರೆದಿರುತ್ತಾನೆ. ತಂದೆಯಂತೆ ಈತನೂ ಪ್ರಖ್ಯಾತಿಯನ್ನು ಗಳಿಸಿದ ಕವಿ. ಈತನ ಈ ಪುರಾಣಕಾವ್ಯವು ಭಾಮಿನಿಷಟ್ಪದಿಯಲ್ಲಿದೆ. ಆಗಮ, ಉಪನಿಷತ್ತು, ಪುರಾಣವೇ ಮೊದಲಾದುವುಗಳ ಆಧಾರ ಶ್ಲೋಕಗಳೂ ವೃತ್ತಗಳೂ ಅಲ್ಲಲ್ಲಿ ಇವೆ.

---

೧, ನಾಗವರ್ಮನ ಕನ್ನಡಛಂದಸ್ಸು—LVII. ೨. ಶಾಂ. ಸಿ. ಪು. ಸಂಧಿಯ ಅಂತ್ಯ ಪದ್ಯ; ೩. ಗ.ಭಾ.ರ.—ದೇಹದೇಹಿಗಳ ಉತ್ಪತ್ತಿಸ್ಥಲ.

ಇದರಲ್ಲಿ ಒಟ್ಟು ೯೭೧ ಷಟ್ಪದಿಗಳೂ ೪೨೦ ಗ್ರಂಥಗಳೂ ಇವೆ. ಶಾಲೀವಾಹನಶಕ ೧೪೮೩ನೆಯ ರೌದ್ರಿ ಸಂವತ್ಸರದಲ್ಲಿ (ಕ್ರಿ. ಶ. ೧೫೬೧) ಈ ಗ್ರಂಥರಚನೆಯಾಯಿತೆಂದು ಕವಿ ತಿಳಿಸಿರುತ್ತಾನೆ. ಈ ಕೃತಿ ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಚರಿತ್ರೆಯನ್ನು ಕುರಿತದ್ದು.

ಈ ಕೃತಿಯ ಮೊದಲಲ್ಲಿ ತೋಂಟದ ಸಿದ್ಧಲಿಂಗೇಶ್ವರರನ್ನು ಸ್ತುತಿಸಿ ಆ ಬಳಿಕ ತನ್ನ ವಂಶವಿಚಾರವನ್ನು ಕುರಿತು ಶಾಂತೇಶನು ಹೇಳಿರುವ ಈ ಪದ್ಯಗಳನ್ನು ನೋಡಿ :—

ಅಮರಗುಂಡದ ಮಲ್ಲಿಕಾರ್ಜುನ
ನಮಲ ಘನ ದಿವ್ಯಾಜ್ಞೆಯಿಂದಂ
ಕ್ರಮದಿ ಶೂಲಮನಡರಿದುರು ಗುರುಭಕ್ತನನ್ವಯದೆ।
ಅಮರ್ದು ರಾಜಿಸಿ ಸಕಲ ಶಾಸ್ತ್ರಾ
ಗಮುಗಳಂ ನೆಱೆ ತಿಳಿದು ಮತ್ತಂ
ವಿಮಲ ವಾತೂಲಕ್ಕೆ ಟೀಕಂಮಾಡಿ ಧರೆಯಲ್ಲಿ ॥ ೧—೧೫
ಲಾಲಿಸಲ್ ಗಣರತ್ನ ಭಾಷ್ಯ ಸು
ಮಾಲೆಯಂ ಮಾಡುತ್ತೆ ಮತ್ತೆ ವಿ
ಶಾಲ ಚರಸೇವೆಯೊಳು ವರ್ತಿಸಿ ಪಟ್ಟಸ್ಥಲದೊಳಿರ್ಪಾ।
ಲೋಲ ಗುಬ್ಬಿಯ ಮಲ್ಲಣಾರ್ಯನ
ಶಾಲಿಪುತ್ರಂ ಶಿವನ ಮಹಿಮೆಯ
ಲೀಲೆಯಿಂ ಪ್ರಕಟಿಸುವನವನ ವಿಶೇಷವೆಂತೆನಲು ॥ ೧—೧೬
ಧರಣಿಯೊಳ್ ಸಂಸ್ಕೃತ ಮಹಾಬಂ
ಧುರದ ಕರ್ಣಾಟಂಗಳಾದಿಯ
ಸರಸ ಶಾಸ್ತ್ರಂಗಳು ಮುಖೋದ್ಗತವಾಗಿ ರಾಜಿಸುವಾ।
ವರ ಬಸವಪೌರಾಣದತಿಶಯ
ದುರುತರದ ಘನ ಮಲ್ಲಣಾರ್ಯನ
ಪರಮ ಪುತ್ರಂ ಶಾಂತದೇಶಿಕನೊರೆದನೀ ಕೃತಿಯ ॥ ೧—೧೭

ಹೀಗೆ ತನ್ನ ಮುತ್ತಾತನಾದ ಗುಬ್ಬಿಯ ಮಲ್ಲಣ್ಣ, ತಂದೆಯಾದ ಮಲ್ಲಣಾರ್ಯರ ಗುಣಶೀಲಗಳನ್ನೂ, ಅವರ ಕೃತಿವಿಚಾರವನ್ನೂ ತಿಳಿಸಿ ಗುಮ್ಮಳಾಪುರದ ಶಾಂತೇಶನನ್ನು

ನೆನೆದು ತನ್ನ ಗುರು ಗಣೇಶ್ವರಮೂರ್ತಿಯನ್ನು ಭಾವಿಸಿ ಕೃತಿರಚನೆಮಾಡಿದ ಹಾಗೆ ಕವಿ ಹೇಳಿರುವನು. ಶಾಂತೇಶನಿಗೆ ಶಾಂತದೇಶಿಕ, ಶಾಂತೀಶ್ವರ ಎಂಬ ಹೆಸರುಗಳಿವೆ ಯೆಂಬುದು ಆತನ ಕೃತಿಯಿಂದ ತಿಳಿದುಬರುತ್ತದೆ. ಪ್ರಭುದೇವರು, ಬಸವೇಶ್ವರ ಮತ್ತು ಚೆನ್ನಬಸವಣ್ಣನವರನ್ನು ಭಕ್ತಿಯಿಂದ ಭಜಿಸಿ, ಪಾಲ್ಕುರಿಕೆ ಸೋಮೇಶ್ವರನನ್ನು ಸ್ಮರಿಸಿರುತ್ತಾನೆ.

ಸನ್ನುತ ಮಲ್ಲಣಾರ್ಯರ ಕಂದನಾದ ಶಾಂತೇಶನು ತನ್ನ ತೋಂಟದ ಸಿದ್ಧೇಶ್ವರನ ಕೃತಿಯನ್ನು ರಚಿಸಬೇಕೆಂದಿದ್ದ ಸಮಯದಲ್ಲಿ ಆ ಗುರು ತೋಂಟದಾರ್ಯನ ಶಿಷ್ಯನಾದ ಚಂದ್ರಶೇಖರದೇವರು ಬಂದು ಕೃತಿ ಸಹಾಯಕರಾಗಿ ನಿಂತರೆಂದೂ ಆತನು ಗುರುವಿನಿಂದ ಪಡೆದ ಬೋಧೆಯನ್ನೇ ತಾನು ಕೃತಿಗೊಳಿಸಿದೆನೆಂದೂ ಶಾಂತೇಶನು ತಿಳಿಸಿರುತ್ತಾನೆ. ತನ್ನ ಕೃತಿ ಅತಿ ಸೇವ್ಯವೂ ಅನುಪಮವೂ ಆದುದೆಂಬುದನ್ನು ಕವಿ ಮನಗಂಡಿದ್ದಾನೆ.

ಗೋಸಲ ಶ್ರೀ ಚೆನ್ನಬಸವೇಶ್ವರರ ಶಿಷ್ಯರಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಶಿವಗಂಗೆಗೆ ಬಂದು ನಾಗಿಣಿ ನದಿಯ ಸಮೀಪದ ತೋಂಟದಲ್ಲಿ ಶಿವಯೋಗದಲ್ಲಿದ್ದು ತಮ್ಮ ಶಿಷ್ಯನಾದ ಚಂದ್ರಶೇಖರನಿಗೆ ಬೋಧಿಸಿದ ಭುವನಕೋಶದ ಬ್ರಹ್ಮಾಂಡ ವಿಚಾರ, ಶಿವನ ಪಂಚವಿಂಶತಿ ಲೀಲೆಗಳು, ಶಿವಯೋಗವೇ ಮೊದಲಾದ ವಿಷಯಗಳ ನಿರೂಪಣೆ ಈ ಕೃತಿಯಲ್ಲಿದೆ. ಕವಿಯ ಸಹಜವಾದ ಕವಿತಾಶಕ್ತಿ ಈ ಕೃತಿಯಲ್ಲಿ ಮೈದೋರಿದೆ. ಮಧುರವಾದ ಶೈಲಿ, ಸುಂದರವೂ ಮಿತವೂ ಆದ ವರ್ಣನೆಗಳಿಂದ ಕೃತಿ ಆಕರ್ಷಕ ವಾಗಿದೆ. ವಿಷಯ ಪ್ರತಿಪಾದನೆಯ ರೀತಿ ಮನೋಜ್ಞವಾಗಿ, ಕವಿಯ ಹಿರಿಮೆಯನ್ನು ಎತ್ತಿ ಹಿಡಿಯುತ್ತದೆ. 'ಮಲ್ಲಣಾರ್ಯನ ಕುಲಶರಧಿಚಂದ್ರನಾದ' ಶಾಂತೇಶನೇ ಗುರುಭಕ್ತನ ವಂಶದ ಕವಿ ಪರಂಪರೆಯಲ್ಲಿ ಕಟ್ಟಕಡೆಯವನಾದರೂ ಗಣ್ಯನಾದ ಕವಿ ಯೆಂಬುದನ್ನು ಆತನ ಕೃತಿಯ ಸೊಬಗೇ ತಿಳಿಸುತ್ತದೆ.

## ಕವಿಯ ಕೃತಿಗಳು

ಮಲ್ಲಣಾರ್ಯನ ಮೊದಲನೆಯ ಕೃತಿಯೇ ಭಾವಚಿಂತಾರತ್ನ. ಅದನ್ನು ಸತ್ಯೇಂದ್ರಚೋಳಕೃತಿಯೆಂದೂ ಕವಿ ಕರೆದಿರುವನು. ವೀರಶೈವಾಮೃತ ಪುರಾಣವು ಆತನ ಬೃಹತ್ಕೃತಿ. ಈ ಎರಡು ಕೃತಿಗಳನ್ನಲ್ಲದೆ 'ಪುರಾತನ ರಗಳೆ' ಎಂಬ ಗ್ರಂಥವನ್ನು ಆತನು ರಚಿಸಿರುವುದಾಗಿ ಪ್ರತೀತಿಯಿದೆಯೆಂದೂ ಆದರೆ ಅದು

ದೊರೆತಿಲ್ಲವೆಂದೂ ಕವಿಚರಿತ್ರಕಾರರು ತಿಳಿಸಿರುವರು. ಭಾವಚಿಂತಾರತ್ನವನ್ನು ಕುರಿತು ಮುಂದೆ ಪ್ರಸ್ತಾಪಿಸಲಾಗುವುದು. ಇಲ್ಲಿ ವೀರಶೈವಾಮೃತ ಪುರಾಣದ ಬಗ್ಗೆ ಒಂದೆರಡು ಮಾತುಗಳನ್ನು ಹೇಳಬಹುದು.

ವೀರಶೈವಾಮೃತ ಪುರಾಣವು ವೀರಶೈವ ಧರ್ಮದ ಒಂದು ವಿಶ್ವಕೋಶ. ಇದರಲ್ಲಿ ಶಿವನ ಪಂಚವಿಂಶತಿ ಲೀಲೆಗಳು, ವೇದ ಪುರಾಣ ಶಾಸ್ತ್ರಾಗಮಗಳ ವಚನಾರ್ಥ, ಪುರಾತನ ನೂತನ ಭಕ್ತರ ಚರಿತ್ರೆ, ಶೈವ ವೀರಶೈವ ತತ್ತ್ವ ವಿಚಾರ, ಧರ್ಮಾಧರ್ಮ ಸ್ವರೂಪ, ಬಸವಪುರಾಣ, ಶಿವತತ್ತ್ವಚಿಂತಾಮಣಿ ಮೊದಲಾದ ಪುರಾಣಕಾವ್ಯಗಳ ಕಥಾಸಂಗ್ರಹ ಇತ್ಯಾದಿ ನಾನಾ ವಿಷಯಗಳನ್ನು ಕಾಣಬಹುದು. ಸಾಹಿತ್ಯ, ಚರಿತ್ರೆ, ಪುರಾಣ, ಸಿದ್ಧಾಂತ, ವೇದಾಂತಾದಿ ಶಾಸ್ತ್ರ ವಿಚಾರಗಳನ್ನು ಕಾವ್ಯಮಯವನ್ನಾಗಿ ಮಾಡಿದ ಮಲ್ಲಣಾರ್ಯನ ಸತ್ಕವಿತ್ವದ ಹಿರಿಮೆಯನ್ನು ಮನಗಾಣಿಸುವ ಮಹತ್ವ ಪೂರಿತವಾದ ಹಿರಿಯ ಕೃತಿಯಿದು. ದಕ್ಷಿಣ ಕೈಲಾಸವೆನಿಸಿಕೊಂಡ ಕಕುದ್ಗಿರಿ(ಶಿವಗಂಗೆ) ಯಲ್ಲಿ ಶ್ರೀ ಮರುಳಾಚಾರ್ಯರ ಪ್ರವರವನ್ನು ಹೊಂದಿದ ಶೀಲಪಟ್ಸ್ಥಲ ಹಲಗೆಯಾ ಚಾರ್ಯರು ತಮ್ಮ ಶಿಷ್ಯನಾದ ಕೆಂಚವೀರಾಹ್ವನಿಗೆ ಮಾಡಿದ ಬೋಧೆಯೇ ಮಲ್ಲಣಾ ರ್ಯನ ಈ ಕೃತಿಯ ರೂಪವನ್ನು ತಾಳಿದೆ. ಶೀಲವಂತಾರ್ಯನ ಶಿಷ್ಯನಾದ ಹಲಗೆಯಾ ಚಾರ್ಯನು ಸರ್ವಾಗಮ ವಿಶಾರದನಾಗಿಯೂ, ವಿಖ್ಯಾತನಾಗಿಯೂ ಇದ್ದ ಗುರುವರ್ಯ. ಆತನು ಗುಬ್ಬಿಯ ಮಲ್ಲಣಾರ್ಯನನ್ನು ಕರೆಯಿಸಿಕೊಂಡು "ಮಹಾ ಕವಿಯಾದ ಮಲ್ಲಣಾರ್ಯನೆ, ಶ್ರೇಷ್ಠವಾದ ವೀರಶೈವಮತ ಸಂಬಂಧವಾದ ಆಚಾರದ ಮತ್ತು ಶಿವನ ಮಹಿಮೆಯನ್ನು ವೇದ ಪುರಾಣಾಗಮಾದಿ ಸಮ್ಮತಿಯಿಂದ ಕೂಡಿರುವಂತೆ ಒಂದು ಗ್ರಂಥ ವನ್ನು" ರಚಿಸೆಂದು ಪ್ರೇರಿಸಿದ ಫಲವಾಗಿ ಮೂಡಿದ ಈ ವೀರಶೈವಾಮೃತ ಪುರಾಣವು ಮಲ್ಲಣಾರ್ಯನ ಮಹತ್ಕವಿತಾ ಶಕ್ತಿಗೂ, ಧರ್ಮಾನುರಾಗಕ್ಕೂ ಚಿರಸಾಕ್ಷಿಯಾಗಿದೆ.

## ಕವಿಯ ಕಾಲ ವಿಚಾರ

ಕವಿ ಮಲ್ಲಣಾರ್ಯನು ಯಾವಾಗ ಹುಟ್ಟಿದನೆಂಬುದನ್ನು ನಿರ್ದಿಷ್ಟವಾಗಿ ಹೇಳುವಂತಿಲ್ಲ. ಆದರೆ ತನ್ನ ಕೃತಿಗಳು ಯಾವಾಗ ರಚಿತವಾದುವೆಂಬುದನ್ನು ಕವಿ ಆಯಾ ಗ್ರಂಥದ ಅಂತ್ಯದಲ್ಲಿ ಸ್ಪಷ್ಟವಾಗಿ ತಿಳಿಸಿರುತ್ತಾನೆ.

' ಬಾಣಗುಣವಾರ್ಧಿವಿಧು ಸಂದ ಶಕವರ್ಷದಿಂ
ಮೇಣಮಲವತ್ಸರಂ ಶ್ರೀಮುಖಂ ಕಾರ್ತಿಕ ಧು
ರೀಣವಹ ಶುದ್ಧ ಸಪ್ತಮಿ ಶುಕ್ರವಾರವಾ ಶ್ರವಣನಕ್ಷತ್ರದಲ್ಲಿ ' ।

ಭಾನಚಿಂತಾರತ್ನ ಸಮಾಪ್ತಿಯಾಯಿತೆಂದು ಹೇಳಿರುವುದರಿಂದ ಆ ಕೃತಿ ಕ್ರಿ. ಶ. ೧೫೧೩ನೆಯ ನವೆಂಬರ್ ೪ನೆಯ ತಾರೀಖು ಶುಕ್ರವಾರ ರಚಿತವಾಯಿತೆಂದು ಗೊತ್ತಾಗುವುದು. ಈ ಕೃತಿರಚನೆಯಾದ ಹದಿನೇಳು ವರ್ಷಗಳ ಬಳಿಕ ಎಂದರೆ ಶಾಲೀವಾಹನ ಶಕ ೧೪೫೨ನೆಯ ವಿಕಾರಿ ಸಂವತ್ಸರದ ಆಶ್ವೀಜ ಶುದ್ಧ ಪಂಚಮಿ ಸೋಮವಾರ (ಕ್ರಿ. ಶ. ೧೫೩೦) ಶಿವಗಂಗೆಯ ಶಿವಶರಣೆ ಜ್ಯೋತಿಯಮ್ಮನ ಗೃಹದಲ್ಲಿ ವೀರಶೈವಾಮೃತ ಪುರಾಣಪ್ರಬಂಧವು ನಡೆದು ಪೂರ್ಣವಾಯಿತು. ಕವಿ ಶಾಂತೇಶನು (೧೫೬೧) ತನ್ನ ತಂದೆಯನ್ನು ಕುರಿತು ಹೇಳುವ ಮಾತುಗಳನ್ನು* ನೋಡಿದರೆ ಶಾಂತೇಶನ ಕೃತಿರಚನೆಯ ಕಾಲಕ್ಕೆ ಬಹಳ ಹಿಂದೆಯೇ ಗುಬ್ಬಿಯ ಮಲ್ಲಣ್ಣನು ಶಿವೈಕ್ಯನಾಗಿದ್ದನೆಂದೂ ಆತನ ಮೊಮ್ಮಗನಾದ ಗುಬ್ಬಿಯ ಮಲ್ಲಣಾರ್ಯನ ಮುಖೋದ್ಗತವಾಗಿ ಸರಸಶಾಸ್ತ್ರಗಳು ವಿರಾಜಿಸುತ್ತಿದ್ದುವೆಂದೂ ತಿಳಿದುಬರುತ್ತದೆ. ಆ ಕಾರಣ ಮಲ್ಲಣಾರ್ಯನು ೧೫೬೧ರಲ್ಲಿ ಇನ್ನೂ ಜೀವಿಸಿದ್ದನೆಂದು ಹೇಳಬಹುದು.

## ಕವಿಯ ಗುರುಗಳು

ಭಾವಚಿಂತಾರತ್ನದ ಗ್ರಂಥಾವತಾರದಲ್ಲಿ ಮಲ್ಲಣಾರ್ಯನು ಪ್ರಥಮತಃ ಸಿದ್ಧಮಲ್ಲಿಕಾರ್ಜುನ ಅಥವಾ ಸಿದ್ಧಮಲ್ಲೇಶನನ್ನು ಸ್ತುತಿಸಿರುತ್ತಾನೆ. ಈ ಸಿದ್ಧಮಲ್ಲೇಶನೇ ಮಲ್ಲಣಾರ್ಯನಿಗೆ ದೀಕ್ಷೆಯನ್ನಿತ್ತು ಶಿವಜ್ಞಾನ ಶಿವಭಕ್ತಿಗಳಲ್ಲಿ ತಲ್ಲೀನನಾಗುವಂತೆ ಮಾಡಿದವನು. ಶ್ರೀ ತೋಂಟದ ಸಿದ್ಧಲಿಂಗೇಶ್ವರರ ಶಿಷ್ಯರಲ್ಲಿ ಒಬ್ಬರಾದ ಸಿದ್ಧಮಲ್ಲೇಶನೇ ಈತನಾಗಿರಬಹುದೆಂದು ಕಾಣುತ್ತದೆ. ಗುಮ್ಮಳಾಪುರದ ಶಾಂತೇಶನು ಮಲ್ಲಣಾರ್ಯನ ವಿದ್ಯಾಗುರು. ಆತನು ಶಿವಧ್ಯಾನಿಯಾಗಿಯೂ ಲಿಂಗಪ್ರೇಮಿಯಾಗಿಯೂ ಇದ್ದಾತ. ಆತನನ್ನು ವೀರಶೈವಮತ ಸಮುದ್ಧರಣನೆಂದು ಕವಿ ಹೊಗಳಿರುತ್ತಾನೆ. ಶರಣಲೋಚನಕೈರವಕೆ ಹಿಮಕಿರಣನೆನಿಸಿದ್ದ ಈ ಶಾಂತೇಶನು ಬಹು ಪ್ರಭಾವಶಾಲಿಯಾಗಿದ್ದ

* ಶಾಂ. ಸಿ. ಪು. ಸಂ. ೧. ಪದ್ಯ ೧೫-೧೭

ವ್ಯಕ್ತಿ. 'ಭೂಲೋಕಪಾವನ ಕಕುದ್ಗಿರಿ ಸುದಾಕ್ಷಿಣ್ಯ ಕೈಲಾಸವದರ ಮೇಗಣ ಗವಿಯ ಸಿಂಹಾಸನಾಲಂಕೃತ ಶಾಂತನಂಜೇಶ್ವರಾಂಘ್ರಿಪಂಕಜಭೃಂಗ'ನೆಂದು ಮಲ್ಲಣಾರ್ಯನು ತನ್ನನ್ನು ಕರೆದುಕೊಂಡಿರುವುದರಿಂದ ಆತನು ಶಿವಗಂಗೆಯ ಮೇಗಣ ಗವಿಯ ಶಾಂತನಂಜೇಶ್ವರನ ಶಿಷ್ಯನೂ ಆಗಿದ್ದನೆಂದು ತಿಳಿದುಬರುತ್ತದೆ.

## ಕವಿ ಸ್ಮರಿಸಿರುವ ಮಹಾನುಭಾವರು

ಭಾವಚಿಂತಾರತ್ನದಲ್ಲಿ ಮಲ್ಲಣಾರ್ಯನು ಅಲ್ಲಮಪ್ರಭು, ಬಸವೇಶ್ವರ ಮತ್ತು ಚೆನ್ನಬಸವೇಶ್ವರರ ಪಾದಕಮಲವೇ ಷಟ್ಸ್ಥಲ; ಅವನ್ನು ನುತಿಸುವ ತನ್ನ ನುಡಿಯೇ ಷಟ್ಪದಿಯಾದುದೆಂದು ತಿಳಿಸಿರುವನು. ಶಿವಲೆಂಕ ಮಂಚಣ್ಣ ಪಂಡಿತ, ಶ್ರೀಪತಿ ಪಂಡಿತ ಮತ್ತು ಮಲ್ಲಿಕಾರ್ಜುನ ಪಂಡಿತರು ನಮ್ಮ ಭವರೋಗಗಳಿಗೆ ಪಂಡಿತತ್ರಯ ರಾದರೆಂದು ಹೇಳಿ ಅವರನ್ನು ಕವಿ ಕೊಂಡಾಡಿರುವನು. ಗುರು ಸಿದ್ಧರಾಮನು ತನ್ನ ಕೃತಿಗೆ ನಿರ್ವಿಘ್ನತೆಯನ್ನು ನೀಡಲೆಂದು ಕವಿಯ ಬೇಡಿಕೆ. ಗೂಳೂರು ಶಾಂತದೇವ, ನಾಗವಲ್ಲಿಯ ಶಿವಪೂಜೆಯಾರ್ಯ, ಬಸವೇಶ್ವರರ ಭಾಗ್ಯವೇ ವರ್ತಮಾನದಲ್ಲಿ ಷಟ್ಸ್ಥಲಾಂಗವ ತಳೆದಂತಿದ್ದ ಚಿಕ್ಕ ಬಸವಾಂಕರನ್ನು ಕವಿ ಸ್ತುತಿಸಿರುವನು. ಪೂರ್ವ ಕವಿಗಳಲ್ಲಿ ಪಾಲ್ಕುರಿಕೆ ಸೋಮನಾಥ, ಕಾಳಿದಾಸ, ಬಾಣ, ಮಯೂರ, ಪದ್ಮರಸ ಮತ್ತು ಗುರುಭಕ್ತಿಕೋಶನಾದ ಹರಿಹರ ಕವೀಶ— ಇವರನ್ನು ಕವಿ ಭಾವಚಿಂತಾ ರತ್ನದಲ್ಲಿ ನೆನೆದಿರುವನು.

## ಕೃತಿಪ್ರೇರಕ

ಮಲ್ಲಣಾರ್ಯನು ಯಾವ ರಾಜನ ಆಶ್ರಯದಲ್ಲಿಯೂ ಇದ್ದು ತನ್ನ ಕಾವ್ಯ ಗಳನ್ನು ರಚಿಸಿದವನಲ್ಲ. ಆತನು ಸದಾ ಬಸವಪುರಾಣಾರ್ಥ ಭೋಗಿಯಾಗಿದ್ದವನು. ಆ ಕಾರಣ ಬಸವಪುರಾಣದ ಮಲ್ಲಣಾರ್ಯನೆಂದೇ ಆತನು ವಿಖ್ಯಾತನಾದನು. ಸಂಸ್ಕೃತ ಕನ್ನಡವೇ ಮೊದಲಾದ ಸರಸಶಾಸ್ತ್ರಪರಿಣತನಾದ ಆತನಿಗೆ ಕಾವ್ಯವನ್ನು ಬರೆಯುವ ಹಾಗೆ ಪ್ರೇರಣೆಮಾಡಿದಾತನಾದರೊ ಯತಿರಾಜನಾದ ನಾಗವಲ್ಲಿಯ ಶಿವಪೂಜೆಯಾರ್ಯ. ಆತನನ್ನು ಕಂಡರೆ ಮಲ್ಲಣಾರ್ಯನಿಗೆ ಬಹು ಭಕ್ತಿ. ಕಲ್ಯಾಣದ ಬಸವೇಶ್ವರರ ಮಹತ್ವವನ್ನು ಶರಣರಿಗೆ ತಿಳಿಸಿ, ಸನ್ಮಾರ್ಗವನ್ನು ತೋರಿಸಿಕೊಟ್ಟು ಎಲ್ಲೆಲ್ಲಿಯೂ ತನ್ನ ನಿರ್ಮಲಕೀರ್ತಿಯನ್ನು ಬೆಳಗಿದ ಆ ಯತೀಶನಡಿಗೆರಗಿ ಕವಿ

ನುಡಿದ ಶರಣಾರ್ಥಿಯ ಷಟ್ಪದಿಯಲ್ಲಿ ಮಲ್ಲಣಾರ್ಯನ ಗುರುಭಕ್ತಿ ಭಾವಪೂರ್ಣವಾಗಿ ಸರಳವಾದ ಉಕ್ತಿಯಲ್ಲಿ ಹೊರಚಿಮ್ಮಿರುವುದಲ್ಲದೆ ಶಿವಪೂಜೆಯಾರ್ಯನ ವ್ಯಕ್ತಿತ್ವದ ಸುಂದರಚಿತ್ರವನ್ನು ಕಾಣಬಹುದು. ಆತನ ವಚನಮಾಧುರ್ಯದ 'ಧ್ವನಿ'ಯನ್ನು ಕವಿಯ ಮಾತಿನಲ್ಲಿ ಕಾಣಬಹುದು.

ಶಿವಪೂಜೆಯಾರ್ಯನು ಎಲೆ ಮಲ್ಲಣಾರ್ಯ, ನಿನ್ನ ಪಿತಾಮಹನು ವಾತೂಲ ತಂತ್ರಕ್ಕೆ ಟೀಕೆಯನ್ನು ಮಾಡಿ ಶಿವಾಗಮಗ್ರಂಥಗಳ ಪ್ರಮಾಣದಿಂದ ವಚನಗಳನ್ನು ಸಂಗ್ರಹಿಸಿ ಗಣಭಾಷ್ಯ ರತ್ನಮಾಲೆಯನ್ನು ರಚಿಸಿದ ಸಮರ್ಥನು. ಆತನ ವಂಶೋದ್ಭವನೇ ನೀನು, ವಾತ್ಸಲ್ಯದ ಮಹದಾಚರಣೆಯನ್ನು ಉದ್ಧರಿಸಿದ ಸತ್ಯೇಂದ್ರ ಚೋಳನ ಕಥೆಯನ್ನು ವಿಸ್ತರಿಸೆಂದು ಹೇಳಲು ಆತನ ಅಪ್ಪಣೆಯಂತೆ ಮಲ್ಲಣಾರ್ಯನು ಭಾವಚಿಂತಾರತ್ನವನ್ನು ರಚಿಸತೊಡಗಿದನು. ಹಾಗೆ ರಚಿಸಿದ ಈ ಕೃತಿಗೆ ಅಮರಗುಂಡ ಮಲ್ಲೇಶ್ವರನೇ ಪತಿ ; ಕಥೆಯರಿವ ಯತಿಯೇ ಶಿವಪೂಜೆಯಾರ್ಯ ; ಆತನ ಅನುಮತಿ ಯಂತೆಯೇ ಕೃತಿ ರಚನೆಯಾಯಿತು ಎಂದು ಕವಿಯು ತಿಳಿಸಿರುತ್ತಾನೆ. ಈ ಶಿವಪೂಜೆಯಾರ್ಯನಾರೆಂಬುದನ್ನು ವಿಚಾರಮಾಡಿ ನೋಡೋಣ.

ಸುಮಾರು ಕ್ರಿ.ಶ. ೧೪೭೦ರಲ್ಲಿದ್ದ ಎಡೆಯೂರು ಶ್ರೀ ತೋಂಟದ ಸಿದ್ದಲಿಂಗೇಶ್ವರರ ಶಿಷ್ಯರಾಗಿದ್ದವರು ಹಲವರು. ಅವರಲ್ಲಿ ಬೋಳಬಸವೇಶ್ವರನೇ ಆ ಮಹಾತ್ಮರಾದ ಶಿವಯೋಗಿಗಳಿಂದ ಷಟ್ಸ್ಥಲಾಚಾರ್ಯಪಟ್ಟವನ್ನು ಪಡೆದಾತ. ಆತನಿಗೆ ಶಿವಪೂಜೆ ಯಾರ್ಯನೆಂಬ ಮತ್ತೊಂದು ಹೆಸರಿದ್ದಿತೆಂಬುದು ಚೆನ್ನಬಸವ ಪುರಾಣದಿಂದ[೨] ತಿಳಿದು ಬರುತ್ತದೆ. ಕ್ರಿ.ಶ. ೧೪೭೦ರಿಂದ ಈಚೆಗೆ ಮಲ್ಲಣಾರ್ಯನ ಕೃತಿರಚನೆಯ (ಕ್ರಿ. ಶ. ೧೫೧೩) ಕಾಲಕ್ಕೆ ನಾಡಿನಲ್ಲಿ ಎಲ್ಲೆಲ್ಲಿಯೂ ಷಟ್ಸ್ಥಲ ಪಥವನ್ನು ಹಬ್ಬಿಸಿ, ಗುರುಕುಲಾ ಗ್ರಣಿಯೆನಿಸಿ, "ಚಿದಾನಂದಸ್ವರೂಪಾದ ಸಂಯಮೀಶ್ವರ" ಬೋಳಬಸವೇಶ ಅಥವಾ ಶಿವಪೂಜೆಯಾರ್ಯನಲ್ಲದೆ ಅದೇ ಹೆಸರಿನ ಬೇರಾವ ಯತಿರಾಜನೂ ಎಡೆಯೂರು, ಸಿದ್ಧಗಂಗೆ, ಶಿವಗಂಗೆಗಳಂತೆ ಪವಿತ್ರ ಕ್ಷೇತ್ರವಾಗಿ, ಧಾರ್ಮಿಕ ಹಾಗೂ ಸಾಹಿತ್ಯದ ಒಂದು ಪ್ರಸಿದ್ಧ ಕೇಂದ್ರವಾಗಿದ್ದ ಗುಬ್ಬಿಯ ಸುತ್ತಮುತ್ತಲೂ ಇದ್ದಹಾಗೆ ಕಂಡು ಬರುವುದಿಲ್ಲ. ಆದಕಾರಣ 'ಶಿವಪೂಜೆಯಾರ್ಯನೆಂದೆನಿಪ ಬೋಳಬಸವೇಶ'ನೇ ಭಾವಚಿಂತಾರತ್ನದ ಪ್ರೇರಕನೆಂಬುದು ಸ್ಪಷ್ಟ. ಈ ಬೋಳಬಸವೇಶನು ಗುಮ್ಮಳಾಪುರದ

---

೧. ಇದೇ ಗ್ರಂಥ: ಪುಟ ೨, ಪದ್ಯ ೫. ೨. ಚೆ. ಬ. ಪು: ೭೬೫ನೆಯ ಪುಟ.

ಸಿದ್ಧಲಿಂಗೇಶ್ವರನ (ಸು. ೧೪೮೦) ವಿದ್ಯಾಗುರು. ವಿರಕ್ತ ತೋಂಟದಾರ್ಯನ ಗುರುವಾದ ಗೂಳೂರ ಸಿದ್ಧವೀರಾಚಾರ್ಯನು ಈ ಬೋಳಬಸವೇಶನ ಶಿಷ್ಯ. ಮಲ್ಲಣಾರ್ಯನ ಕೃತಿ ಪ್ರೇರಕನಾದ ಶಿವಪೂಜೆಯಾರ್ಯ ಅಥವಾ ಬೋಳಬಸವೇಶನು ವಚನಕಾರನಾಗಿದ್ದನೆಂದೂ ಆತನು ನಾಗವಲ್ಲಿಯವನೆಂದೂ ಮಲ್ಲಣಾರ್ಯನಿಂದ ತಿಳಿದುಬರುತ್ತದೆ. ಈ ಬೋಳಬಸವೇಶನನ್ನು[೧] ಕುರಿತಿರಬಹುದಾದ ಗ್ರಂಥಗಳು ಹೊರಬಂದರೆ ಆತನ ವಿಷಯವಾಗಿ ಹೆಚ್ಚು ಸಂಗತಿಗಳು ಹೊರಬೀಳಬಹುದು.

## ಪ್ರಣವ ಪಂಚಾಕ್ಷರಿಯನ್ನು ಕುರಿತು

ಓಂಕಾರವನ್ನು ಪ್ರಣವವೆನ್ನುವರು. ಅಕಾರ (ಬ್ರಹ್ಮ) ಉಕಾರ (ವಿಷ್ಣು) ಮಕಾರ (ರುದ್ರ)ವೆಂಬ ಅಕ್ಷರತ್ರಯಂಗಳು ಪ್ರಣವಾತ್ಮಕವಾದುವು. ಇಲ್ಲಿ ಪ್ರಣವ ಭೇದಗಳನ್ನು ಕುರಿತು ವಿಚಾರಮಾಡುವ ಕಾರ್ಯಕ್ಕೆ ಕೈಹಾಕದೆ ಅದರ ಸ್ವರೂಪವನ್ನು ನೋಡೋಣ. ಶಿವಮಯವಾದ ಓಂಕಾರನಾದವು ಸರ್ವವ್ಯಾಪಿಯಾದುದು. ಹೇಗೆಂದರೆ

" ಸಾಱಿ ಘಂಟೆಯ ನುಡಿಸಿ ನಿಲಿಸಿದೊ
ಡೇಱಿದಾ ಧ್ವನಿಯಂತೆ ನಾದಂ
ಮೂಱು ಲೋಕದೊಳೆಸೆವುದಾ ಪಿಂಡಾಂಡದೊಳ್ತುಂಬಿ |* ೧೩–೪೩

ಈ ಪ್ರಣವವು ಸಕಲದೇವತಾ ಮಂತ್ರಗಳ ಪ್ರಾಣ:—
ಪ್ರಣಮಂ ಸರ್ವದೇವಾಖ್ಯಂ | ಸರ್ವದೇವಮಯಂ ವಿದುಃ |
ಸರ್ವೇಶಾಂ ಚೈವ ಮಂತ್ರಾಣಾಂ | ಪ್ರಣವಂ ಪ್ರಾಣಮುಚ್ಯತೇ† ||

" ಓಂಕಾರವು ಶಿವಾಕ್ಷರಂ ಮಧ್ಯಸ್ಥವಾಗಿ ಎಲ್ಲಾ ವರ್ಣಂಗಳ್ ತನ್ನಿಂ ಹೊರಹೊಮ್ಮಿದುದಱಿಂ ವರ್ಣಾಧಿದೇವತೆಗಳಪ್ಪ ಎಲ್ಲಾ ದೇವತೆಗಳ ನಾಮಂಗಳ್ತನ್ನವಾದ ಕಾರಣ ಸರ್ವ ದೇವತಾನಾಮವನುಳ್ಳುದೆನಬೇಕಾಯಿತ್ತು. ಎಲ್ಲಾ ದೇವತಾನಾಮಂ

---

೧. ಬಿಜ್ಜಾವರದಲ್ಲಿ ಮಹಿಮೆಯನ್ನು ಮೆರೆದ ಬೇರೊಬ್ಬ ಬೋಳಬಸವೇಶನ ಬಗ್ಗೆ ಗು.ರಾ.ಚಾ. ಸಂಧಿ ೧೬, ಪದ್ಯ ೨-೪ ನೋಡಿ. * ಶಾಂ.ಸಿ.ಪು. ; † ಶು.ತಂ.ಪಂಚಮ ಪಟಲಃ

ತನ್ನವಾದ ಕಾರಣ, ಎಲ್ಲಾ ದೇವತಾ ಸ್ವರೂಪಂ ತನ್ನವೆಂದಱಿವುದು. ಎಲ್ಲಾ ದೇವತಾ ಮಂತ್ರಂಗಳಿಗೆಯುಂ ಓಂಕಾರಂ ಪ್ರಾಣಸ್ವರೂಪವೆಂದು ನುಡಿಯಲ್ಪಡುತ್ತಿಹುದು "†

ಪ್ರಣವಕ್ಕೆ ಇರುವ ಬೇರೆ ಬೇರೆ ಹೆಸರುಗಳು :—

"ಮುಂದೆ ಕೇಳೋಂಕಾರವೆಂದುಱಿ
ಯಂದದಿಂದಂ ಪ್ರಣವವೇ ತಾ
ನೆಂದು ಮತ್ತಂ ಬ್ರಹ್ಮವೆಂದು ಜ್ಞಾನವೆಂದು ಶಿವಂ ।
ಎಂದುವಾತ್ಮಂ ಕಾಂತಿಬೀಜವ
ದೆಂದು ನಿಷ್ಕಲ ತಾರಕವಿದಿಂ
ತೆಂದು ಸತತಂ ನಿಷ್ಕಲಾತ್ಮಕವೆಂದು ಕೇಳ್ಮುಂದೆ* ॥ ೧೩—೪೪

ನಾದವಾ ನಾದಾದಿ ಸಲೆ ಹೃ
ನ್ನಾದವಿರದಾಗಂ ಬಳಿಕ ವೇ
ದಾದಿ ವರವೇದಭೂಷನ್ಮುಕ್ತಿಬೀಜವಲಾ ।
ಮೋದದಿಂದಂ ಮಂತ್ರಬೀಜಂ
ಸಾದರದೆ ಸಲೆ ವರ್ಣಬೀಜಂ
ಮೇದಿನಿಯೊಳೀ ಪ್ರಣವಕಂ ಪದಿನೆಂಟು ಪೆಸರಾಯ್ತು* ॥ ೧೩—೪೫

ಈ ಪ್ರಣವಸಹಿತವಾದ ಪಂಚಾಕ್ಷರಿಯೇ 'ಓಂ ನಮಃ ಶಿವಾಯ' **ವೆಂಬ** ಮೂಲಪಂಚಾಕ್ಷರಿ. ಈ ಮಂತ್ರವನ್ನು ಜಪಿಸುವವನೇ ಜ್ಞಾನಕಾಯನು. ಸುಜ್ಞಾನವೇ ಮಂತ್ರಮಯವು, ಆ ಮಂತ್ರವೇ ಶಿವಮಯವು, ಆ ಶಿವನೇ ಪ್ರಾಣಲಿಂಗವು, ಆ ಪ್ರಾಣಲಿಂಗವೇ ಪರಮಾತ್ಮವೆನಿಸುವುದು. ಆ ಕಾರಣ ಜ್ಞಾನಕಾಯನಾದವನ ಪಾಪ ತಾನಾಗಿ ಹರಿಯುವುದು ಹೇಗೆಂದರೆ,

ಕರಿಯಂಜುವುದಂಕುಶಕ್ಕೆ ಗಿರಿಯಂಜುವುದು ವಜ್ರಕ್ಕೆ
ತಮಂಧವಂಜುವುದು ಜ್ಯೋತಿಗೆ ಕಾನನವಂಜುವುದು ಬೇಗೆಗೆ
ಪಂಚಮಹಾಪಾತಕವಂಜುವುದು ಕೂಡಲ ಸಂಗಯ್ಯಾ ನಿಮ್ಮ
ದಿವ್ಯನಾಮಕ್ಕೆ‡ ॥

†ಶು.ತಂ. ಪಂಚಮ ಪಟಲಃ, *ಶಾಂ.ಸಿ.ಪು., ‡ಗ.ಭಾ.ರ.ಪಂಚಾಕ್ಷರೀ ಸ್ಥಲ.

ಅಲ್ಲದೆ

ಅಗ್ರಜನಾಗಲಿ ಅಂತ್ಯಜನಾಗಲಿ ಮೂರ್ಖನಾಗಲಿ ಪಂಡಿತನಾಗಲಿ
ಜಪಿಸುವುದು ಪಂಚಾಕ್ಷರೀ ಮಂತ್ರವ
ಜಪದಿಂದ ರುದ್ರನಪ್ಪುದು ತಪ್ಪದು.*

ಈ ಪ್ರಣವ ಪಂಚಾಕ್ಷರಿಯ ಮಹಿಮೆಯನ್ನು ತಿಳಿಸಲೋಸ್ಕರ ಸದ್ಗುಣಿಯಾದ ಸತ್ಯೇಂದ್ರಚೋಳಭೂಪನ ಕಥೆಯನ್ನು ಮಲ್ಲಣಾರ್ಯನು ಹೇಳಿರುತ್ತಾನೆ. ಕಥಾ ದೃಷ್ಟಿಯಿಂದ ಈ ತಾರಕಮಂತ್ರಮಹಿಮೆಯನ್ನು ಶ್ರದ್ಧೆಯಿಂದ ಅರಿತಿರಬೇಕಾದುದು ಅತ್ಯಾವಶ್ಯಕ. ಈ ಹಿನ್ನೆಲೆಯಲ್ಲಿ ಭಾವಚಿಂತಾರತ್ನದ ಕಥೆ ಏನೆಂಬುದನ್ನು ಸಂಗ್ರಹವಾಗಿ ನೋಡೋಣ.

## ಕಥಾಸಂಗ್ರಹ

ರಜತಗಿರಿಯ ಶಿಖರದಲ್ಲಿ ಶಿವನ ನಿವಾಸವಾದ ಕೈಲಾಸ; ಅಮೃತರಸಪೂರದ ಕಂದಕ ಸುತ್ತುಗಟ್ಟಿದ ಕನಕಪ್ರಾಕಾರ; ಮರಕತಮಯವಾದ ವೃಷಭಧ್ವಜ, ರನ್ನದೆನೆಗಳಿಂದ ಶೋಭಿಸುವ ಸ್ಪರ್ಶಶಿಲಾಮಯವಾದ ಕೋಟೆಯ ಬಾಗಿಲು. ಕಾವಲಿನ ಭೈರವಗಣಗಳ ಕೊತ್ತಳಗಳಿಂದ ವಿಮಲಮೂರ್ತಿಯ ವಿಲಾಸವಾದ ಕೈಲಾಸ ಕಂಗೊಳಿಸುತ್ತಿತ್ತು. ಅಲ್ಲಿ ಸಭೆಗೊಟ್ಟು ಶಿವನು ಸಿಂಹಾಸನದಲ್ಲಿ ಮಂಡಿಸಿದ್ದನು. ಭಕ್ತಿಸಾಕಾರರಾದ ಪರಮ ಯೋಗೀಶ್ವರರಿಂದ ಶಿವನ ಸಭೆ ಅಷ್ಟವಿಧ ಪೂಜೆಯಂತೆ ಒಪ್ಪಿತು. ಒಂದೆಡೆ ಭಾಪುರೆ ದೇವ, ದೇವ ಕುಲಚಕ್ರೇಶ, ನಿನ್ನ ಬಳಿ ಬಂದವರಿಗೆ ಅರಿಗಳೇ ಇಲ್ಲವೆಂದು ಕೈಯೆತ್ತಿ ಹೊಗಳುವ ಚಂಡಕೀರ್ತಿಗಳು. ಮುಂದುಗಡೆ ಪಂಚಮಹವಾದ್ಯಗಳ ಘೋಷದ ನಡುವೆ ಭಕ್ತಿಭಾವದಿಂದ ಗಣವರನಾದ ಭೃಂಗಿರಿಟಿ ನರ್ತನ ಮಾಡುತ್ತಿದ್ದನು. ಶಿವನ ಲೀಲಾವಿಲಾಸದ ಆ ನೃತ್ಯದಲ್ಲಿ ತಲ್ಲೀನರಾಗಿದ್ದು ಗಣತತಿಯು ಭೃಂಗರಿಟಿಯನ್ನು ಹೊಗಳತೊಡಗಿತು.

ಆಗ ಶಿವನು ಹುಬ್ಬಿನಿಂದ ಸನ್ನೆಮಾಡಿ ನರ್ತನವನ್ನು ಸಾಕುಮಾಡಿದನು. ಬಳಿಕ ಶಿವನು ಸಭೆಯಲ್ಲಿ ಕುಳಿತಿದ್ದ ಕುಮಾರನಾದ ಗುಹನನ್ನು ಕೃಪಾದೃಷ್ಟಿಯಿಂದ ನೋಡಿ ಬ್ರಹ್ಮನ ಕಡೆಗೆ ತಿರುಗಲು ಆತನು ಕೈಮುಗಿದು ನಿಂತನು. ಬ್ರಹ್ಮನು ನಿಂತುದನ್ನು ಕಂಡ ಗಣಂಗಳೆಲ್ಲರೂ ಏಕೆ ಹಾಗೆ ನಿಂತನೆಂದು ಆತನನ್ನೇ ನೋಡ

* ಗ.ಭಾ.ರ. ಪಂಚಾಕ್ಷರೀಸ್ಥಲ.

ತೊಡಗಿದನು. ಆಗ ಬ್ರಹ್ಮನು ಶಿವನನ್ನು ಕುರಿತು ದೇವ, ಕುಮಾರನಿಗೆ ಅಕ್ಷರವನ್ನು ಕಲಿಸೆಂದು ನೀನು ನನ್ನನ್ನು ಕಳುಹಿಸಿದುದರಿಂದ ಆದ ಬಗೆಯನ್ನು ಚಿತ್ತೈಸು ಎಂದು ನಡೆದ ಸಂಗತಿಯನ್ನು ಬಿನ್ನೈಸಿದನು. ಹೊತ್ತು ಮೂಡುತ್ತಿದ್ದಂತೆ ಪಾಠಶಾಲೆಗೆ ಹೋಗಿ ಷಣ್ಮುಖನನ್ನು ಗದ್ದುಗೆಯಲ್ಲಿ ಕುಳ್ಳಿರಿಸಿ ಅಕ್ಷರಾಭ್ಯಾಸ ಮಾಡಿಸುವ ಸಲುವಾಗಿ ವರ್ಣಬೀಜವಾದ ಓಂಕಾರವನ್ನು ಬರೆದು ತೋರಿಸಿದೆನು. ಒಡನೆ ನನ್ನ ಕೈಹಿಡಿದು ಷಣ್ಮುಖನು ಅದರ ಅರ್ಥವನ್ನು ಕೇಳಿದನು. ಬರೆಯುವುದಕ್ಕೆ ಮೊದಲು ಅರ್ಥವನ್ನು ಕೇಳುವುದು ಹಿರಿತನವಲ್ಲ, ಓದು ಎಂದ ನನ್ನನ್ನು ಗದರಿಸಿ ಕಶಾದಂಡದಿಂದ ಹೊಡೆದನಯ್ಯ. ಹುಟ್ಟಿದ ಏಳು ದಿವಸದಲ್ಲಿ ತಾರಕಾಸುರನ ಕೊಂದ ಮಹಾಶೂರನು ನನ್ನನ್ನು ಲೆಕ್ಕಿಸುವನೆ? ಮೇಲಾಗಿ ಒಡೆಯನ ಕುಮಾರಕ, ಬಾಯಲ್ಲಿ ಬಲ್ಲಿದ; ಕಡೆಗೆ ಇನ್ನೇನು ಮಾಡುವನೊ ಎಂದು ನಾನು ಅಂಜಿ ಹನ್ನೆರಡು ಸಾವಿರ ಶ್ಲೋಕ ಸಮೂಹದಿಂದ ಪ್ರಣವದ ಅರ್ಥವನ್ನು ಈತನಿಗೆ ತಿಳಿಸಿದೆನು. ಜಡಮತಿಯೆ ತೊಲಗೆಂದು ನನ್ನನ್ನು ನಿಂದಿಸಿ ನಿಮ್ಮ ಸಮ್ಮುಖದಲ್ಲಿ ಬಂದು ಕುಳಿತಿರುವನು. ಎಲೆ ವೃಡ, ಓಂಕಾರದ ವಿಶೇಷಾರ್ಥವನ್ನು ನಾನರಿಯೆ, ತಿಳಿಯಹೇಳೆಂದು ಬ್ರಹ್ಮನು ಬೇಡಲು ಶಿವನು ಪ್ರಮಥರೆಲ್ಲರೂ ಆನಂದಿಸುವಂತೆ ಹನ್ನೆರಡು ಲಕ್ಷ ಶ್ಲೋಕಗಳಿಂದ ಪ್ರಣವದ ಅರ್ಥವನ್ನು ತಿಳಿಸಿದನು. ಅದನ್ನು ಕೇಳುತ್ತಿದ್ದ ಕುಮಾರನು ಕೈಮುಗಿದು ತಂದೆಯನ್ನು ಕುರಿತು ಗಂಗಾಕಾಂತನೇ, ಬ್ರಹ್ಮನನ್ನು ಜಡನೆಂದು ಕರೆದುದು ನನ್ನ ಅಪರಾಧ ಎಂದು ವ್ಯಂಗ್ಯವಾಗಿ ನುಡಿದನು. ಈ ಕಟಕಿ ಜೇಡ, ಪ್ರಣವಕ್ಕೆ ಹಾಗಾದರೆ ಎಷ್ಟರ್ಥಗಳಿವೆ ಉಸಿರು ಎಂದು ಬೆದರಿಸಿ ಕೇಳಿದ ಶಿವನಿಗೆ ಮಹಾಕೋಟಿ ಹನ್ನೆರಡು ಎಂದು ಕುಮಾರನು ಒಡನೆ ಉತ್ತರವಿತ್ತನು. ಆಗ ಈ ಸಂಗತಿ ಯಾವಾಗ ನನ್ನ ನಾಲಗೆಯಿಂದ ಹೊರಬಿದ್ದು ಈತನಿಗೆ ತಿಳಿಯಿತೆಂದು ಪಿನಾಕಿ ಚಿಂತಿಸತೊಡಗಿದನು.

ಹಿಂದೆ ಕೋಟ್ಯನುಕೋಟಿ ಯುಗದಲ್ಲಿ ಜಲಪ್ರಾಣಿಯೊಂದನ್ನೂ ಇರಗೊಡದೆ ಸಾಗರಮಧ್ಯದಲ್ಲಿ ಏಕಾಂತವಾಗಿ ತಾನು ಪಾರ್ವತಿಗೆ ಪ್ರಣವದ ಅರ್ಥವನ್ನು ತಿಳಿಸುವಾಗ ದುಂಬಿಯಾಗಿ ಆ ತನ್ನ ಮಾತೆಯ ನವಿಲ್ಮುಡಿಯ ಪುಷ್ಪವಲ್ಲಡಗಿ ಕಳ್ಳತನದಿಂದ ಕೇಳಿದನಲ್ಲವೆ ಎಂದರಿತು ಶಿವನು ಕುಮಾರನನ್ನು ಕುರಿತು, ಎಲೆ ಚಪಲನೆ, ಓಂಕಾರದ ಅರ್ಥಗಳನ್ನು ತಿಳಿಸು ಎಂದು ಅಪ್ಪಣೆ ಮಾಡಿದನು. 'ಗದ್ದುಗೆಯನಿಳಿ ತಂದೆ, ನಾಂ ಮೇಲಿರ್ದು ಪೇಳ್ವೆನ್' ಎಂದ ಕುಮಾರನ ಮಾತಿಗೆ ಕೆರಳಿ ಹದಿನಾರು ಸಾವಿರ ಜನ್ಮದಲ್ಲಿ ಹುಟ್ಟೆಂದು ಆತನಿಗೆ ಶಿವನು ಶಾಪವನ್ನಿತ್ತನು.

ಈ ವಿಷನ,ಶಾಪವನ್ನು ಕುಮಾರ ತಾಳಲಾರನೆಂದು ಹೇಳಿದ ಗಣಂಗಳನ್ನು ಹೆವರಿಸಿ ನೀವೂ ಈತನೊಡನೆ ಹುಟ್ಟಿರೆಂದು ಶಿವನು ಶಪಿಸಿದನು. ಜ್ವರದ ಮೊದಲಲ್ಲಿ ಹಾಲೂ ವಿಷ ಎನ್ನುವಂತೆ ದೇವ, ಮುಂಗೋಪದಲ್ಲಿ ನುಡಿದ ಈ ಶಾಪ ಉಚಿತವಾದುದಲ್ಲ; ಈ ಬಾಲಕನಿಂದ ಹದಿನಾರು ಸಾವಿರ ಸ್ತೋತ್ರ ಗೀತೆಗಳನ್ನು ಸ್ವೀಕರಿಸುವಂತಹ ಒಂದೇ ಒಂದು ಜನ್ಮ ಈತನಿಗೆ ಸಾಕು ಎಂದು ಅವರು ಬೇಡಿದರು. ಪಶುಪತಿಯು ನಗುತ್ತ ನನ್ನ ಭಕ್ತಗಣಂಗಳಾದ ನಿಮಗೆ ಶಾಪವುಂಟೆ? ಭೂಲೋಕವನ್ನು ಪಾವನ ಗೊಳಿಸುವ ಪ್ರಯೋಜನಕ್ಕಾಗಿ ಹುಟ್ಟಿ ಭಕ್ತಸಮೂಹದ ನಡೆನುಡಿಗಳನ್ನು ತಿದ್ದಿರೆಂದು ಅವರಿಗೆ ಹೇಳಿ, ಬ್ರಹ್ಮನನ್ನು ವಾಗೀಶನಾಗುವಂತೆಯೂ ಷಣ್ಮುಖನನ್ನು ತಿರುಜ್ಞಾನ ಸಂಬಂಧಿಯಾಗುವಂತೆಯೂ ನೇಮಿಸಿ ಕಳುಹಿಸಿದನು.

ಶ್ರೀಕಾಳಿಯಲ್ಲಿ ಶೈವಬ್ರಾಹ್ಮಣನ ಸುತನಾಗಿ ಜನಿಸಿದ ಜ್ಞಾನಸಂಬಂಧಿಯಾದ ಕುಮಾರನು ತಮಿಳುನಾಡಿನಲ್ಲಿ ಶಿವಭಕ್ತಿಯ ಮಹಿಮೆಯನ್ನು ಮೆರೆದನು. ಕೂನ ಪಾಂಡ್ಯನ ಮಂತ್ರಿಯಾದ ಕುಲಚ್ಚರೆಗೆ ಆ ಶೈವಾಚಾರ್ಯನು ಪಂಚಾಕ್ಷರಿಯ ಮಹಿಮೆ ಯನ್ನು ತಿಳಿಸುವ ಸಲುವಾಗಿ ಸತ್ಯೇಂದ್ರಚೋಳನ ಕಥೆಯನ್ನು ಹೇಳಲಾರಂಭಿಸಿದನು.

ಭಾರತವರ್ಷದ ನಾನಾ ದೇಶಗಳ ಭಾಗ್ಯನಿಧಿಯೆನಿಸಿ ಮೆರೆಯುವ ಚೋಳ ದೇಶದಲ್ಲಿ ಎಲ್ಲಿ ನೋಡಿದರೂ ನದಿ, ಕೆರೆ, ತೊರೆ, ಕಾಲುವೆ, ಉಪವನ, ಗುರುಕುಲ, ಅಗ್ರಹಾರ, ಕವೀಶ್ವರರ ರಾಜಧಾನಿಗಳೇ ತುಂಬಿದ್ದುವು. ತುಂಬಿ ಹರಿಯುವ ಕಾವೇರಿಯ ಇಕ್ಕೆಲದಲ್ಲಿಯೂ ಬತ್ತದ ಗದ್ದೆಯ ಸಾಲುಗಳು ಕಂಗೊಳಿಸುತ್ತಿದ್ದುವು. ಆ ನಾಡಿನ ಸೈಪಿನ ಕರಂಡದಂತಿದ್ದ ಧರ್ಮವತಿಯೆಂಬ ಹಿರಿಯ ಪಟ್ಟಣವು ಪುಣ್ಯ, ನೀತಿ, ಸನ್ಮಾರ್ಗ, ಜಾಣ್ಮೆ, ಸಾಮರ್ಥ್ಯ, ಧರ್ಮಗಳಿಗೆ ನೆಲೆಯಾಗಿದ್ದಿತು. ಆ ಪಟ್ಟಣದಲ್ಲಿ ಆಳುತ್ತಿದ್ದ ಅರಸೇ ಸತ್ಯೇಂದ್ರಚೋಳ. ರೂಪಿನಲ್ಲಿ ರತಿಯನ್ನೂ, ಪ್ರೌಢಿಯಲ್ಲಿ ಸರಸ್ವತಿಯನ್ನೂ, ಪತಿಭಕ್ತಿಯಲ್ಲಿ ಅರುಂಧತಿಯನ್ನೂ ಮೀರಿಸುವ ಅಮೃತವತಿಯೇ ಆತನ ಸತಿ. ಶಿವತತ್ತ್ವದಲ್ಲಿ ನೆಲಸಿದ ಪ್ರಣವದಂತೆ ನಿಷ್ಠಾವಂತನಾದ ಪತಿಮೋಹಿಯೇ ಆತನ ಮಂತ್ರಿ.

ಒಂದು ದಿನ ಸತ್ಯೇಂದ್ರಚೋಳ ಮಹಾರಾಜನು ಕಾಶಿಗೆ ಹೋಗಿ ಅಲ್ಲಿ ಶಿವನಿಗೆ ಭಾಗೀರಥಿಯ ಪಾವನೋದಕದಿಂದ ಅಭಿಷೇಕವನ್ನು ಮಾಡಬೇಕೆಂದು ಬಯಸಿ

ಭೇರೀನಿನಾದದಿಂದ ಘೋಷಿಸಿದನು. ಬಂದ ಮಂತ್ರಿಯು ರಾಜನ ಮುಂದೆ ಮಣಿದು ಕೈಮುಗಿದು ಜೀಯ, ನೀವಿದ್ದ ಮಂದಿರವೇ ಕಾಶಿ, ಆ ಗಂಗಾ ತೀರ್ಥ ಇಲ್ಲಿಗೇ ಬರುವುದು ಎಂದು ಹೇಳಿ ಸಾಮಂತ ರಾಜರನ್ನು ಧರ್ಮವತಿಯಿಂದ ಗಂಗಾನದಿಯುವರೆಗೂ ನಿಲ್ಲಿಸಿ ಗಂಗಾಜಲ ತುಂಬಿದ ಚಿನ್ನದ ಕೊಡವನ್ನು ಒಬ್ಬರಿಂದೊಬ್ಬರಿಗೆ ಹೊರಿಸಿ ತರಿಸಿದನು. ಆ ಗಂಗೆಯಿಂದ ಶಿವನಿಗೆ ಅಭಿಷೇಕ ಮಾಡಿ ಪೂಜೆಯನ್ನು ಸಲ್ಲಿಸಿದ ರಾಜನ ಸೇನಾ ಬಲವನ್ನು ಎಣಿಸಲು ಯಾರಿಗೆ ಸಾಧ್ಯ ?

ಹೀಗೆ ಭಕ್ತಿಸಂಪನ್ನನಾಗಿಯೂ ಸಮರ್ಥನಾಗಿಯೂ ಸತ್ಯೇಂದ್ರಚೋಳನು ರಾಜ್ಯ ಭಾರಮಾಡುತ್ತಿದ್ದಾಗ ಒಮ್ಮೆ ಆತನ ಗುರು ಚಿದ್ಘನಶಿವಾಚಾರ್ಯರು ಬಂದರೆಂಬ ಕಹಳೆಯ ಕೂಗು ಕೇಳಿಬಂತು. ಮದ್ಗುರುಸ್ವಾಮಿ ಬಿಜಯಂಗೈದರೆಂದು ರಾಜನು ಸಂಭ್ರಮದಿಂದ ಶರಣರೊಡನೆ ನಡೆದುಹೋಗಿ ಗುರುವನ್ನು ವಂದಿಸಿ ಅರಮನೆಗೆ ಕರೆ ತಂದನು. ನಮಿಸಿದ ರಾಣಿಯನ್ನು ಗುರು ಹರಸಿ ಸಿಂಹಾಸನದಲ್ಲಿ ಮಂಡಿಸಿ ಶಿಷ್ಯನಾದ ಸತ್ಯೇಂದ್ರನನ್ನು ನಿನಗೇನಿಷ್ಟವೆಂದು ಕೇಳಿದನು. ಅದಕ್ಕೆ ರಾಜನು ನಿಮ್ಮ ಪಾದ ದರ್ಶನದಿಂದ ಪಾಪದೂರನಾದೆನು ; ನಿಮ್ಮ ಕೃಪೆಗಿಂತಲೂ ನನಗೆ ಬೇಕಾದುದೇನಿದೆ ? ನಿಮ್ಮ ನಿರ್ಮಲ ಬೋಧೆಯನ್ನು ಕೇಳಬೇಕೆಂದಿದ್ದೇನೆ ಎಂದು ಹೇಳಲು, ಚಿದ್ಘ ನಾಚಾರ್ಯರು ಶಿವನ ಲೀಲೆಗಳನ್ನು ವಿಸ್ತರಿಸಿ ಶಿವತತ್ತ್ವ ಸ್ವರೂಪವನ್ನು ಉಪದೇಶಿಸಿದರು. ಆ ಬಳಿಕ ನನ್ನ ಪಾರಮಾರ್ಥ್ಯದ ದಾರಿದ್ರ್ಯ ಹರಿದುಹೋಗುವುದಕ್ಕೆ ಏನು ದಾರಿ ಯೆಂದು ರಾಜನು ಚಿತ್ಕಾಂತಗುರುವನ್ನು ಕೇಳಲು ಶಿವಾಗಮದ ಹಾದಿಯಲ್ಲಿ ನಡೆದು ಪರವಸ್ತುವನ್ನು ಕಂಡ ಪುರಾತನರ ಪಾದವಿಡಿದು ಬದುಕೆಂದು ಆತನು ಬೋಧಿಸಿದನು.

ಹಾಗೆ ಗುರುವಿನಿಂದ ಪತಿ ಉಪದೇಶವನ್ನು ಪಡೆಯುತ್ತಿದ್ದಾಗ ಅಮೃತವತಿಯು ತನ್ನ ಅಭೀಷ್ಟವನ್ನು ಗುರುಕೃಪೆಯಿಂದ ಪಡೆಯುವೆನೆಂಬ ಬಯಕೆಯನ್ನು ತನ್ನ ಕೆಳದಿಗೆ ತಿಳಿಸಿದಳು. ಹಿಂದೆ ತಾನು ಪತಿದ್ರೋಹಿಯ ಮುದ್ದು ಮಗನನ್ನು ತನ್ನ ಮಗನೆಂದೇ ಬಗೆದು ಸಲಹುತ್ತಿದ್ದೆನು ; ತೆಲ್ಲಿಗ ಕಲ್ಲಿಸೆಟ್ಟಿ ರೇವಣದೇಶಿಕೇಂದ್ರನ ಪಾದ ಸ್ಮರಣೆಯಿಂದ ಹಿಂದಿದ್ದ ಒಂದು ಕಣ್ಣಿಗೆ ಸಮನಾದ ಮತ್ತೊಂದು ಕಣ್ಣನ್ನು ಪಡೆದ ರೀತಿಯಲ್ಲಿ ಇಂದು ನನ್ನ ಗರ್ಭದಲ್ಲಿ ಮಗನನ್ನು ಪಡೆಯುವೆನೆಂದು ಆನಂದಹೊಂದಿದ ಅಮೃತವತಿ ಚಿದ್ಘನಶಿವಾಚಾರ್ಯರನ್ನು ವಂದಿಸಿ ಪುತ್ರವರವನ್ನು ಬೇಡಿದಳು.

ತಾಂಬೂಲಪ್ರಸಾದದೊಡನೆ ರಾಣಿಯ ಇಷ್ಟಸಿದ್ಧಿಯನ್ನು ಗುರು ಕರುಣಿಸಿ ಸಕಲ ಸತ್ಕಾರಹೊಂದಿ ಗಣಸಮೂಹದೊಡನೆ ತನ್ನ ನಿವಾಸಸ್ಥಳಕ್ಕೆ ಹಿಂತಿರುಗಿದನು.

ಇತ್ತ ಚೋಳರಾಜನು ಶಿವಪೂಜೆಯನ್ನು ಮಾಡುತ್ತ ಶಿವಶರಣ ಗೋಷ್ಠಿಯ ಸುಖದಲ್ಲಿ ಮುಳುಗಿ ಪೌರಾಣಪ್ರಸಂಗದಲ್ಲಿ ಓಲಾಡುತ್ತ ಸತೀಸಮೇತನಾಗಿ ಚರಸೇವೆ ಯನ್ನು ಮಾಡಿ ಐವತ್ತಾರು ದೇಶದರಸರಿಗೆ ಅರಸನಾಗಿ ರಾಜ್ಯಭಾರ ಮಾಡುತ್ತಿದ್ದನು. ಆ ರಾಜರಾಜನ ಕೀರ್ತಿವಾನಿನಿ ವಿಲಾಸದಿಂದ ಶಿವನ ಭುಜಬಲದಂತೆ ದಶದಿಕ್ಕಿನಲ್ಲಿಯೂ ಸಂಚರಿಸಿದಳು.

ಗುರುಕಾರುಣ್ಯದಿಂದ ಗರ್ಭವತಿಯಾಗಿದ್ದ ಅಮೃತವತಿಗೆ ಗಂಡು ಮಗುವಾಯಿ ತೆಂಬ ಶುಭವಾರ್ತೆ ಹಬ್ಬಿತು. ಚಿದ್ಘನಾರ್ಯರು ಮಗುವಿಗೆ ಲಿಂಗೋಪದೇಶ ಮಾಡಿ ಮಂತ್ರಲಕ್ಷನೆಂದು ಹೆಸರಿಟ್ಟರು. ಮಗು ಬೆಳೆಯಿತು. ಮಂತ್ರಿಕುಮಾರನಾದ ಮಿತ ವಚನನೊಡನೆ ಸಮಾನ ಪ್ರೇಮದಿಂದ ಆ ತಾಯಿ ಸಲಹಲು ಕುಮಾರಕರು ದಿನೇ ದಿನೇ ವೃದ್ಧಿಯಾಗುತ್ತಿರಲು ವಸಂತ ಸಮಯ ಬಂದಿತು.

ವಸಂತನ ಒಲವಿನಿಂದ ಶಿವನನ್ನು ಪೂಜಿಸುವೆನೆಂದು ಸತ್ಯೇಂದ್ರನು ವನವನ್ನು ಪ್ರವೇಶಿಸಿದನು. ಪೂಜಾಕಾಲದಲ್ಲಿ ಭಾವಕಿಯರು ಶಿವನಿಗೆ ಸೋತ ಅಸ್ತ್ರಸಂಕುಲವನ್ನು ಮನ್ಮಥಮಹಾವೀರನಟ್ಟಿದನೆಂದು ಹೇಳಿ ಕಮಲವೇ ಮೊದಲಾದ ಪುಷ್ಪಗಳನ್ನು ನೀಡು ತ್ತಿದ್ದರು. ಸರ್ವಾಂಗಭಸಿತನೂ ತ್ರಿಪುಂಡ್ರಧಾರಿಯೂ ಆದ ರಾಜನು ಆಗಮಕ್ರಮ ದಿಂದ ರುದ್ರಾಕ್ಷಿಯನ್ನು ಧರಿಸಿ ಪಂಚಾಕ್ಷರಿಯನ್ನು ಜಪಿಸುತ್ತ ಲಿಂಗಪೂಜಾ ನಿರತ ನಾಗಿದ್ದನು.

ವಸಂತೋತ್ಸಾಹವನ್ನು ಶಿವಭಕ್ತಿಯ ಸುಖದಲ್ಲಿ ಕಳೆದು ಪಟ್ಟಣಕ್ಕೆ ಹಿಂತಿರುಗು ತ್ತಿದ್ದಂತೆಯೇ ಸಿಂಹಳರಾಜನಿಗೂ ತನ್ನ ಸಾಮಂತನಾದ ಕಾಳಮೇಘನಿಗೂ ಉಂಟಾದ ಭೀಕರ ಕಾಳಗದ ವೃತ್ತಾಂತ ಸತ್ಯೇಂದ್ರನಿಗೆ ತಿಳಿಯಿತು. ಆತನು ಕಪ್ಪವನ್ನು ಕೊಡದಿದ್ದ ಆ ಸಿಂಹಳರಾಜನ ಮೇಲೆ ತಾನೇ ಕಾಳಗ ನಡಸಬೇಕೆಂದು ಯತ್ನಿಸುತ್ತಿರು ವಲ್ಲಿ ಮಂತ್ರಿ ಬಂದು ಪಕ್ಷಿಗೇತಕೆ ಪಾಶುಪತ ? ನಾನೇ ಸೋಲಿಸಿಬರುವೆನೆಂದು ದಂಡೆತ್ತಿ ಹೊರಟನು. ಸೋತ ಸಿಂಹಳದ ಸೇನೆ ಹಿಮ್ಮೆಟ್ಟಿತು. ಅದನ್ನು ಕಂಡ ಸಿಂಹಳದರಸು

ಕಟ್ಟಿರಸರೊಡನೆ ವೈರವೇಕೆಂದು ತನ್ನ ಕುಮಾರಿಯರಿಬ್ಬರನ್ನು ಮಣಿವಸ್ತ್ರಗಜತುರಗ ಸಹಿತ ಆ ಸತ್ಯೇಂದ್ರನ ಮಂತ್ರಿಗೊಪ್ಪಿಸಿ ಒಡನೆಬಂದನು. ರಾಜನು ಆ ಸಿಂಹಳದರಸನನ್ನು ಮನ್ನಿಸಿ ಆತನ ಕುಮಾರಿಯರಾದ ಕಮಳೆಯನ್ನು ಮಿತವಚನನಿಗೂ, ಕುಮುದಿನಿಯನ್ನು ಮಂತ್ರಲಕ್ಷನಿಗೂ ಕೊಟ್ಟು ವಿವಾಹ ನಡಸಿದನು. ಸಿಂಹಳದೇಶದರಸು ಸನ್ಮಾನಿತನಾಗಿ ತನ್ನ ದೇಶಕ್ಕೆ ಹಿಂತಿರುಗಿದನು.

ಒಂದು ದಿನ ಸತ್ಯೇಂದ್ರಚೋಳನು ವೈಭವದಿಂದ ಓಲಗಗೊಟ್ಟಿರಲು ಸಿಂಧು ದೇಶದ ರಾಜನು ಬಂದು ಕಾಣಿಕೆಯಾಗಿ ಎರಡು ಕುದುರೆಗಳನ್ನು ಒಪ್ಪಿಸಿದನು. ಅವುಗಳನ್ನು ರಾಜನು ಪ್ರೀತಿಯಿಂದ ತನ್ನ ಕುಮಾರರಿಗೆ ಕೊಟ್ಟನು. ಮಾರನೆಯ ದಿನ ಅಶ್ವಪರೀಕ್ಷಕರು ರಾಜಕುಮಾರರ ಕುದುರೆಗಳನ್ನು ನೋಡಿ ಅವುಗಳ ಸುಲಕ್ಷಣವನ್ನು ಕೊಂಡಾಡಿದ ನುಡಿಗಳನ್ನು ಕೇಳಿ ಮಂತ್ರಲಕ್ಷನು ನಗೆಮೊಗದಿಂದ ಅಣ್ಣನಾದ ಮಿತವಚನನನ್ನು ಕುರಿತು ನಾವಿಬ್ಬರೂ ಇವುಗಳನ್ನು ಹತ್ತಿ ವೈಹಾಳಿ ಹೋಗಬೇಕು ಎಂದು ನುಡಿದನು. ತಮ್ಮನ ಆ ಮಾತಿಗೆ ಕುದುರೆಗಳನ್ನು ಪಳಗಿಸದೆ ಹತ್ತಬಾರದು; ಮುಂದಣ ಆಗುಹೋಗುಗಳನ್ನು ನೀನರಿಯೆ. ತಂದೆಯಾದರೊ ಉಳಿದ ರಾಜರಂತೆ ನಾರಿಸುತಮೋಹಿಯೆ? ಸಕಲ ಸೌಭಾಗ್ಯವಂತನಾದರೂ ಮಹಾಜ್ಞಾನಿ. ಭಕ್ತರಿಗೇನಾದರೂ ನಮ್ಮಿಂದ ತೊಂದರೆಯಾದರೆ ನಮ್ಮನ್ನು ರಾಜನು ಮನ್ನಿಸನು ಎಂದು ಮಿತವಚನನು ಬುದ್ಧಿ ಹೇಳಿದನು. ಬುದ್ಧಿಮಾತನ್ನು ಕೇಳಿದ ಮಹಿಮುದುಂಟು; ನೀನದನ್ನರಿತು ನಡೆಯಬೇಕೆಂದ ಅಣ್ಣನ ಮಾತಿಗೆ ನೀನು ಧೈರ್ಯಗೆಡದೆ ಇದ್ದು ತಂದೆಗೆ ಸೈರಿಸೆಂದು ಹೇಳಿದರೆ ಆತನೆಂದಿಗೂ ಕೋಪಗೊಳ್ಳನು ಎಂದು ಮಂತ್ರಲಕ್ಷನು ತನ್ನ ಉತ್ಸಾಹವನ್ನೇ ಮುಂದುಮಾಡಿದನು. ಶಿವಭಕ್ತರಿಗೆ ತನ್ನವರು ಎಂಬ ಮೋಹವುಂಟೆ? ಅಪರಾಧಿಗಳು ಯಾರೇ ಆಗಲಿ ಅವರನ್ನು ಶಿಕ್ಷಿಸದೆ ಬಿಡುವರೆ? ಎಂದು ಮಿತವಚನನು ಎಚ್ಚರಿಸಿದನು. ಶಿವನು ಯಕ್ಷರೂಪದಲ್ಲಿ ಇಟ್ಟ ಹುಲ್ಲನ್ನು ಬ್ರಹ್ಮ, ವಾಯು ಇಂದ್ರರೇ ಮೊದಲಾದ ದೇವತೆಗಳು ಬಲಪ್ರಯೋಗದಿಂದ ಅಲುಗಿಸಲಾಗಲಿಲ್ಲ.* ಆ ಶಿವನ ಭಕ್ತರಿಗೆ ತಾಪತ್ರಯವುಂಟೆ ಎಂದು ನಿಶ್ಚಯಿಸಿ ಮಂತ್ರಲಕ್ಷನು ವೈಹಾಳಿ ಬೇಡವೆಂದರೆ ನಿಲ್ಲೆನು; ಮುಂದಾಗುವುದನ್ನು ತಿಳಿಯಲುಬಾರದು; ಇಂದು ನಿನ್ನಿಂದಾದ ತಪ್ಪು ಅದು ನನ್ನದು. ಸಂದೇಹಬೇಡ, ನಡೆ ಎಂದು ಅಣ್ಣನನ್ನು ಒಪ್ಪಿಸಿ ಸೇನಾಸಮೇತ ವೈಹಾಳಿ ಹೊರಟನು;

---

*ಕೇನೋಪನಿಷತ್ತನ್ನು ನೋಡಿ.

ಪಟ್ಟಣದ ಹೊರಗೆ ವೈಹಾಳಿಯ ಉತ್ಸಾಹವನ್ನು ಮೆರೆದು ರಾಜಕುಮಾರರು ಹಿಂತಿರುಗುತ್ತಿದ್ದರು. ತುಂಬಿದ ಸೇನೆ ಬೀದಿಯಲ್ಲಿ ಬರುತ್ತಿತ್ತು. ಅದರ ಮಧ್ಯೆ ಇದ್ದ ರಾಜಕುಮಾರರನ್ನು ನೋಡಲು ಜನರು ಎಲ್ಲೆಲ್ಲೂ ಕಿಕ್ಕಿರಿದು ನಿಂತಿದ್ದರು. ಈ ಮಧ್ಯೆ ಎಂದಿನಂತೆ ಲಿಂಗವಂತರ ಮನೆಗೆ ನೀರು ತುಂಬುತ್ತಿದ್ದ ತಿರುಕೊಳವಿನಾಚಿ ಎಂಬ ಒಬ್ಬ ಶಿವಭಕ್ತೆ ತುಂಬಿದ ಕೊಡವನ್ನು ಹೊತ್ತು ಹೊರಟಿದ್ದಳು. ಬೇಡವೆಂದರೂ ಬಿಡದೆ ಹಿಂದೆಯೇ ಬಂದ ಕುಮಾರನೊಡನೆ ಮನೆಗೆ ಬಂದು ನೀರನ್ನು ಒಳಕ್ಕೆ ತೆಗೆದು ಕೊಂಡು ಹೋದಳು. ಆಗ ಕೇಳಿಬಂದ ಸೇನೆಯ ವಾದ್ಯ ಬಾಲಕನ ಗಮನವನ್ನು ಸೆಳೆಯಿತು. ನಡುಬೀದಿಗೆ ಓಡಿಬಂದು ಕವಿದುಬರುವ ಸೇನೆಯನ್ನು ಕಂಡು ಬಾಲಕ ಬೆರಗಾಗಿ ನಿಂತನು. ಒಡನೆ ಗುಂಪುಗೂಡಿ ಬಹು ವೇಗದಿಂದ ಬಂದ ಪಡೆಯ ತಡೆಗಾಲಿಗೆ ಸಿಕ್ಕಿ ಮಗು ನೆಲದ ಮೇಲೆ ಬಿದ್ದಿತು. ತ್ವರೆಯಿಂದ ಬರುತ್ತಿದ್ದ ಮಂತ್ರಲಕ್ಷನು ಆ ಕುಮಾರನನ್ನು ಕಂಡು ನಿಡುದನಿಯಿಂದ ಅಬ್ಬರಿಸಿ ತನ್ನ ಕುದುರೆ ಯನ್ನು ದಾಟಿಸಿದನು. ಅದನ್ನು ನೋಡಿ ಕೈಯೂರಿ ಬಾಲಕನು ಮೇಲೆ ಏಳುತ್ತಿರುವಲ್ಲಿ ಒಡನೆ ಹತ್ತಿರಕ್ಕೆಬಂದ ಮಿತವಚನನ ಕುದುರೆ ಕಾಲುಜೋಡಿಸಿ ದಾಟಿತು ಎನ್ನುವುದರಲ್ಲಿ ಮಗು ಸಿಕ್ಕಿ ಬಿದ್ದಿತು. ಕುದುರೆಯ ಕಾಲ್ಗೊರಸು ಮಗುವಿನ ಕೊರಲನ್ನು ಮೆಟ್ಟಿ ದೊಡನೆ ಪುಟನೆಗೆದ ತಲೆ ಧರೆಗುರುಳಿ ಬಿದ್ದಿತು. ಅದನ್ನು ಕಂಡ ರಾಜಕುಮಾರರು ಶಿವಭಕ್ತವಧೆಯಾಯಿತು, ಇದರ ಮರ್ಮವನ್ನು ಶಿವನೇ ಬಲ್ಲ ; ಕೈಮೀರಿತೆಂದರೆ ಕೈಲಾಸವನ್ನು ಸೂರೆಮಾಡದೆ ಬಿಡೆವೆಂದು ಧೈರ್ಯ ತಂದುಕೊಂಡು ಅರಮನೆಯನ್ನು ಸೇರಿದರು. ಪೌರಜನರ ಗೋಳು ಹೇಳತೀರದಾಯಿತು. ಶಿವದ್ರೋಹವನ್ನು ಕೇಳಿ ರಾಜನು ಏನು ಮಾಡುವನೋ ಎಂದು ಚಿಂತಿಸಿ ಆ ಪೌರರು ಅಚ್ಚರಿಗೊಂಡಿದ್ದರು.

ಅಂಗಳದಲ್ಲಿ ಆಡುತ್ತಿದ್ದ ಮಗುವನ್ನು ಕಾಣದೆ ಹೆದರಿ ನಾಲ್ಕು ದಿಕ್ಕುಗಳನ್ನೂ ನೋಡಿ ಮೈಮರೆತು ಶೋಕಿಸುತ್ತ ಮಗನ ಹೆಸರು ಹಿಡಿದು ಶಂಕರಾ, ಮಗನೇ ಮಗನೆ ಎಂದು ಕೂಗಿ ಕರೆಯತೊಡಗಿ ಬೀದಿಯಲ್ಲಿ ಹೊರಟಳು. ಮೊದಲೆ ಮರುಗುತ್ತಿದ್ದ ಜನರು ಆಕೆಯೇ ಆ ಮಗುವಿನ ತಾಯಿಯಾಗಿರಬೇಕೆಂದುಕೊಂಡು ಎಲೆ ಅಮ್ಮ ಏಕೆ ಹಂಬಲಿಸುವೆಯೆಂದು ಕೇಳಿದರು. ನನ್ನ ಕಂದ ಈ ದಳದ ಕಡೆಗೆ ಬಂದನು. ಎಷ್ಟು ಹುಡುಕಿದರೂ ಕಾಣೆನಲ್ಲಾ ಎಂದು ಆಳುವ ಆಕೆಗೆ ಕೆಲವರು ಅರಸಿನ ಕುದುರೆಗೆ ಸಿಕ್ಕಿ ಒಂದು ಮಗು ಮಡಿಯಿತೆಂದು ಹೇಳಿ ಅದೇ ಗುಂಪು ಎಂದು ತೋರಿಸಿದರು. ಮುತ್ತಿದ್ದ

ಜನರನ್ನು ಬಗಿದು ಒಳಹೊಕ್ಕು ಕೋಡಿ ಹರಿಯುತ್ತಿರುವ ರಕ್ತವನ್ನು, ರುಂಡಮುಂಡ ಗಳನ್ನು ಕಂಡು ಹಾ ಕಂದಾ! ಹಾ ಮುದ್ದು ಮಗನೆ! ಕೆಟ್ಟೆನೆಂದು ಒರಲುತ್ತ ಆ ತಲೆಯನ್ನು ಎದೆಗಪ್ಪಿಕೊಂಡು ನೆಲದ ಮೇಲೆ ಬಿದ್ದು ಹೊರಳಾಡಿದಳು. ಆ ಚಲ್ವ ಕಂದನ ತಲೆ ಸಹಿತ ಸತ್ಯೇಂದ್ರ ಚೋಳನರನಾಥ ಶಿವದೋ ಎಂದು ಮೊರೆಯಿಟ್ಟು ಅರಮನೆಯ ಬಾಗಿಲಿಗೆ ಬಂದಳು. ಆ ಆರ್ತನಾದವನ್ನು ಕೇಳಿ ರಾಜನು ಆಕೆಯನ್ನು ಸಭಾಮಂಟಪಕ್ಕೆ ಬರಮಾಡಿದನು. ತನ್ನ ಮುಂದೆ ಕಂದನ ತಲೆಯನ್ನಿಟ್ಟು ಗೋಳಾಡುತ್ತಿದ್ದ ಆಕೆಯನ್ನು ಆರು ನೀನೆಲೆ ತಾಯಿ? ಪರಿದಿರ್ದ ತಲೆಯಾತನಾರು? ಚಲ್ವಣುಗನಂ ಕೊಂದ ದುಷ್ಕೃತ ಕರ್ಮಿ ಯಾರು? ಶಿವಶಿವ ಪೇಳ್ವುದೆಂದು ರಾಜನು ಮರುಗಿ ಕೇಳಿದನು. ತೊಡರಿದ ಕೋಟಿ ದುಃಖದಿಂದ ಆಕೆ ನುಡಿದ ನುಡಿ ಬಾಣದಂತೆ ಎದೆಗೆ ನಾಟಿತು. ಆ ಸತಿ ತನ್ನ ವೃತ್ತಾಂತವನ್ನು ಹೇಳತೊಡಗಿದಳು.

ದೇವ, ನಿಮ್ಮ ಈ ದೊಡ್ಡ ಪಟ್ಟಣದ ಸಮಸ್ತ ವರ್ತಕರಲ್ಲಿ ಸೂರ್ಯನ ಹೆಸರಿನ ಸೆಟ್ಟಿಯು ಶಿವಭಕ್ತಿ ಸಂಪನ್ನನಾಗಿ ಸಕಲಸಂಪತ್ತಿನಿಂದ ಶಿವಭಕ್ತರ ಸೇವೆಯೇ ಪ್ರಾಣವಾಗಿದ್ದವನು. ಆತನ ಸತಿ ನಾನು. ಬಾಳಿ ಬದುಕಿ ಆರು ಜನ ಗಂಡು ಮಕ್ಕಳನ್ನು ಪಡೆದೆ. ಆ ದೊಡ್ಡ ಭಾಗ್ಯವೇ ರಾಜಸಂಪತ್ತೆಂದು ತಿಳಿದು ಸುಖವಾಗಿದ್ದೆ. ನನ್ನ ಪತಿ ಒಂದು ದಿನ ಹಡಗಿನಲ್ಲಿ ತನ್ನಲ್ಲಿದ್ದ ವಸ್ತುಗಳನ್ನೆಲ್ಲ ತುಂಬಿಕೊಂಡು ವ್ಯಾಪಾರಕ್ಕಾಗಿ ಹೋದನು. ಹಡಗು ಒಡೆದು ನನ್ನ ಪತಿ ಸಮುದ್ರದಲ್ಲಿ ಮುಳುಗಿ ಹೋದನು. ಗಳಿಸಿದ ಸಿರಿಯೆಲ್ಲವೂ ನೀರಿನ ಪಾಲಾಯಿತು. ನಮ್ಮ ದುರದೃಷ್ಟದ ಬಹು ದುಃಖವನ್ನು ಕೇಳು. ನನ್ನ ಆರು ಮಂದಿ ಮಕ್ಕಳನ್ನು ನೋಡಿ ಜೀವ ಹಿಡಿದಿದ್ದೆ. ನನ್ನ ಪತಿ ಸಾಯುವ ವೇಳೆಗೆ ಮೂರು ತಿಂಗಳ ಗರ್ಭಿಣಿಯಾಗಿದ್ದ ನನಗೆ ಬಂದ ಬಡತನ ಅಷ್ಟಿಷ್ಟಲ್ಲ. ಆ ಮೇಲೆ ಬರಸಿಡಿಲಂತೆ ಬಂದ ನನ್ನ ದುಃಖವನ್ನು ಏನು ಹೇಳಲಿ. ಆರು ಮಕ್ಕಳೂ ಮಡಿದರು. ನನಗಿನ್ನೂ ಆಗ ಆರು ತಿಂಗಳು. ಮಕ್ಕಳು ಮಡಿದ ಶೋಕದಲ್ಲಿ ಹೊರಳುತ್ತಿದ್ದ ನನಗೆ ಕನಸಿನಲ್ಲಿ ಒಂದು ದಿನ ಶಿವನು ಕಾಣಿಸಿ ಕೊಂಡು ಎಲೆ ತಿರುಕೊಳವಿನಾಚಿ, ನಿನಗೆ ಸುಂದರನಾದ ಬಾಲಕನು ಹುಟ್ಟುವನು. ಆತನು ನಿನಗೆ ಮುಕ್ತಿಯನ್ನು ತೋರುವನು, ಚಿಂತಿಸದಿರು ಎಂದು ಸಂತೈಸಿದನು. ಶಿವನ ಅನುಗ್ರಹದಿಂದ ಈ ಸತ್ಪುತ್ರನನ್ನು ಪಡೆದೆ. ಕಡಲಿನ ಮಧ್ಯೆ ಮುಳುಗಿಹೋದ ಪತಿಯ ಚಿಂತೆಯನ್ನೂ ಸಿರಿ ಹೋಗಿ ಅಡಸಿದ ಬಡತನದ ಕಷ್ಟವನ್ನೂ ಆರು ಮಕ್ಕಳ ಸಾವಿನ ಬೇಗೆಯನ್ನೂ ಮರಸಿದ ಕಾರಣ ಈ ಮಗನಿಗೆ 'ಶಂಕರ' ಎಂದು ಹೆಸರಿಟ್ಟು

ನೀಸು ಹೆೊತ್ತು ಸಲಸುತ್ತಿದ್ದವಳು ನಾನು. ನಿನ್ನ ಮಕ್ಕಳು ಏರಿ ವಿನೋದಪಡುವ ಕುದುರೆಯ ಕಾಲಿಗೆ ಬಲಿಯಾಗಿ ಹೋದನೇ ಈ ಮುದ್ದು ಮಗನನ್ನು ? ಶಿವಾ ಎಂದು ಸಂಕಟಪಟ್ಟಳು. ಆಗ ರಾಜನು ಮಗುವಿನ ಮರಣ ಸುಮ್ಮನೆ ಹೋಗದು ನೋಡು ಎಂದು ಆಕೆಗೆ ತಿಳಿಸಿ ಕುಮಾರರನ್ನು ಒರವಮಾಡಿದನು.

ಶಿವಪೂಜೆಯನ್ನು ಮುಗಿಸಿ ಹೊರಟ ರಾಜಕುಮಾರರು ದೊರೆಯ ಮುಂದೆ ಕೈಮುಗಿದು ನಿಂತರು. ಕೋಪವುಕ್ಕುತ್ತಿದ್ದ ರಾಜನು ಅವರನ್ನು ಕುರಿತು ಅಪಕೀರ್ತಿ ಹರಡುವಂತೆ ಈ ಯೌವನದ ಸಂಪತ್ತಿನಲ್ಲಿ ಶಿವಭಕ್ತನನ್ನು ಕೊಂದಿರಿ. ಚಲು ಪಾಲಿನಲ್ಲಿ ವಿಷ, ಸಕ್ಕರೆಯಲ್ಲಿ ಕಹಿ, ಮುತ್ತಿನಲ್ಲಿ ಒಡಕು, ಸತ್ಯದಲ್ಲಿ ಅನೃತ, ಸುವಾಸನೆಯ ಹೂವಿನಲ್ಲಿ ಹುಳು, ಶಿವಾಚಾರದಲ್ಲಿ ದುರ್ನೀತಿ ನೆಲಸಿದಂತೆ ಹುಟ್ಟಿದಿರಿ. ಶಿವಭಕ್ತವಧೆಯಿಂದ ಲೋಕಹಾನಿಯಾಗುವುದು. ಆ ಹಾನಿಯಲ್ಲಿ ನಿಮ್ಮ ಸಾವು ಜಲಕಣದ ಕೋಟಿ ಭಾಗಕ್ಕೆಣೆಯಲ್ಲ; ಆ ಶಿಶುವಧೆಗೆ ಸಮನೆಂದರೆ ನರಕ ತಪ್ಪದು. ಈ ಕುಮಾರನನ್ನು ಕೊಂದವನಾರು? ಎಂದು ಪ್ರಶ್ನಿಸಿದನು. ಆಗ ಮಿತವಚನನು ವೈಹಾಳಿ ಹೋಗಿ ಹಿಂತಿರುಗುತ್ತಿದ್ದಾಗ ಎಡವಿಬಿದ್ದ ಈ ಬಾಲಕನನ್ನು ತಮ್ಮನ ಕುದುರೆ ದಾಟಿತು. ನನ್ನ ಕುದುರೆಯ ಗೊರಸಿನ ಗಾಯದಿಂದ ಬಾಲಕನು ಮಡಿದನು. ಅದರಿಂದ ನಾನು ಅಪರಾಧಿ. ನನ್ನನ್ನು ವಧಿಸುವುದೆ ಧರ್ಮವೆಂದು ಸತ್ಯವನ್ನೇ ನುಡಿದನು. ಹಾಗಾದರೆ ಪ್ರತಿಗೆ ಮಿತವಚನನ ತಲೆಗಡಿಯಬೇಕೆಂದು ರಾಜನು ಹೇಳಲು ಹರ್ಷದಿಂದ ಮಂತ್ರಲಕ್ಷನು ಮುಂದೆ ಬಂದು ಕೈಮುಗಿದು ತಂದೆಯೇ ಲಾಲಿಸು, ನನಗೂ ಅಣ್ಣನಿಗೂ ಚರ್ಚೆಯುಂಟು. ನನ್ನ ನಾಲಗೆ ಸುಳ್ಳಾಡಿತು ಎಂದರೆ, ಭೂದೇವಿಯನ್ನು ನರಕದಪಾಲುಮಾಡಿದೆನಾದರೆ ನನ್ನನ್ನು ಭೋಗಿಯೆಂದು ಆದಿಶೇಷನು ಮುಳಿಯನೆ? ಹುಸಿಗಿಂತ ಪಾತಕವಿಲ್ಲ. ಹೇಗೆ ತಾನೆ ಯಮನ ತಕ್ಕಡಿಯ ತೂಗುಮಣೆಯನ್ನೇರಿ ಅಲ್ಪನಾಗಲಿ? ಈ ದಿವಸ ವೈಹಾಳಿಗೆ ಹೋಗುವಾಗ ಅಣ್ಣನಿಗೆ ನಿನ್ನಿಂದ ಆದ ತಪ್ಪು ನನ್ನದೆಂದು ನುಡಿದೆ. ಅದರಿಂದ ಇಂದಿನ ಕೇಡು ನನ್ನಿಂದ. ಆ ಶಿವಭಕ್ತ ಶಿಶುವಿನ ತಲೆಗೆ ನನ್ನ ತಲೆಗಡಿದು ಸತ್ಕರಿಸಬೇಕು. ನೀನೆಂದಿಗೂ ಸಂಶಯಪಡಬೇಡವೆಂದು ಹೇಳಿದನು. ಹೀಗೆ ತನ್ನ ಪ್ರಾಣದ ಆಸೆಯನ್ನು ತೊರೆದು ಧೈರ್ಯದಿಂದ ಆಡಿದ ಮಗನ ಮಾತಿಗೆ ತಂದೆ ಸಂತೋಷದಿಂದ ತಪ್ಪು ಮಗನದೆಂದು ಆತನ ತಲೆಯನ್ನು ತರಿದು ತರುವಂತೆ ಮಂತ್ರಿಗೆ ಆಜ್ಞೆಮಾಡಿದನು. ಅಪ್ಪಣೆಯಂತೆ ಆಗಲೆಂದು ಪತಿದ್ರೋಹಿ ಮಂತ್ರಲಕ್ಷನನ್ನು ಪೂಜೆಮಾಡಿ ಬರುವಂತೆ

ಹೇಳಿ ಮನೆಗೆ ಹೋದನು. ಒಡೆಯನ ಆಜ್ಞೆಯನ್ನು ಮೀರಲಾರದೆ, ಕುಮಾರನನ್ನು ಕೊಲ್ಲಲಾರದೆ ಸತ್ಯಪಾಲನೆಗಾಗಿ ತನ್ನ ತಲೆಯನ್ನು ತಾನು ಕಡಿದುಕೊಂಡ ಮಂತ್ರಿಯನ್ನು ಜನರು ಕೊಂಡಾಡಿ ಆತನ ಸಾವಿಗೆ ಮರುಗುತ್ತಿದ್ದರು.

ಇತ್ತ ಮಂತ್ರಲಕ್ಷನು ಶಿವಪೂಜೆ ಮಾಡಿ ವಧ್ಯಸನ್ನದ್ಧನಾಗುತ್ತಿರುವನೆಂಬ ಸುದ್ದಿಯನ್ನು ಕೇಳಿ ತಾಯಿ ಅಮೃತವತಿ ಓಡಿಬಂದಳು. ಆಗ ಒಡನೆ ಬಂದು ನಮಿಸಿದ ಮಗನನ್ನು ಆಕೆ ಅಪ್ಪಿಕೊಳ್ಳಲು ಆ ತಾಯಿಯ ಮುಖವನ್ನು ನೋಡಿ ನನ್ನ ಕೊರಳನ್ನು ಕೊಯ್ಯುವಾಗ ನಿನ್ನನ್ನು ಮರೆಯುವೆನೆ? ಮಕ್ಕಳಿಲ್ಲದೆ ಚಿಂತಿಸಿ ಗುರು ಕರುಣೆಯಿಂದ ಬಾಲಕನನ್ನು ಪಡೆದು ನರುಜವ್ವನದಲ್ಲಿ ಸುಖವಾಗಿರಬೇಕಾದ ಕಾಲದಲ್ಲಿ ತಂದೆ ಕೇವಲ ನುಡಿಯ ತಪ್ಪಿಗೆ ತಲೆಗಡಿದನೆಂದು ನೋಯಬೇಡ, ತಾಯೆ. ನೀನು ಹಾಗೆ ನೊಂದರೆ ಧರ್ಮವತಿ ಯಮನಿಂದ ಬೆಂದಂತಾಗುವುದು. ಮರುಗಬೇಡವೆಂದು ತಾಯಿಗೆ ಅರಿಕೆಮಾಡಿದನು. ಆ ಮಾತನ್ನು ಕೇಳಿ ಮಗನನ್ನು ಮತ್ತೆ ಅಪ್ಪಿ ಕೇಳೆನ್ನ ಚಿನ್ನ, ಚಿಂತೆ ನನಗೇಕೆ? ಸತ್ಯಕ್ಕಾಗಿ ನನ್ನ ಪತಿ ಭಕ್ತನಿಗೆ ನಿನ್ನ ತಲೆಯೊಪ್ಪಿಸುವನು. ಹೆತ್ತಕಂದನನ್ನು ತವರೂರಿಗೆ ಕಳುಹಿಸುತ್ತಿದ್ದೇನೆ. ಹೆತ್ತವ್ವೆಯಾದ ಪಾರ್ವತಿಗೆ ಮುದ್ದುಗುಡು ಹೋಗು ಎಂದು ಸಂತೋಷದಿಂದಲೇ ಬೀಳ್ಕೊಟ್ಟಳು.

ಮಂತ್ರಲಕ್ಷನು ಬಂದು ನಮಸ್ಕರಿಸಿದುದನ್ನು ಕಂಡು ಸತ್ಯೇಂದ್ರಚೋಳನು ಈತನನ್ನು ವಧಿಸುವಂತೆ ಮಂತ್ರಿಗೆ ಆಜ್ಞೆಮಾಡಿದೆನು; ಆತನೇನು ಮಾಡಿದನೆಂದು ಪ್ರಶ್ನಿಸಲು ಸಭಿಕರು ನಡೆದ ಸಂಗತಿಯನ್ನು ಅರಿಕೆಮಾಡಿದರು. ಆಗ ರಾಜನು ತನ್ನ ಭೃತ್ಯನಾದ ಸಂದಾಯಿಯನ್ನು ಕರೆದು ಮಂತ್ರಲಕ್ಷನನ್ನು ಕೊಲ್ಲುವಂತೆ ನಿಯಮಿಸಿದನು. ಸಂದಾಯಿ ರಾಜಕುಮಾರನನ್ನು ತೋಳುಹಿಡಿದು ಬೀದಿಯಲ್ಲಿ ಹೊರಟನು. ಅದನ್ನು ನೋಡಿದ ಜನರ ಗೋಳಾಟ ಹೇಳತೀರದಾಯಿತು. ಆ ಸಿಂಧುರಾಜನಾದರೂ ಏಕೆ ಬಂದ? ಕಾಣಿಕೆಗೆ ಕುದುರೆಗಳನ್ನೇಕೆ ಕೊಟ್ಟ? ರಾಜನಾದರೂ ಅವನ್ನು ಮಕ್ಕಳಿಗೇಕೆ ಕೊಡಬೇಕಾಗಿತ್ತು? ಹೋಗಲಿ, ವೈಹಾಳಿ ಹೊರಟು ಸೊಬಗ ಮೆರೆಯುವ ಆ ಕೋಟಲೆ ಏಕೆ ಬಂದಿತು? ಆ ಯುವಕನ ಕುದುರೆಗೆ ಸಿಕ್ಕಿ ಕಿರುಗೂಸು ಏಕೆ ಮಡಿಯಿತು? ಇದರ ಆದಿಯನ್ನು ಬಸವರಾಜನೇ ಬಲ್ಲನೆಂದು ಹಲುಬಿದರು.

ಪುರದ ಬಹಿರುದ್ಯಾನಕ್ಕೆ ಬಂದು ಶಿವನನ್ನು ನೆನೆದು ವಧೆಯಾಗಲು ಕುಳಿತ ಮಂತ್ರಲಕ್ಷನನ್ನು ಎತ್ತಿದ ಕೈಯ ಖಡ್ಗದಿಂದ ಸಂದಾಯಿ ಪಂಚಾಕ್ಷರಿಯನ್ನು ಮರೆಯದಿರುವಂತೆ ಎಚ್ಚರಿಸಿದನು. ಮರೆತೂ ಈ ವೇಳೆಯಲ್ಲಿ ಆ ವರ್ಣಪಂಚಕದ ಮಂತ್ರ

ವನ್ನುಚ್ಚರಿಸೆನು; ಮಂತ್ರಿ ರಾಜನ ಆಜ್ಞೆಯನ್ನು ಮನ್ನಿಸದೆ ಮಡಿದನು; ನಿನ್ನ ಲೆಂಕತನವೂ ಹಾಗಾಗುವುದೆಂದು ಮಂತ್ರಲಕ್ಷನು ನುಡಿದನು. ಪ್ರಭುವಿನ ಆಜ್ಞೆಗೂ ನನ್ನ ಸೇವಕತನಕ್ಕೂ ಏಕೆ ಹಾನಿಬರುವುದೆಂದು ಸಂದಾಯಿ ಕೇಳಿದನು. ಈ ಪಂಚಾಕ್ಷರಿಯ ಮಂತ್ರವಾದರೂ ಸಕಲಕ್ಕೂ ಮೂಲಸ್ತಂಭವಾದುದು. ಇದರ ಬಲದಿಂದ ಖಡ್ಗ ಪುಟನೆಗೆಯುವುದು. ಇಲ್ಲದಿದ್ದಲ್ಲಿ ಹೂಮಾಲೆಯಾಗುವುದು ಎಂದು ಉತ್ತರವಿತ್ತ ರಾಜಕುಮಾರನಿಗೆ ಒಡೆಯನ ಆಜ್ಞೆಗೆ ಹಾನಿಯಾದರೇನು, ನನ್ನ ಭೃತ್ಯತೆ ಕೆಟ್ಟರೆ ಕೆಡಲಿ. ಮಹಾದೇವನನ್ನು ನೆನೆಯದೆ ಅಯ್ಯೋ ಬರುಗಾಯದಿಂದ ನೀನಳಿಯುವುದೇಕೆಂದು ಸಂದಾಯಿ ಮರುಗಿ ನುಡಿದನು. ಗಾದೆಯ ಮಾತೇಕೆ? ಗಾಯದಿಂದ ನಾನಳಿಯುವವನಲ್ಲ; ನನಗೆ ಮಂತ್ರಲಕ್ಷನೆಂಬ ಹೆಸರಾದುದನ್ನು ಈಗಲೇ ತೋರಿಸಿಕೊಡುವೆನು ನೋಡು ಎಂದು ರಾಜಕುಮಾರನು ಉತ್ತರವಿತ್ತನು. ಅದೋ ಅದೋ ಹೊಯ್ದನು, ತಲೆ ಬಿದ್ದಿತು. ಅಯ್ಯೊ ಅಯ್ಯೊ ಕೆಯ ಹಿಡಿ ಹಿಡಿ ಎಂದು ಮದನಾರಿಯನ್ನು ಪಾರ್ವತಿಯು ಕೂಗಿ ಮೊರೆಯಿಟ್ಟಳು. ಹೋ ಹೋ! ತವಕವೇತಕೌ? ಮುಂದೆ ಕಾರ್ಯನಿಷ್ಠೆಯನ್ನು ಕಾಣುವುದಿದೆ ನೋಡೆಂದು ಸಂತೈಸು ವಷ್ಟರಲ್ಲಿ ಸಂದಾಯಿ ಹೊಡೆದ ಕತ್ತಿಯು ಏಟಿಗೆ ಕುತ್ತಿಗೆ ಕತ್ತರಿಸಿ ತಲೆ ಹಾರಿತು. ಸಂದಾಯಿ ಒಡ್ಡಿದ ಕೈಯಲ್ಲಿ ಮಂತ್ರಲಕ್ಷನ ತಲೆ ಮಂಡಿಸಿ ಪಂಚಾಕ್ಷರಿಯನ್ನುಚ್ಚರಿಸಿತು. ರಾಜಸಭೆಗದನ್ನು ತಂದು ಸಂದಾಯಿ ಒಡೆಯನಿಗೊಪ್ಪಿಸಿದನು. ನಮಶ್ಶಿವಾಯ ವೆನ್ನುತ್ತಿದ್ದ ಆ ರಾಜಕುಮಾರನ ತಲೆಯನ್ನು ಕಂಡು ಪುರಜನ ಪರಿಜನರು ಶರಣೆಂದು ಮರುಗಿ ಕೀರ್ತಿಸಿದರು; ವಾದಿಗಳು ತಲ್ಲಣಿಸಿದರು; ಗಣಸಮೂಹ ಹೂಮಳೆಗರೆಯಿತು. ದೇವನಗಾರಿ ಮೊಳಗಿತು; ಶಿವಪಾರ್ವತಿಯರು ಆಕಾಶದಲ್ಲಿಯೇ ನೋಡುತ್ತ ನಿಂತರು.

ಪಂಚಾಕ್ಷರಿಯಲ್ಲಿಟ್ಟ ಮನದಿಂದ ಮಂತ್ರಲಕ್ಷನ ಈ ಮಸ್ತಕವು ಶಿವಮಂತ್ರ ವನ್ನು ಜಪಿಸುತ್ತಿದೆ. ಹೊಡೆದ ಬಗೆ ಹೇಗೆಂದು ರಾಜನು ಕೇಳಲು ಇದೇನು ಮೂದಲೆಯ ಮಾತಾಯಿತು ಎಂದು ನಡೆದ ಸಂಗತಿಯನ್ನು ವಿವರಿಸಿ ಸಂದಾಯಿ ತನ್ನ ತಲೆಯನ್ನು ತಾನೇ ಕತ್ತರಿಸಿಕೊಂಡು ಎಡಗೈಯಲ್ಲಿ ಧರಿಸಿದನು. ಅದು ಪಂಚಾಕ್ಷರಿಯನ್ನು ಘೋಷಿಸಿತು. ಕುಮಾರನನ್ನು ಕೊಲ್ಲಲಾರದೆ ಮಂತ್ರಿ ರಾಜಾಜ್ಞೆಯನ್ನು ಮೀರಿದನು. ರಾಜನ ಅಪ್ಪಣೆಯನ್ನು ನಡಸಿ ಸಂದಾಯಿ ತನ್ನ ತಲೆಗಡಿದುಕೊಂಡನೆಂದು ಸಭೆ ಹೊಗಳಿತು. ರಾಜನು ಆ ತಿರುಕೊಳವಿನಾಚಿಯನ್ನು ಕುರಿತು ನಿನ್ನ ಮಗನ ತಲೆಯೊಂದಕ್ಕೆ ಎರಡು ತಲೆಗಳಿವೆ ಎಂದು ಇರಿಸಿದನು. ಕಲಿಗಣೇಶ್ವರನು ಶಿವನಿಗೆ

ಉಪದೇಶಿಸಿದ ಕರ್ಣಮಂತ್ರಗಳೊ, ಶಿವನೂರ ಸೂರೆಯ ಸೂಚನೆಗಳೋ ಎಂಬಂತೆ ಎರಡು ಪಕ್ಕಗಳಲ್ಲಿ ಆ ಮಂತ್ರಸಹಿತವಾದ ತಲೆಗಳಿದ್ದುವು. ಆ ಮಂತ್ರಾಮೃತದಿಂದ ಶಂಕರನ ತಲೆಗೂ ಪ್ರಾಣಬಂದು ಅದು ಪಂಚಾಕ್ಷರಿಯನ್ನುಚ್ಚರಿಸಿತು. ಆಗ ತಿರುಕೊಳವಿನಾಚಿ ನಿನ್ನ ಕುಮಾರನ ತಲೆ ನನ್ನವನ ತಲೆಗೆ ಸರಿ. ನಿನ್ನ ಭೃತ್ಯನ ತಲೆಗೆ ನನ್ನ ತಲೆಯೇ ಪಳಿಯೆಂದು ಕತ್ತರಿಸಿಡಲು ಆ ಮೂರು ತಲೆಗಳೂ ಮಂತ್ರವನ್ನು ಜಪಿಸತೊಡಗಿದುವು. ಆ ಸತಿಯು ಭಕ್ತನಿಗೆ ತಲೆಗಡಿದೊಪ್ಪಿಸಲು ಅದು ತನಗೆ ಆಕೆ ಕೊಟ್ಟ ಬೋಧೆಯೆಂದರಿತ ರಾಜನು ತರಿಸಿದ ಮಂತ್ರಿಯ ತಲೆಗೆ ಪ್ರಾಣ ಬಂದಿತು. ನಾಲ್ಕು ದಿಕ್ಕಿಗೂ ನಾಲ್ಕು ಕಳಶ; ನಡುವಣ ಜ್ಞಾನಿ ಶಂಕರನ ತಲೆ ಗುರುಕಳಶ; ನನ್ನ ತಲೆ ಈ ನವ್ಯಕಳಶಕ್ಕೆ ಕಾಣ್ಕೆಯೆಂದು ಸತ್ಯೇಂದ್ರಚೋಳನು ತರಿದಿರಿಸಿದ ತಲೆ ಮಂತ್ರದುಚ್ಚರಣೆಸಹಿತ ಒಪ್ಪಿತು. ಆ ಆರು ತಲೆಗಳನ್ನು ಕಂಡು ಮಿತವಚನನು ಅಯ್ಯೋ ಆ ಸೊಬಗನನ್ನು ಕೊಂದವನು ನಾನು. ಬರಿದೆ ಮಂತ್ರಲಕ್ಷನಿಗೆ ದೂರು ಬಂದಿತು. ಅವನನ್ನು ಬಿಟ್ಟೆರೆನು, ಈ ಎಲ್ಲರಿಗೂ ನನ್ನ ಪ್ರಾಣವನೊಪ್ಪಿಸುವೆನೆಂದು ತಲೆಯನ್ನು ಕತ್ತರಿಸಿಕೊಂಡು ಮಿತವಚನನು ಮಂತ್ರಸಹಿತವಾದ ತಲೆಯನ್ನಿರಿಸಿದನು.

ಅಂತಃಪುರದಲ್ಲಿ ರಾಣಿ ಸೇವಕಿಯನ್ನು ಕುರಿತು ಎಷ್ಟು ಜನರು ತಲೆಗೊಟ್ಟರೆಂದು ಕೇಳಿದಳು. ನಡೆವ ಸಂಗತಿಯನ್ನು ಹೇಳಿ ಮಿತವಚನನ ತಲೆಗೆ ಪ್ರತಿ ಕಾಣೆವೆಂದು ಅವರು ಬಿನ್ನವಿಸಿದರು. ಕೂಡಲೆ ನಡೆತಂದ ರಾಣಿ ಚಿತ್ಕಾಂತಿಯಲ್ಲಿ ಮುಳುಗಿ ಮಂತ್ರವನ್ನು ಜಪಿಸುತ್ತ ಬೋಧಿಸುತ್ತಲಿದ್ದ ಏಳು ತಲೆಗಳನ್ನು ಕಂಡಳು. ಆ ಜೀವಂತ ತಲೆಗಳ ಗುಣವನ್ನು ಸೆಳೆದ ಆಕೆ ತನ್ನಲ್ಲಿಯೇ ಮಿತವಚನನ ತಲೆಗೆ ಸತ್ಯೇಂದ್ರನ ರಾಣಿ ಏಕೆ ಪಳಿಗೊಡದೆಹೋದಳೆಂದು ಶರಣರೆನ್ನರೆ ಎಂದು ನಿಶ್ಚಯಿಸಿ ಕೊರಲಿಗೆ ಖಡ್ಗವನ್ನೊಡ್ಡಿದಳು. ಆ ಸಮಯದಲ್ಲಿ ವೀರ ಶಿವಶರಣರನ್ನು ನೆನೆದು ತನ್ನ ಕುತ್ತಿಗೆ ಕೊರೆಯತೊಡಗಿದಳು. ಒಡನೆ ಉಮಾ ಸಮೇತನಾದ ಶಿವನು ಪ್ರಸನ್ನನಾದನು. ಕೈಲಾಸದಿಂದ ಗಣಕೂಟ ಹೂಮಳೆಗರೆಯಿತು. ಸುರದುಂದುಭಿ ಮೊಳಗಿತು. ಸವಿನುಡಿಯಿಂದ ಶಿವನು ಅಮೃತವತಿಯನ್ನು ಕುರಿತು ಇವರಲ್ಲಿ ಒಬ್ಬನ ಪ್ರಾಣಕ್ಕೆ ಆಜ್ಞೆಯಿತ್ತೆವು. ಅಮ್ಮ ನಿನಗಾರ್ ಬದುಕಬೇಕು ? ಎಂದು ಕೇಳಿದನು. ಬಾಲಶಂಕರನ ಪ್ರಾಣವನ್ನುಳಿಸಿತು ಎಂದರೆ ಆ ಭಕ್ತ ಸಂತೋಷವೇ ನಮಗೆ ಮಿಗಿಲಾದ ಸುಖ. ನಿಮ್ಮನ್ನಲ್ಲದೆ ನಾವು ಭೋಗಮೋಕ್ಷಗಳನ್ನು ಬಯಸೆವೆಂದು ನುಡಿದ ರಾಣಿಯ ಮಾತಿಗೆ ಸಂತೋಷಪಟ್ಟು ಮೊದಲು ಆತನಿಂದ ಇಷ್ಟು ಜನರು ಮಡಿಯಬೇಕಾಯಿತು;

ಆತನು ಬದುಕಿದರೆ ಉಳಿದವರೂ ಆ ಬಳಿಕ ಏಳುವರು ; ಎಣಿಸಮ್ಮ ಎಂದು ಶಿವನು ಅಪ್ಪಣೆ ಕೊಡಲು ಶಂಕರನ ತಲೆ ಮೊದಲುಗೊಂಡು ಒಂದೆರಡು ಮೂರು ನಾಲ್ಕೈದಾರು ಕೂಡಲೇಳೆಂದ ಮಾತ್ರದೊಳು ಎಲ್ಲರೂ ಎದ್ದರು. ದೇವವಾದ್ಯ, ಶರಣಘೋಷ ಮೊಳಗಿತು, ಅಲ್ಲಲ್ಲಿ ಬಿದ್ದಿದ್ದ ಅಟ್ಟೆಗಳು ತಮತಮಗೆ ನಲಿದು ಬಂದು ತಲೆಯೊಡನೆ ಸೇರಿಕೊಂಡವು. ಮಹಾಮಸ್ತಕವನ್ನು ಪಡೆದ ಆ ನಿಷ್ಠರು ಅಷ್ಟಮೂರ್ತಿಗೆ ಸಾಷ್ಟಾಂಗವೆರಗಿದರು. ಸತ್ಯೇಂದ್ರಚೋಳನು ಶಿವನನ್ನು ಕೊಂಡಾಡತೊಡಗಿದನು. ಗಗನದಿಂದಿಳಿತಂದ ಮಣಿಖಚಿತವಾದ ಪುಷ್ಪಕವಿಮಾನಗಳಲ್ಲಿ ಕುಳಿತ ಆ ಭಕ್ತರು ಕೈಲಾಸವನ್ನು ಸೇರಿದರು. ಅಲ್ಲಿ ಸಿಂಹಾಸನದ ಮೇಲೆ ದಯಾರಾಶಿಯಾದ ಶಿವನು ಮಂಡಿಸಿದ್ದನು. ಧರ್ಮವತಿಯ ಆ ನಿಷ್ಠರನ್ನು ತೆಗೆದಪ್ಪಿಕೊಂಡು ತನ್ನ ಗಣಂಗಳ ಮುಂದೆ ಹೊಗಳಿ ತಿರುಕೊಳವಿನಾಚಿ ಅಮೃತವತಿಯನ್ನು ಕೊಂಡಾಡಿದೆಂದು ತನ್ನ ಸತಿಯರಿಗೆ ತೋರಿ ಶಿವನು ಕೈಲಾಸದಲ್ಲಿ ಮಹಾ ವೈಭವದಿಂದ ಮೆರೆದನು.

## ಶಾಪ ಪ್ರಸಂಗ

ಶಿವನು ಗುಹನಿಗೆ ಶಾಪವನ್ನು ಕೊಡುವ ಪ್ರಸಂಗ ಭಾವಚಿಂತಾರತ್ನದ ಒಂದು ಮೂಲಪ್ರತಿ†ಯಲ್ಲಿದೆ. ಆದರೆ ಆ ಸಂದರ್ಭದ ಪದ್ಯಗಳನ್ನು ಉಳಿದೆಲ್ಲ ತಾಳೆಯ ಹಾಗೂ ಕಾಗದದ ಪ್ರತಿಗಳಲ್ಲಿ ಮಾರ್ಪಡಿಸಿರುವುದು ಕಂಡುಬರುತ್ತದೆ. ಈ ವಿಷಯ ವಿಚಾರಯೋಗ್ಯವಾಗಿದೆ. ಮಲ್ಲಣಾರ್ಯನು ಇದೇ ಕಥಾವಸ್ತುವನ್ನು ತನ್ನ ವೀರ ಶೈವಾಮೃತಪುರಾಣದಲ್ಲಿ* ವಿಸ್ತರಿಸಿರುತ್ತಾನೆ. ಅದನ್ನು ಗಮನಿಸಿದರೆ ಶಿವನು ಷಣ್ಮುಖ ನಿಗೆ ಶಾಪವನ್ನು ಕೊಟ್ಟಂತೆ ನಿರೂಪಿಸಿರುವ ಅಂಶ ಸ್ಪಷ್ಟವಾಗಿಯೇ ಇದೆ. ಆದರೆ ಈ ಮೂಲಪಾಠವನ್ನು ತಿದ್ದುವ ಪ್ರಸಂಗ ಏಕೆ ಉಂಟಾಯಿತೆಂಬುವನ್ನು ಸುಲಭವಾಗಿ ಊಹಿಸಬಹುದು.

ಹರಿಹರನ ಕೆಲವು ರಗಳೆಗಳಲ್ಲಿನ ಕಥಾರಂಭವನ್ನು ನೋಡಿದರೆ ಶಿವನು ತನ್ನ ಗಣಂಗಳ ಆಸೆಯನ್ನು ಈಡೇರಿಸಲೊ, ಇಲ್ಲವೆ ಅವರ ತಪ್ಪನ್ನು ತಿದ್ದಿ ಲೋಕವನ್ನುದ್ಧರಿ ಸುವ ಗುರಿಯಿಂದಲೊ ಅವರನ್ನು ಭೂಲೋಕದಲ್ಲಿ ಜನ್ಮವೆತ್ತುವಂತೆ ಬೆಸಸಿ ಕಳುಹಿಸಿದ ಹಾಗೆ ನಿರೂಪಿಸಿದೆ. ಹೀಗೆಯೇ, ಇಲ್ಲವೆ ಸ್ವಲ್ಪ ಮಾರ್ಪಡಿಸಿ ಕಥಾರಂಭಮಾಡುವ

---

† 'ಅ' ಪ್ರತಿಯ ಮೂಲ ಬಿಡಿವೋಲೆ.

* ಕಾಂ. ೪, ಸಂ. ೮, ಪ. ೧೮-೨೮.

ಸಂಪ್ರದಾಯ ವೀರಶೈವ ಕವಿಗಳಲ್ಲಿ ಬೆಳೆಯಿತು. ಆದರೆ ಭೂಲೋಕವನ್ನು ಪಾವನ ಗೊಳಿಸುವ ನಿಮಿತ್ತದಿಂದ ಅವತರಿಸಿದ ಆ ನಿಷ್ಕಲ ಪರಶಿವನ ಸಚ್ಚಿದಾನಂದ ಸ್ವರೂಪರಿಗೆ ಶಾಪವನ್ನು ಶಿವನು ಕೊಡುವುದುಂಟೆ? ಅವರ ವಿಚಾರವಾಗಿ ಹೀಗೆ ಹೇಳುವುದು ಮಹಾಪರಾಧವಾದೀತೆಂಬ ಭಾವನೆ ಹರಿಹರನಿಂದೀಚೆಗೆ ಹಲವು ವೀರಶೈವರಲ್ಲಿ ಬೆಳೆಯಿತೆಂಬುದಕ್ಕೆ ಈ ಮೂಲ ಪಾಠದ ಮಾರ್ಪಾಟೇ ಒಂದು ನಿದರ್ಶನ.

ಮಲ್ಲಣಾರ್ಯನಿಗಿಂತ ಹಿಂದೆ ಇದ್ದ ಸುರಂಗಕವಿ ತನ್ನ 'ತ್ರಿಷಷ್ಟಿ ಪುರಾತನರ ಚಾರಿತ್ರದ ಪಿಳ್ಳೆನಾಯನಾರರ ಕಥಾಪ್ರಸಂಗದಲ್ಲಿ ಭೂಲೋಕದ ವೃತ್ತಾಂತವನ್ನು ನಾರದನಿಂದ ತಿಳಿದ ಶಿವನು ಭಕ್ತಿಮಹಿಮೆಯನ್ನು ಮೆರೆಯಲು ತನ್ನ ಕುಮಾರನೇ ಸಮರ್ಥನಾದವನೆಂದು ತಿಳಿದು ಆತನನ್ನು ಭೂಲೋಕಕ್ಕೆ ಕಳುಹಿಸುವನು. ಅಲ್ಲಿ ಓಂಕಾರದ ಪ್ರಸ್ತಾಪವಾಗಲಿ, ಗುಹನಿಗೆ ಶಾಪವನ್ನಿತ್ತ ಪ್ರಸಂಗವಾಗಲಿ ಇಲ್ಲ. ಆದರೆ ಕವಿ ಮಲ್ಲಣಾರ್ಯನು, ಬಹುಶಃ ಹರಿಹರನ ಸಂಪ್ರದಾಯವನ್ನು ಅನುಸರಿಸಿ, ಈ ಪ್ರಸಂಗವನ್ನು ತಂದಿದ್ದಾನೆ; ಅಥವಾ ದ್ರಾವಿಡದಲ್ಲಿ ಹೇಳಿರುವುದನ್ನು ಉಳಿಸಿ ಕೊಂಡಿರುತ್ತಾನೆ. ಈ ರೀತಿಯ ಶಾಪನಿರೂಪಣೆಯ ಬಗ್ಗೆ ಇದ್ದಿರಬಹುದಾದ ಪ್ರತಿಕ್ರಿಯೆಗೆ ಆತನು ಉತ್ತರಕೊಡದೆ ಇಲ್ಲ. ಶಿವನೇನೊ ಗುಹನನ್ನು ಹದಿನಾರು ಸಾವಿರ ಜನ್ಮದಲ್ಲಿ ಹುಟ್ಟೆಂದು ಶಪಿಸಿದನು. ಈ ವಿಷಮ ಶಾಪವನ್ನು ಕುಮಾರನು ಹೊರಬಲ್ಲನೇ ದೇವ, ಬೇಡ ಎಂದು ಗುಹನ ಸಹಾಯಕ್ಕೆ ಬಂದ ಗಣಂಗಳಿಗೂ ಶಾಪದ ತಾಪ ತಟ್ಟದೆ ಬಿಡಲಿಲ್ಲ. ಆದರೆ ದೈನ್ಯದಿಂದ ಬೇಡಿದ ಆ ತನ್ನ ಭಕ್ತರ ಪ್ರಾರ್ಥನೆಗೆ ಶಿವನ ಕೋಪ ನಸುನಗೆಯಾಗಿ ಪರಿಣಮಿಸಿತು. ಅಷ್ಟೇ ಅಲ್ಲದೆ "ಶಾಪವೆನ್ನವರಿಗುಂಟೆ? ಗಣಂಗಳ್ನೀವು ಭೂಪವಿತ್ರಾರ್ಥದಿಂ ಜನಿಸಿ" ಎಂಬ ನುಡಿಯಲ್ಲಿ ಶಿವನ ದೃಷ್ಟಿ ನಾಟಿರುವುದು ಲೋಕಹಿತಾರ್ಥದಲ್ಲಿ, ಶಾಪದಲ್ಲಲ್ಲ ಎಂಬುದನ್ನು ಕವಿ ಮಲ್ಲಣಾರ್ಯನು ಮನಗಾಣಿಸಿರುವನು. ಆದರೆ ಮಲ್ಲಣಾರ್ಯನ ಭಾವಚಿಂತಾರತ್ನವನ್ನು ಆಧಾರವಾಗಿಟ್ಟು ಕೊಂಡ ಷಡಕ್ಷರದೇವನು ತನ್ನ ರಾಜಶೇಖರವಿಲಾಸದಲ್ಲಿ* ಓಂಕಾರಪ್ರಸಂಗವನ್ನು ಚಿತ್ರಿಸಿ, ಶಾಪದ ವಿಚಾರವನ್ನು ಕೈಬಿಟ್ಟಿರುವುದನ್ನು ನೋಡಬಹುದು.

ಒಂದು ಶತಮಾನದ ಅನಂತರ ಆದ ಈ ಮಾರ್ಪಾಟಿಗೆ ಶಾಪವಿಚಾರದ ಅಸಮ್ಮತಿಯ ಭಾವನೆ ಬೇರುಬಿಟ್ಟದ್ದೇ ಕಾರಣವಾಗಿರಬಹುದು. ಆದರೆ ಆ ಕಥೆಯನ್ನು ಮಲ್ಲಣಾರ್ಯರೇ ಹೇಳಿರುವರೆಂದು ಷಡಕ್ಷರದೇವನು ತಿಳಿಸಿರುವುದನ್ನು ಗಮನಿಸ

* ಆಶ್ವಾಸ ೧, ಪದ್ಯ ೭೩-೭೭.

ಬೇಕಾಗುತ್ತದೆ. ಹಾಗಿದ್ದರೆ ಇದಕ್ಕೆ ಕಾರಣ ಮೂಲಪಾಠವನ್ನು ಇತರರು ತಿದ್ದಿದ್ದೆ? ಸಾಧ್ಯ. ಅಥವಾ ಒಂದೆಡೆ† ಶಿವನನ್ನು ಕುರಿತು "ಸ್ವಾಮಿವರಶುದ್ಧವಿದ್ಯಾ ರೂಪನುನ್ನತಪ್ರೇಮಿ" ಎಂದು ಭಾವಚಿಂತಾರತ್ನದಲ್ಲಿ ಹೇಳಿರುವ ಮಾತು ಈ ಶಾಪ ವಿಚಾರದ ಸಂದಿಗ್ಧತೆಗೆ ಎಡೆಗೊಟ್ಟಿತೊ? ಎಂದಿಗೂ ಇಲ್ಲ; ಹಾಗಿದ್ದಲ್ಲಿ ಅದೇ ಕೃತಿಯಲ್ಲಿ ಮತ್ತೊಂದೆಡೆ £ ಗುಹನನ್ನು ಕುರಿತು ಸ್ಪಷ್ಟವಾಗಿ "ಪ್ರಣವ ಸಾಮರ್ಥ್ಯಚೋರ"ನೆಂದು ಹೇಳಿರುವ ಅಂಶ ಗಮನಕ್ಕೆ ಬರದಿರುವುದುಂಟೆ? ಇಲ್ಲ, ವರ್ಣಕವನ್ನು ವಸ್ತುಕವನ್ನಾಗಿ ಮಾಡಿ ಹೇಳುವಲ್ಲಿ ಆಗಿರುವ ಹಲವು ಮಾರ್ಪಾಟುಗಳಲ್ಲಿ ಕವಿಸ್ವಾತಂತ್ರ್ಯದಿಂದ ಆದ ಒಂದು ಬದಲಾವಣೆ ಎಂದು ಹೇಳಿದಲ್ಲಿ ಶಾಪವಿಚಾರ ಸಲ್ಲದೆಂದು ಭಾವಿಸಿ ಕವಿ ಹಾಗೆ ಮಾಡಿರುವನೆಂದು ಹೇಳಬೇಕಾಗುತ್ತದೆ. ಇನ್ನು ತಮಿಳಿನಲ್ಲಿ ಗುಹನ ವಿಚಾರವಾಗಿ ಈ ಶಾಪಪ್ರಸಂಗ ಉಂಟೆ ಎಂದು ವಿಚಾರಮಾಡೋಣ.

ಕುಂಭಕೋಣಕ್ಕೆ ಮೂರು ಮೈಲಿ ಸಮೀಪದಲ್ಲಿ ಕಾವೇರಿಯ ಉತ್ತರತೀರ. ಪಲ್ಲಿರುವ ಒಂದು ಸುಕ್ಷೇತ್ರವೇ ಸ್ವಾಮಿಮಲೆ. ತಿರುವೇರಗಂ ಎಂಬುದು ಅದರ ಸಾಹಿತ್ಯನಾಮ. ಗುಹನ ಆರು ಮುಖ್ಯ ಕ್ಷೇತ್ರಗಳಲ್ಲಿ ಅದೊಂದು. ಅಲ್ಲಿನ ದೇವರನ್ನು "ಸ್ವಾಮಿನಾರ್ಥ" "ತಹಪ್ಪಸ್ವಾಮಿ" "ಗುರುನಾರ್ಥ" "ಪುತ್ರ ಗುರುಕ್ಕಳ್" ಎಂದು ಹೆಸರಿಸಿ ಕರೆಯುವರು, ಈ ಹೆಸರುಗಳೆಲ್ಲ ಷಣ್ಮುಖನನ್ನೇ ಕುರಿತ ಪರ್ಯಾಯನಾಮಗಳು. ಸ್ವಾಮಿಮಲೆಯ ಮೇಲ್ಪ್ರಾಕಾರದಲ್ಲಿ ಸ್ವಾಮಿನಾಥನಿದ್ದಾನೆ. ಕೆಳ ಪ್ರಾಕಾರದಲ್ಲಿ ಶಿವನಿದ್ದಾನೆ. ಈ ಶಿವಾಲಯದಲ್ಲಿ ಗುಹನಿಂದ ಪ್ರಣವೋ ಪದೇಶವನ್ನು ಪಡೆಯುತ್ತಿರುವ ಶಿವನ ಚಿತ್ರಪಟವಿರುವುದು ಕಂಡುಬರುತ್ತದೆ. ಈ ಸ್ವಾಮಿಮಲೆ ಷಣ್ಮುಖಸ್ವಾಮಿಯು ಶಿವನಿಗೆ ಓಂಕಾರದ ಅರ್ಥವನ್ನು ಹೇಳಿದ ಸುಕ್ಷೇತ್ರವೆಂದು ಪ್ರಸಿದ್ಧಿ ಹೊಂದಿದೆ.

ತಮಿಳು ಕಾವ್ಯಗಳಲ್ಲಿಯೂ ಷಣ್ಮುಖನು ಶಿವನಿಗೆ ಉಪದೇಶವನ್ನು ಮಾಡಿದ ಹಾಗೆ ಹೇಳಿರುವುದುಂಟು. "ಗುರುವಾಗಿ ಹರನಿಗೆ ಉಪದೇಶವನ್ನು ಮಾಡಿದ ಗುಹನೇ ವಲ್ಲೀವಲ್ಲಭನೇ,"* "ತಿರುಜ್ಞಾನಸಂಬಂಧಿಯಾದ ಷಣ್ಮುಖನೇ" ಎಂದು ಅರುಣಗಿರಿ ನಾಥರು ತಮ್ಮ ತಿರುಪ್ಪುಹಜ್ ಎಂಬ ಸ್ತೋತ್ರಗ್ರಂಥದಲ್ಲಿ ಸ್ತುತಿಸಿರುವರು. ಆದರೆ ಈ ಶಾಪವೃತ್ತಾಂತವನ್ನು ಕುರಿತು ತಮಿಳಿನಲ್ಲಿ ಎಲ್ಲೂ ಹೇಳಿರುವ ಹಾಗೆ ತೋರದು.

---

†ಇದೇ ಗ್ರಂಥ ಪುಟ ೨೬, ಪಂಕ್ತಿ ೧-೨. £ಇದೇ ಗ್ರಂಥ ಪುಟ ೩೫, ಪಂಕ್ತಿ ೧೬-೧೭.
*ಗುರುವಾಯರಜ್ಕು ಮುಪದೇಶಮ್ ವೈತ್ತ। ಗುಹನೇ ಕುಜಿತ್ತಿ ಮನವಾಳಾ.—
—ಪದೈಪ್ಪೋರ್ ೯೦

ಜ್ಞಾನಾಕಾರನಾದ ಷಣ್ಮುಖನು ಓಂಕಾರದ ಅರ್ಥವನ್ನು ಸಂಪೂರ್ಣವಾಗಿ ಹೇಳಲಾರದೆ ಹೋದ ಬ್ರಹ್ಮನನ್ನು, ಕಶಾದಂಡದಿಂದ ಹೊಡೆಯುವುದಿರಲಿ, ಆತನನ್ನು ಸೆರೆಯಿಟ್ಟ ನೆಂದೇ ಹೇಳುವ ಈ ಮುರುಘಸ್ತುತಿಯನ್ನು ಕೇಳಿ ಈ ಪ್ರಸ್ತಾಪವನ್ನಿಲ್ಲಿಗೆ ನಿಲ್ಲಿಸೋಣ.

ಸೃಷ್ಟಿಯಂ ಮಾಳ್ಪವನು ಗರ್ವದಿಂದಲಿ ನುಡಿಯೆ
ವೇದದಾದಿಯವರ್ಣವಿದು ತಾನೆಂದು ಬಯಸಿ-
ದೋಂಕಾರದರ್ಥವನು ತಿಳಿಸಲಸಮರ್ಥನಿ
ನ್ನೆಂತು ಸೃಷ್ಟಿಪನೆಂದೊಡನೆ ಪೊಡೆದು ಸೆರೆಯಿಡುವ ದೊರೆಯೇ—॥†

## ಕಥೆಯ ಮೂಲ ಮತ್ತು ಸ್ವರೂಪ

ಕನ್ನಡ ಸಾಹಿತ್ಯದಲ್ಲಿ ಪ್ರಥಮತಃ ಸತ್ಯೇಂದ್ರಚೋಳನ ಕಥೆ ಕಂಡುಬರುವುದು ಮಲ್ಲಣಾರ್ಯನ ಭಾವಚಿಂತಾರತ್ನದಲ್ಲಿ. ತಿರುಜ್ಞಾನಸಂಬಂಧರು ಕುಲಚ್ಚಿರೆಯಗೆ ಪಂಚಾಕ್ಷರಿಯ ಮಹಿಮೆಯನ್ನು ತಿಳಿಸುವುದಕ್ಕಾಗಿ ದ್ರಾವಿಡದಲ್ಲಿ ಹೇಳಿದ ಸತ್ಯೇಂದ್ರ ಚೋಳ ಕಥೆಯನ್ನು ತಾನು ಕನ್ನಡವಲ್ಲಿ ಹೇಳಿರುವೆನೆಂದು ಕವಿಯೇ ತಿಳಿಸಿರುವನು. ಕನ್ನಡ ತಮಿಳುಗಳ ಸಂಬಂಧ ಭಾಷಾದೃಷ್ಟಿಯಿಂದ ಮಾತ್ರವಲ್ಲ, ಸಾಹಿತ್ಯ ದೃಷ್ಟಿ ಯಿಂದಲೂ ನಿಕಟವಾದದ್ದು. ಶೈವ ಮತ್ತು ವೀರಶೈವರಿಗೆ ಇರುವ ಒಂದು ಧಾರ್ಮಿಕ ಸಂಬಂಧದ ಫಲವಾಗಿ ಸಾಹಿತ್ಯಸಂಪರ್ಕ ಬೆಳೆದುಬಂದಿದೆ. ತಮಿಳಿನ ಅರುವತ್ತುಮೂರು ಪುರಾತನರನ್ನು ವೀರಶೈವರು ತಮ್ಮವರೆಂದೇ ಭಾವಿಸಿ ಅವರ ಚರಿತ್ರೆಗಳನ್ನು ಕುರಿತು ಹಲವು ಕನ್ನಡ ಕಾವ್ಯಗಳನ್ನು ರಚಿಸಿರುವರು.

ಮಲ್ಲಣಾರ್ಯನ ಕಾವ್ಯಕಥೆಯನ್ನು ನೋಡಿದರೆ ಅದು ದ್ರಾವಿಡದಿಂದ ತೆಗೆದು ಕೊಂಡದ್ದು ಎಂಬುದರ ಸತ್ಯಾಂಶ ಹೊರಪಡುತ್ತದೆ. ಸತ್ಯೇಂದ್ರಚೋಳ ಕಥೆಯ

---

†ಕನ್ದರ್ ಕಲಿವೆಣ್ಬಾ :—

ಅಹನ್ದೈ ಉರೈಪ್ಪ ಮಱೈ ಯಾದಿಯೆೞುತ್ತೆನ್ಱು
ಉಹನ್ದ ಪಿರಣವತ್ತಿನುಣ್ಮೈ—ಪುಹನ್ಱಿಲೈಯಾಲ್ ೯೧
ಸಿಟ್ಟಿ ತೊೞಿಲದನೈ ಶೈಯ್ವದೆಙ್ಙನ್ ಎನ್ಱುಮುನಮ್
ಕುಟ್ಟಿ ಚ್ಚಿಱೈಯಿರುತ್ತು ಙ್ಙೋಮಾನೇ—॥ ೯೨

ವಿಷಯ ಚೋಳನಾಡಿಗೆ ಎಂದರೆ ತಮಿಳುನಾಡಿಗೆ ಸಂಬಂಧಿಸಿದ್ದು. ಕಥೆ ನಡೆಯುವುದೂ ಅಲ್ಲಿಯೆ. ಆ ಚೋಳದೇಶದ ವರ್ಣನೆ ಈ ಕೃತಿಯಲ್ಲಿದೆ. ಶೈವಸಿದ್ಧಾಂತದ ಮೂಲ ತತ್ತ್ವವಾದ ಭಕ್ತಿ ಈ ಕಥಾವಸ್ತುವಿನ ಪ್ರಧಾನ ಅಂಶ. ಶಕ್ತಿ ನಿಜರೂಪನೂ, ಸೃಷ್ಟಿ ಸ್ಥಿತಿ, ಲಯ, ತಿರೋಧಾನ ಮತ್ತು ಅನುಗ್ರಹಗಳೆಂಬ ಪಂಚಕೃತ್ಯನೂ ಆದ ಶಿವನ ಸಾಕ್ಷಾತ್ಕಾರ ಹಾಗೂ ಸಶರೀರಮೋಕ್ಷ ಅಥವಾ ಗಣಪದವಿಯೇ ಚರಮೋದ್ದೇಶವಾದ ತಮಿಳು ಶೈವಧರ್ಮವನ್ನು ಈ ಕಥೆ ಅಳವಡಿಸಿಕೊಂಡಿದೆ. ಪ್ರೇಮ ಕಾರುಣ್ಯಗಳ ಮೂರ್ತಿಯೇ ಶಿವನು. ಭಕ್ತಿಯಿಂದ ಆತನನ್ನು ಒಲಿಸಿಕೊಳ್ಳಬಹುದು ಎಂದು ನಂಬಿ ಯಜ್ಞ ಯಾಗಾದಿಗಳನ್ನೊಪ್ಪದೆ ಪುಷ್ಪಪೂಜಾವಿಧಾನದಿಂದ ಶಿವನನ್ನು ಅರ್ಚಿಸುವ ಶೈವಧರ್ಮದ ಆಚಾರವನ್ನು ಎತ್ತಿಹಿಡಿದಿರುವ ಈ ಕಥೆಯ ವಿಷಯ, ವಸ್ತು ಮತ್ತು ತತ್ತ್ವಗಳೇ ಅವರ ದ್ರಾವಿಡತನವನ್ನು ವ್ಯಕ್ತಪಡಿಸುತ್ತವೆ.

ತಮಿಳಿನಲ್ಲಿ ಈ ಸತ್ಯೇಂದ್ರಚೋಳ ಕಥೆ ಇದೆಯೇ ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ. ಸತ್ಯೇಂದ್ರಚೋಳ ಕಥೆ ಪ್ರತ್ಯೇಕವಾಗಿ ತಮಿಳಿನಲ್ಲಿರುವಹಾಗಿಲ್ಲ. ಆದರೆ ಆ ಕಥೆಯ ಹಾಗೆಯೇ ಇರುವ ತಮಿಳಿನ ಒಂದು ಕಥೆಯೆಂದರೆ ಮನುನೀತಿಕಂಠ ಚೋಳನ ಕಥೆ. ಆ ಕಥೆ ತಂಜಾವೂರ್ ಜಿಲ್ಲೆಯ ತಿರುವಾರೂರಿಗೆ ಸಂಬಂಧಿಸಿರತಕ್ಕದ್ದು. ತಿರುನಗರ ಅಥವಾ ತಿರುವಾರೂರಿನ ಹಿರಿಮೆಯನ್ನು ಕುರಿತ ಮನುನೀತಿಕಂಠ ಪುರಾಣವು ಪೆರಿಯಪುರಾಣದ ಒಂದು ಪ್ರಸಿದ್ಧ ಕಥೆ. ತಿರುವಾರೂರಿನ ತ್ಯಾಗರಾಜ ದೇವಾಲಯದ ಎರಡನೆಯ ಪ್ರಾಕಾರದ ಉತ್ತರ ದಿಕ್ಕಿನ ಗೋಡೆಯ ಮೇಲೆ ವಿಕ್ರಮಚೋಳನ ಕಾಲಕ್ಕೆ ಸೇರಿದ ಒಂದು ಶಿಲಾಶಾಸನ (ಕ್ರಿ. ಶ. ೧೧೨೩) ಇದೆ. ಅದರಲ್ಲಿ ಮನುಚೋಳ ಕಥೆಯನ್ನು ಸಂಗ್ರಹವಾಗಿ ತಿಳಿಸಿದೆ. ರಾಜನ ಹೆಸರು ಮನು. ರಾಜಕುಮಾರನ ಹೆಸರು ಪ್ರಿಯವರ್ಧನ. ರಾಜನು ಮೊದಲು ಮಗನ ಮೇಲೆ ರಥವನ್ನು ಹರಿಸುವಂತೆ ಅಪ್ಪಣೆಮಾಡಿದ್ದು ಉಭಯಕುಲಾಮಲನೆಂಬ ಮಂತ್ರಿಗೆ. ಆ ಮಂತ್ರಿಯ ವಂಶಿಕನಿಗೆ ಕೊಟ್ಟ ದತ್ತಿಯನ್ನು ಆ ಶಾಸನ ತಿಳಿಸುತ್ತದೆ.* ಸತ್ತ ಕರುವಿಗೆ ನ್ಯಾಯವನ್ನು ತೋರಿದ ಚೋಳರಾಜನ ಕಥೆಯ ಪ್ರಸ್ತಾಪ ಕ್ರಿ.ಶ. ಎರಡನೆಯ ಶತಮಾನಕ್ಕೆ ಸೇರಿದ ಶಿಲಪ್ಪದಿಕಾರ ಕಾವ್ಯದಲ್ಲಿ ಪ್ರಾಸಂಗಿಕವಾಗಿ ಬಂದಿದೆ. 'ಮಹಾವಂಶ'ದಲ್ಲಿ ಸತ್ತ

---

* ಮನುಚೋಳನಿಗೆ ಸಂಬಂಧಿಸಿದ ಈ ಕೆಲವು ಅಂಶಗಳನ್ನು ಪತ್ರಮುಖೇನ ಶ್ರೀ ಕೆ. ಆರ್. ಶ್ರೀನಿವಾಸನ್, ಎಂ.ಎ., ಮದ್ರಾಸಿನ ಪ್ರಾಚೀನ ಶೋಧನ ಶಾಖೆಯ ಸೂಪರಿನ್‌ಟೆಂಡೆಂಟ್ ಅವರು ದಯವಿಟ್ಟು ತಿಳಿಸಿರುತ್ತಾರೆ.

ಕರುವಿಗಾಗಿ ಮಗನನ್ನು ಕೊಂದು ನ್ಯಾಯಸ್ಥಾಪನೆಮಾಡಿದ ತಮಿಳು ಚೋಳನಾದ ಎಳಾರನ ಸಂಗತಿಯಿದೆ. ಈ ಎಳಾರನು ಮಹಾವಂಶದಲ್ಲಿ ಹೇಳಿರುವ ಪ್ರಕಾರ ಕ್ರಿ. ಪೂ. ಎರಡನೆಯ ಶತಮಾನದವನು†. ಹೀಗೆ ಅತಿ ಪ್ರಾಚೀನವಾದ ತಮಿಳು ಕಥೆಯು ಬರಿಯ ಕಾವ್ಯ, ಶಾಸನಗಳಲ್ಲಲ್ಲದೆ ಶಿಲಾರೂಪಗಳಲ್ಲಿಯೂ ಕೆತ್ತಲ್ಪಟ್ಟಿದೆ. ತಿರುವಾರೂರಿನ ದೇವಾಲಯದ ಬಳಿ ಒಂದು ಸಣ್ಣ ಗುಡಿಯಿದೆ. ಅದರ ಮುಂಭಾಗ ದಲ್ಲಿ ಒಂದು ಘಂಟೆಯನ್ನು ನೇತುಹಾಕಿದೆ. ಮುಂದೆ ಸತ್ತು ಬಿದ್ದಿರುವ ಕರುವಿನೊಡನೆ ಒಂದು ಹಸು ನಿಂತಿದೆ. ಹಸುವಿನ ಈ ದೃಶ್ಯ ಅರಮನೆಯ ಮುಂದೆ ಇರುವ ಘಂಟೆ ಯನ್ನು ತನ್ನ ಕೊಂಬಿನಿಂದ ಬಾರಿಸಿ ರಾಜನಿಗೆ ಮೊರೆಯಿಡುವುದನ್ನು ತೋರಿಸುತ್ತದೆ. ಆ ದೇವಾಲಯದಲ್ಲಿಯೇ ರಾಜನ ರಥವನ್ನು ಕೆತ್ತಿರುವುದನ್ನೂ ನೋಡಬಹುದು. ತಿರುವಾರೂರಿಗೆ ಮಾತ್ರ ಸೇರಿದ ಈ ಕಥೆಯ ಚಿತ್ರ, ಶಿಲ್ಪಕೃತಿಗಳು ಕನ್ನಡನಾಡಿನ ಗಡಿ ಪ್ರದೇಶವಾದ ಅನಂತಪುರ ಜಿಲ್ಲೆಗೆ ಸೇರಿದ ಲೇಪಾಕ್ಷಿ, ಪೆನುಗೊಂಡೆಯ ದೇವಾಲಯಗಳಲ್ಲಿವೆ. ಲೇಪಾಕ್ಷಿಯ ದೇವಸ್ಥಾನದ ನಾಟ್ಯಮಂಟಪದ ಮೇಲುಗಡೆ ವಿಜಯನಗರದ ಕಾಲದ ಇತರ ಚಿತ್ರಗಳೊಡನೆ ಮನುಚೋಳನ ಕಥೆ ಬಹು ವಿಶದವಾಗಿ ಚಿತ್ರಿತವಾಗಿದೆ. ಪೆನುಗೊಂಡೆಯ ಶಿವಾಲಯದಲ್ಲಿಯೂ ಈ ಕಥೆ ಶಿಲ್ಪಕೃತಿಯಾಗಿದೆ. ಹೀಗೆ ಕಾವ್ಯ, ಶಿಲ್ಪ, ಚಿತ್ರಗಳಲ್ಲಿ ಮೂರ್ತಿಗೊಂಡು ಪ್ರಖ್ಯಾತವಾದ ಈ ತಮಿಳು ಕಥೆ ಕನ್ನಡ ಸಾಹಿತ್ಯದಲ್ಲಿ ಮೊದಲು ಕಂಡುಬರುವುದು ಹರಿಹರನಲ್ಲಿ.

ಹರಿಹರನ ರಗಳೆಯಲ್ಲಿನ ಮನುಚೋಳನ ಕಥೆ ಸೋಮರಾಜನ (ಕ್ರಿ.ಶ. ೧೨೨೨) ಚಂಪೂ ಕೃತಿಯಾದ ಉದ್ಭಟಕಾವ್ಯದಲ್ಲಿಯೂ ಕಂಡುಬರುತ್ತದೆ. ಸೋಮರಾಜನು ಹರಿಹರನ ಕಥೆಯನ್ನು ಅನುಸರಿಸಿ ಸಂಗ್ರಹಿಸಿರುವನೇ ಹೊರತು ಯಾವ ಮಾರ್ಪಾಟು ಗಳನ್ನೂ ಮಾಡಿರುವುದಿಲ್ಲ. ಮಲ್ಲಣಾರ್ಯನೇನಾದರೂ ಹರಿಹರನ ಮನುಚೋಳರಗಳೆ ಯನ್ನಾಗಲಿ, ಅದರ ಮೂಲವಾದ ಪೆರಿಯಪುರಾಣದ ಕಥೆಯನ್ನಾಗಲಿ ಮಾರ್ಪಡಿಸಿ ಕೊಂಡಿರುವನೇ ಎಂಬುದು ವಿಚಾರಾರ್ಹವಾದುದು. ಮಲ್ಲಣಾರ್ಯನ ಕೃತಿಗಳಲ್ಲಿ ಅಲ್ಲಲ್ಲಿ ಹರಿಹರನ ಪ್ರಭಾವ ಬಿದ್ದಿರುವುದನ್ನು ಕಾಣಬಹುದು. ತಮಿಳಿನ ಪೆರಿಯ ಪುರಾಣದಲ್ಲಾಗಲಿ, ಹರಿಹರನ ರಗಳೆಯಲ್ಲಾಗಲಿ ಮನುಚೋಳನ ಕಥೆಯಿರುವುದು ಸ್ವಲ್ಪವೆ. ಮಲ್ಲಣಾರ್ಯನು ತಿಳಿಸುವ ಪ್ರಕಾರ ಸತ್ಯೇಂದ್ರಚೋಳನ ಕಥೆ ಕಿರಿದು.

---

†Cholas : Early Notices. ೧. ಉ. ಕಾ. ಆಶ್ವಾಸ ೧೨, ಪದ್ಯಗಳು ೬೯-೮೮.

ಅದನ್ನು ತಾನು ಬೆಳಸಿ ಕೃತಿಮಾಡಿರುವೆನೆಂದು ಹೇಳುವ ಆತನ ಹೇಳಿಕೆಯನ್ನು ಗಮನಿಸಿದರೆ ಈ ಮನುಚೋಳನ ಕಥೆಯೇ ಭಾವಚಿಂತಾರತ್ನಕ್ಕೆ ಮೂಲವಾಗಿರ ಬಹುದೋ ಎನ್ನಿಸುತ್ತದೆ. ಭಕ್ತಿರಸ ಪ್ರಧಾನವಾದ ಹರಿಹರನ ಮನುಚೋಳ ರಗಳೆಯ ಬೇರೆ ಬೇರೆ ಪಾಠಾಂತರಗಳನ್ನುಳ್ಳ ಪ್ರತಿಗಳಲ್ಲಿ ಒಂದು ಮನುಚೋಳನನ್ನು "ಯಾಥಾರ್ಥನೃಪ"³ನೆಂದು ಕರೆದಿದೆ. ಈ ಯಾಥಾರ್ಥನೃಪನೇ ಮಲ್ಲಣಾರ್ಯನ ಸತ್ಯೇಂದ್ರಚೋಳನಿರಬಹುದು ಎಂಬ ಅನುಮಾನ ಹುಟ್ಟದಿರದು. ಆದರೆ ಈ ಒಂದು ಸಾಮ್ಯವನ್ನು ಆಧಾರವಾಗಿಟ್ಟುಕೊಂಡು ಮಲ್ಲಣಾರ್ಯನು ಮನುಚೋಳನ ಕಥೆಯನ್ನೇ ಸತ್ಯೇಂದ್ರ ಚೋಳಕೃತಿಯನ್ನಾಗಿ ಮಾಡಿರುವನೆಂದು ದೃಢವಾಗಿ ಹೇಳಲು ಬಾರದಿದ್ದರೂ ಇಲ್ಲಿರುವ ನಾಮಸಾದೃಶ್ಯದಿಂದ ಮನುಚೋಳನನ್ನೇ ಹರಿಹರನಾಗಲಿ ಅಥವಾ ಈಚಿನವರಾಗಲಿ ಯಾಥಾರ್ಥ (ಸತ್ಯ) ನೃಪನೆಂದು ಕರೆದಿರುವರೆಂಬ ಅಂಶ ಸ್ಪಷ್ಟವಾಗುತ್ತದೆ.

ಸತ್ಯೇಂದ್ರಚೋಳನ ಕಥೆ ಸ್ವರೂಪತಃ ಚಾರಿತ್ರಕವೆ, ಪೌರಾಣಿಕವೆ ಎಂಬುದನ್ನು ಸ್ವಲ್ಪ ವಿಚಾರಮಾಡಿ ಈ ಪ್ರಸ್ತಾಪವನ್ನಿಲ್ಲಿಗೆ ನಿಲ್ಲಿಸಬಹುದು.

ತಿರುಜ್ಞಾನಸಂಬಂಧರು ಕುಲಚ್ಚರೆಯನ್ನುದ್ದೇಶಿಸಿ ಕಥೆಯನ್ನು ಹೇಳುವ ರೀತಿ ಯಲ್ಲಿ ಕವಿ ಕಾವ್ಯಾರಂಭವನ್ನು* ಮಾಡಿರುವನು. ಪಂಚಾಕ್ಷರೀ ಮಂತ್ರ ಮಹಿಮೆಯ ಈ ಕಥೆಗೆ ಉಚಿತವಾದ ಸನ್ನಿವೇಶದ ಹಿನ್ನೆಲೆಯನ್ನು ಕವಿ ಸುಂದರವಾಗಿ ಸೃಷ್ಟಿಸಿರು ವನು. ಆದರೆ ಕಥೆಯಲ್ಲಿ ತಿರುಜ್ಞಾನಸಂಬಂಧರ ಕಾಲದಿಂದೀಚಿನ ಸಂಗತಿಗಳನ್ನು ನಿರೂಪಿಸಿರುವುದನ್ನು ಗಮನಿಸಿದರೆ ಆ ಕಥಾರಂಭ ಕೇವಲ ಕಥನ ಕೌಶಲದ ಒಂದು ತಂತ್ರ ಅಥವಾ ಕಥೆ ಅತಿ ಪುರಾತನವಾದುದೆಂಬುವರ ಸೂಚನೆಯೆಂದು ಮಾತ್ರ ತಿಳಿಯಬಹುದಾಗಿದೆ. ಚೋಳನಾಡಿನ ಐತಿಹಾಸಿಕ ರಾಜರಲ್ಲಿ ಸತ್ಯೇಂದ್ರಚೋಳ ನೆಂಬುವನ ಹೆಸರೇ ಇಲ್ಲದಿರುವುದರಿಂದ ಈ ಕಥೆ ಚಾರಿತ್ರಕವಲ್ಲ.

ಕರುವಿನ ಮೇಲೆ ರಥವನ್ನು ಹರಿಸಿದ ಮಗನನ್ನು ಕೊಂದ ಒಬ್ಬ ರಾಜನ ಕಥೆ ಕ್ರಿ. ಶ. ೧ನೆಯ ಶತಮಾನಕ್ಕಾಗಲೆ ತಮಿಳಿನಲ್ಲಿ ಪಾರಂಪರ್ಯವಾಗಿ ಬಂದ ಐತಿಹ್ಯ

---

೩. ಇದೇ ಗ್ರಂಥ ಪುಟ ೧೪೧.

*ತಿರುಜ್ಞಾನಸಂಬಂಧರು ಕುಲಚ್ಚರೆಯುಗೆ ಪಂಚಾಕ್ಷರೀ ಮಂತ್ರೋಪದೇಶವನ್ನು ಮಾಡಿರುವ ಸಂಗತಿ ಮಾತ್ರ ಅವರ ತೇವಾರಗಳಲ್ಲಿ ನಿರೂಪಿತವಾಗಿದೆ.

ವಾಗಿದ್ದಿತು. ಈ ಕಥೆ ಆ ಅನಂತರ ತಮಿಳಿನಲ್ಲಿ ಪ್ರಸಾರ್ಪಟ್ಟಿರುವುದೂ ಕಂಡು ಬರುತ್ತದೆ. ಇದರಂತೆ ಸತ್ಯೇಂದ್ರಚೋಳ ಕಥೆಯೂ ಸಾಂಪ್ರದಾಯಕವಾಗಿ ಬಂದ ಒಂದು ಪೌರಾಣಿಕ ಕಥೆ. ಈ ಪೌರಾಣಿಕ ಕಥೆ ಪುರಾತನವಾದರೂ ಇದರಲ್ಲಿ ಇತ್ತೀಚಿನ ಚಾರಿತ್ರಕ ಸಂಗತಿಗಳಿಲ್ಲದೇ ಇಲ್ಲ. ಧರ್ಮವತಿಯಿಂದ ಗಂಗಾನದಿಯವರೆಗೂ ಅಧೀನರಾಜರನ್ನು ನಿಲ್ಲಿಸಿ ಅವರ ತಲೆಯ ಮೇಲೆ ಆ ಪವಿತ್ರ ಗಂಗಾಜಲವನ್ನು ತರಿಸಿದ ಸಂಗತಿಯೂ, ಸಿಂಹಳರಾಜನ ಮೇಲೆ ಆ ಚೋಳನು ನಡಸಿದ ಯುದ್ಧಪ್ರಸಂಗವೂ ಸತ್ಯೇಂದ್ರಚೋಳ ಕಥೆಯಲ್ಲಿ ಬರುತ್ತವೆ. ಈ ಸಂಗತಿಗಳು ಚೋಳಸಾಮ್ರಾಜ್ಯ ಸ್ಥಾಪಕನಾದ ರಾಜರಾಜಚೋಳನ ಮಗನಾದ ಮೊದಲನೆ ರಾಜೇಂದ್ರಚೋಳನ (ಕ್ರಿ. ಶ. ೧೦೧೨--೧೦೪೪) ಇತಿಹಾಸಕ್ಕೆ ಸಂಬಂಧಿಸಿದುವು. ಇದರಿಂದ ಪ್ರಾಚೀನವಾದ ಪೌರಾಣಿಕ ಕಥೆಯೊಂದು ಇತಿಹಾಸಕಾಲದ ಚಾರಿತ್ರಕ ಸಂಗತಿಗಳನ್ನು ಅಳವಡಿಸಿ ಕೊಂಡು ಒಂದು ಕೃತಿರೂಪವನ್ನು ತಾಳಿದೆಯೆಂದು ಹೇಳಬಹುದು.

## ಕವಿ, ಕಾವ್ಯಪ್ರಭಾವ

ಮಲ್ಲಣಾರ್ಯನು ಬಹು ಪ್ರಭಾವಶಾಲಿಯಾದ ಕವಿಯಾಗಿದ್ದನು. ವ್ಯಕ್ತಿಶಃ ಶೀಲಸಂಪನ್ನನಾಗಿದ್ದನು. ಆತನು ವೇದಾಂತ, ಸಿದ್ಧಾಂತ, ಲಕ್ಷಣ, ವೈದ್ಯ, ಭರತ, ಸಾಮುದ್ರಿಕ, ಜ್ಯೋತಿಷಾಲಂಕಾರ, ಸರಸಗೀತ, ವಾದ್ಯ, ಶಕುನ, ವ್ಯಾಕರಣ, ಸೂಪ, ರತಿಶಾಸ್ತ್ರದೊಳಗೆ ಪರಿಣತನಾಗಿದ್ದನೆಂದು ಕವಿ ಚೇರಮನು ತನ್ನ ಚೇರಮಾಂಕ ಕಾವ್ಯ (ಸು. ೧೫೨೦)ದಲ್ಲಿ ತಿಳಿಸಿರುವನು. ಮಲ್ಲಣಾರ್ಯನು ಚೇರಮನ ಗುರುವೂ ಆಗಿದ್ದನು. ಸಂಸ್ಕೃತ, ಕನ್ನಡವೇ ಮೊದಲಾದ ಸರಸಶಾಸ್ತ್ರಗಳು ಮಲ್ಲಣಾರ್ಯನ ಮುಖೋದ್ಗತವಾಗಿದ್ದುವೆಂದು ಶಾಂತೇಶನು ಹೇಳುವುದರಿಂದಲೂ ಮಲ್ಲಣಾರ್ಯನು ತನ್ನ ಕೃತಿಗಳಲ್ಲಿ ತಮಿಳು ಪದಗಳನ್ನು ಕೆಲವೆಡೆ ಬಳಸಿರುವುದರಿಂದಲೂ ಆತನಿಗೆ ತಮಿಳಿನ ಸಾಹಿತ್ಯ ಪರಿಚಯವಿದ್ದಿತೆಂದು ಊಹಿಸಬಹುದಾಗಿದೆ. "ಕವಿಪ್ರಸರಮಾ ಎಂಬಂತೆ ಸತ್ಯೇಂದ್ರನಾಕೃತಿಯಂ ಪೇೞ್ದು ನಿರಂತರಂ ಶಿವಕಥಾಸಂದೋಹಸೌಖ್ಯಂ ಗಳಂ ಕ್ಷಿತಿಯೊಳ್ ಬೋಧಿಸಿ ಎಸೆವ ಮಲ್ಲಣಾರ್ಯ"ರೇ ಮೊದಲಾದ ರಸಿಕ ಕವೀಶ್ವರರು ತನ್ನನ್ನು ಮೆಚ್ಚಿ ಕೃತಿರಚನೆ ಮಾಡುವಂತೆ ತಿಳಿಸಿದರೆಂದು ಪ್ರಭುಗನು ತನ್ನ 'ವೈಭೋಗ ರಾಜಾಸ್ಥಾನ'ದಲ್ಲಿ (ಕ್ರಿ. ಶ. ೧೫೨೬) ಹೇಳಿಕೊಂಡಿರುವನು. ಆ ಅನಂತರ ಬಂದ

ವೀರಶೈವ ಕವಿಗಳು ಮಲ್ಲಣಾರ್ಯನಿಗೆ ಋಣಿಗಳಾಗಿರುವರು. ಭೈರವೇಶ್ವರ ಕಾವ್ಯ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ರಾಘವಾಂಕ ಕಾವ್ಯ, ಗುರುರಾಜಚಾರಿತ್ರ, ಬಸವೇಶ್ವರಪುರಾಣದ ಕಥಾಸಾಗರ, ಭೈರವೇಶ್ವರ ಕಾವ್ಯದ ಕಥಾಸೂತ್ರರತ್ನಾಕರ, ಚೆನ್ನಬಸವ ಪುರಾಣ, ಸತ್ಯೇಂದ್ರಚೋಳ ಸಾಂಗತ್ಯವೇ ಮೊದಲಾದ ಪುರಾಣ ಕಾವ್ಯಗಳಲ್ಲಿ ಭಾವಚಿಂತಾರತ್ನದ ಕಥೆ ಕಂಡುಬರುತ್ತದೆ ಕೃತಾರ್ಥರಿಗೆ ಕಲ್ಪಲತೆಯಾದ ಆ ಸತ್ಯೇಂದ್ರಚೋಳ ಕಥೆಯನ್ನು 'ವರ ಮಲ್ಲಣಾರ್ಯರುರ್ವೀ ಕವಿರಾಜರಾಜಿನುತ ಮಾಗಿರೆ ವರ್ಣಕದಿಂದೆ ಭಾವರತ್ನಾಕರಮಾಗಿ' ಹೇಳಿದುದನ್ನೇ ಷಡಕ್ಷರದೇವನು (೧೬೫೫) ವಸ್ತುಕವಾಗಿ ರಚಿಸಿದನು.

ಭಾವಚಿಂತಾರತ್ನವನ್ನು ಹೋಲುವ ಒಂದು ಕನ್ನಡ ಕೃತಿ ಎಂದರೆ ಮಾಧವಾಂಕ ಕಾವ್ಯ*. ಅದರ ಕರ್ತೃ ಶಂಕರಕವಿ. ಹದಿನೆಂಟನೆಯ ಶತಮಾನಕ್ಕೆ ಸೇರಿದ ಆ ಕೃತಿ ಅಲಂಕಾರಗಳಿಂದ ತುಂಬಿದ ಒಂದು ಷಟ್ಪದೀ ಕಾವ್ಯ. ಬೆಜವಾಡಿ ಪಟ್ಟಣದ ದೊರೆಯಾದ ಮಾಧವಾಂಕನೇ ಆ ಕಾವ್ಯದ ಸತ್ಯೇಂದ್ರಚೋಳ. ಆತನು ಬಹುಶಃ ಆಂಧ್ರದೇಶದ ದೊರೆ. ಆತನನ್ನು ಕುರಿತು ಶಂಕರಕವಿಯ ಕೃತಿ ಮಲ್ಲಣಾರ್ಯನ ಭಾವಚಿಂತಾರತ್ನಕ್ಕೆ ಅಥವಾ ಷಡಕ್ಷರದೇವನ ರಾಜಶೇಖರವಿಲಾಸಕ್ಕೆ ಋಣಿಯಾಗಿರ ಬಹುದೆಂದು ತೋರುತ್ತದೆ.

ಕಾವ್ಯದೃಷ್ಟಿಯಿಂದ ಸರಸವಾಗಿರುವಂತೆಯೇ ಪಾಂಡಿತ್ಯದೃಷ್ಟಿಯಿಂದ ಪ್ರೌಢ ವಾಗಿಯೂ ಇರುವ ಮಲ್ಲಣಾರ್ಯನ ಭಾವಚಿಂತಾರತ್ನದಿಂದ ಜಾಯೇಂದ್ರನು ಕೆಲವು ಅಲಂಕಾರಗಳಿಗೆ ಉದಾಹರಣೆಯಾಗಿ ಕೆಲವು ಪದ್ಯಗಳನ್ನು ಆರಿಸಿಕೊಂಡು ತನ್ನ 'ಕರ್ಣಾಟಕ ಕುವಲಯಾನಂದಾಲಂಕಾರಶಾಸ್ತ್ರ' ಗ್ರಂಥದಲ್ಲಿ ಕೊಟ್ಟಿರುವನು. ಹೀಗೆ ಸಲ್ಲಕ್ಷಣವೂ ಸ್ಫೂರ್ತಿದಾಯಕವೂ ಆದ ಮಲ್ಲಣಾರ್ಯನ ಭಾವಚಿಂತಾರತ್ನದ ಕಥೆ ಕನ್ನಡದಲ್ಲಿಯೇ ಅಲ್ಲದೆ ತೆಲುಗಿನಲ್ಲಿಯೂ ಕಂಡುಬರುತ್ತದೆ. ಹಿಂದೆ 'ನಲಂಗನ್ನಡ' ದಲ್ಲಿ ಆರ್ಯರು ಹೇಳಿದ ಕೃತಿಯನ್ನೇ ತೆಲುಗಿನಲ್ಲಿ ದ್ವಿಪದಕಾವ್ಯವನ್ನಾಗಿ ಮಾಡೆಂದು ಚಕಿಲಾಲ ಲಿಂಗಪ್ಪನು ಪ್ರೇರಿಸಿದನೆಂದೂ ಅದರಂತೆ ನವಚೋಳ ರಾಜರನ್ನು ಕುರಿತ ಆ ಕನ್ನಡ ಕೃತಿಯನ್ನೇ ತಾನು 'ನವಚೋಳ ಚರಿತ್ರ'ವನ್ನಾಗಿ ಮಾಡಿದೆನೆಂದೂ ಪೋಸೆಟ್ಟಿ ಲಿಂಗನಕವಿ ತನ್ನ ಆ ಗ್ರಂಥದಲ್ಲಿ ತಿಳಿಸಿರುತ್ತಾನೆ. ಆ 'ನವಚೋಳ

---

*Archaeological Survey of Mysore. Annual Report 1935.

ಚರಿತ್ರ '*ದಲ್ಲಿ ಸತ್ಯೇಂದ್ರಚೋಳನ ಕಥೆಯಿದೆ. ಪೋಸೆಟ್ಟಿ ಲಿಂಗನಕವಿಯ ಕಾವ್ಯದ ವಸ್ತು ಸಾಸಲ ಭೈರವೇಶ್ವರ ಕಾವ್ಯದ ವಸ್ತುವನ್ನೊಳಗೊಂಡಿದೆ. ಸಾಸಲ ಭೈರವೇಶ್ವರ ಕಾವ್ಯದಲ್ಲಿ ಬರುವ ಸತ್ಯೇಂದ್ರಚೋಳ ಕಥೆಗೂ 'ನವಚೋಳ ಚರಿತ್ರ 'ದಲ್ಲಿ ಬರುವ ಸತ್ಯೇಂದ್ರಚೋಳ ಕಥೆಗೂ ಬಹು ಸಾಮ್ಯವಿದೆ. ಅದರಿಂದ ಪೋಸೆಟ್ಟಿ ಲಿಂಗನಕವಿ ಹೇಳುವ ಕನ್ನಡ ಕೃತಿಕರ್ತರಾದ 'ಆರ್ಯರು' ಕಿಕ್ಕೇರಿಯಾರಾಧ್ಯ ನಂಜುಂಡನಾಗಿದ್ದರೂ ಇರಬಹುದು. ಆತನ ಮೂಲಕ ಸತ್ಯೇಂದ್ರಚೋಳ ಕಥೆ ಕನ್ನಡದಿಂದ ತೆಲುಗಿಗೂ ಹಬ್ಬಿದೆ ಎಂದು ಕಾಣುತ್ತದೆ. ಮಲ್ಲಣಾರ್ಯನ ಶೈಲಿಯಲ್ಲಿ ನಾವು ಕಾಣುವ ವೃತ್ತ್ಯನುಪ್ರಾಸದ ಸೊಬಗನ್ನು ಪೋಸೆಟ್ಟಿ ಲಿಂಗನ ಕವಿಯ ಸತ್ಯೇಂದ್ರಚೋಳ ಕಥೆಯಲ್ಲಿಯೂ ಕಾಣಬಹುದು.

## ವಿಮರ್ಶೆ

ಭಾವಚಿಂತಾರತ್ನ ಒಂದು ಕಥನಕಾವ್ಯ. ಕಥೆ ಕೈಲಾಸದಲ್ಲಿ ಪ್ರಾರಂಭವಾಗಿ ಭರತದೇಶದ ಭಾಗ್ಯವಾದ ಚೋಳನಾಡಿನಲ್ಲಿ ಅಡಿಯಿಟ್ಟು ಮತ್ತೆ ಕೈಲಾಸದಲ್ಲಿ ಸಮಾಪ್ತಿಯಾಗುತ್ತದೆ. ಗುಹನ ಓಂಕಾರ ಪ್ರಸಂಗ ಸ್ವಾರಸ್ಯವಾಗಿದೆ. ತಿರುಕೊಳವಿ ನಾಚಿಯ ಜೀವನದ ದಾರುಣಕಥೆ ಯಾರಿಗಾದರೂ ಮನಕರಗಿಸದಿರದು. ಆಕೆಯ ಶೋಕವನ್ನು ಕಂಡು ಕಣ್ಣೀರಿಡದವರಿಲ್ಲ. ಕಥೆಯ ನಡೆ ಬೇಗ ಬೇಗ ಸಾಗುತ್ತದೆ. ಸಮುದ್ರ, ಚಂದ್ರ-ಸೂರ್ಯರ ಉದಯಾಸ್ತ—ಇವುಗಳ ಮಿತ ವರ್ಣನೆಯಿದೆ. ಒಂದೇ ವಸ್ತುವನ್ನು ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ವರ್ಣಿಸುವ ಜಾಣ್ಮೆಯಲ್ಲಿ ವೈವಿಧ್ಯವನ್ನು ಕವಿ ತಂದಿರುತ್ತಾನೆ. ಅನಾವಶ್ಯಕವಾದ ವರ್ಣನೆಯನ್ನು ತಂದುಹಾಕಿ ಕಥೆಯ ಗತಿಯನ್ನು ಕವಿ ಕುಗ್ಗಿಸಿಲ್ಲ. ನಿರೂಪಿಸಬೇಕಾದ ವಿಷಯದ ಮೇಲೆ ದೃಷ್ಟಿ ನಾಟಿದೆ.

ಕೃತಿಯ ಮೊದಲಿಂದ ಕಡೆತನಕ ಉತ್ಪ್ರೇಕ್ಷೆಯಿಲ್ಲದ ಪದ್ಯವಿಲ್ಲವೆಂದೂ ಆ ಕಾರಣ ಭಾವಚಿಂತಾರತ್ನವೆಂಬ ಹೆಸರು ಬಂದಿದೆ ಎಂದು ಕವಿ ಹೇಳಿರುವನು. ಉತ್ಪ್ರೇಕ್ಷೆ ಪ್ರಧಾನವಾದರೂ ಉಳಿದ ಅಲಂಕಾರಗಳೂ ರಸಪೋಷಕವಾಗಿ ಪದ್ಯಗಳ ರಮ್ಯತೆಯನ್ನು ಹೆಚ್ಚಿಸಿವೆ. ಈ ಕಾವ್ಯರತ್ನದಲ್ಲಿ ತೋರುವ ಲಕ್ಷಣೋಕ್ತಿಯೇ

---

*ಮೂರನೆಯ ಆಶ್ವಾಸ.

ಗುಣಕೆ ಕಾರಣ, ಹೃದಯಭೂಷಣವೆಂದು ಕವಿ ರಸವೇ ಕಾವ್ಯದ ಜೀವವೆಂದುಹೇಳಿ, ತಿಳಿಸಿರುವನು. ಸಂಸ್ಕೃತ ಪದಗಳನ್ನು ಅತಿಯಾಗಿ ಬಳಸದೆ ಅಚ್ಚಗನ್ನಡ ಪದಗಳ ಸೊಬಗನ್ನು ಕವಿ ಕಾಣಿಸಿದ್ದಾನೆ. ಪದಪ್ರಯೋಗಗಳು ಅರ್ಥಗರ್ಭಿತವಾದುವು, ಅವು ಕೇವಲ ಮಾತಿನ ಮಾಲೆಯಲ್ಲ ಎಂಬುದನ್ನು ಮನಗಾಣಬೇಕಾದರೆ ಅದರ ಮೂಲಾರ್ಥ ವನ್ನು ತಿಳಿದಿರಬೇಕಾಗಿರುತ್ತದೆ. ಉದಾಹರಣೆಗೆ ‘ ಸಿತಕಿರಣಜೂಟನಸಿತಗ್ರೀವನ ಭಯಕರ ಜಗತ್ಕುಕ್ಷಿ ಹರಿನೇತ್ರಾಂಘ್ರಿಯಭವನಣುಗರ್ಗುಂಟೆ ತನ್ನವರ್ಗಳು ’ ವ್ಯಾಘ್ರ ಚರ್ಮದ ವಿಯದ್ಗಂಗಾಧರಂ ಯಮಧ್ವಂಸಿ ಮಾಡಿದ ಬಾಧೆ ತತ್ಪ್ರೀತಿಯಲೆ ತಾಪತ್ರಯಂ ಪೊರ್ದದೆಂದುಂ ಭಕ್ತರಂ.’ ಇಲ್ಲಿನ ಪದಪ್ರಯೋಗದಿಂದ ಓದುಗನ ಸಾಮಾನ್ಯವಾದ ಅರ್ಥಕ್ಕೆ ಕುಂದುಬಾರದಂತಿದ್ದರೂ ಗೂಢಾರ್ಥವನ್ನು ಒಳಗೊಂಡ ಕಾರಣ ಪ್ರೌಢವಾಗಿದೆ. ವರ್ಣನೆಯಲ್ಲಿ ಕೆಲವೆಡೆಗಳಲ್ಲಿ ಸಾಮಾನ್ಯವಾದ ಓದುಗನಿಗೆ ಶೈಲಿ ಕ್ಲಿಷ್ಟವಾಗಬಹುದು. ಆದರೆ ಕವಿಯ ಕಥನಶೈಲಿ ಸುಲಭವೂ ಸರಳವೂ ಆಗಿದೆ ಎಂಬುದನ್ನು ನಾವು ಕಾಣಬಹುದಾಗಿದೆ.

ಕವಿಯ ಕಥಾರಚನೆಯ ಕೌಶಲವು ಗುಹನ ಪೌರಾಣಿಕ ಕಥೆಯಿಂದ ಅಂಕುರಿಸಿ ಭಕ್ತಿರಸಪ್ರಧಾನವಾದ ಸತ್ಯೇಂದ್ರಚೋಳನ ಕಥೆಯಲ್ಲಿ ದಾಂಗುಡಿಯಿಟ್ಟು ಕುಸುಮಿಸಿ, ಕರುಣರಸಮಯವಾದ ತಿರುಕೊಳವಿನಾಚಿಯ ಕಥೆಯಲ್ಲಿ ಫಲಿಸಿದೆ. ಕಥೆ ಹೇಳುವಾಗ ಪಾಂಡಿತ್ಯವನ್ನು ತೋರಿಸಬಾರದೆಂದು ಕವಿಗೆ ಗೊತ್ತು. ಆದರೆ ಎಲ್ಲೋ ಒಂದೆಡೆ ಕರುಣರಸವಲ್ಲಿ ಅಲಂಕಾರವನ್ನು ತಂದನೆಂದು ಇಡೀ ಕಾವ್ಯದ ಬೆಲೆಗೆ ಕುಂದೆಣಿಸುವುದು ಉಚಿತವೆನಿಸದು. “ ಕಥಾನಕದಲ್ಲಿ ಸ್ವತಂತ್ರವೇನೂ ಇಲ್ಲ. ಮೂಲಕಥೆಯಲ್ಲಿಯೂ ಅಂಥ ಸ್ವಾರಸ್ಯವಿಲ್ಲ ” ಎಂಬುದು ಹುರುಳಿಲ್ಲದ ಆಪಾದನೆ. ಕಥೆಯ ರಚನಾತಂತ್ರವನ್ನೂ, ಸ್ವರೂಪವನ್ನೂ ವಿವೇಚಿಸದೆ ಆಡಿರುವ ಮಾತುಗಳವು.

“ ಕಾವ್ಯ । ಪಾವನಕೃತಂ ಕವಿಕಣಾ ದೇವಧರ್ಮಾರ್ಥ
ದಾ ವಿಶೇಷಜ್ಞ ಸತ್ಕವಿ ಋಷಿಕುಲೋದ್ಭವಂ

ಎಂದು ತಿಳಿಸಿರುವ ಮಲ್ಲಣಾರ್ಯನು ಕಾವ್ಯದ ಪವಿತ್ರತೆಗೆ ಬೆಲೆಗೊಟ್ಟವನು. ದೇವಧರ್ಮಾರ್ಥಗಳ ಕಡೆ ಗಮನವಿಟ್ಟವನು. ಆತನು ಕವಿತ್ವದ ಹಿರಿತನಕ್ಕೆ ಹಲ್ಲುಗಿರಿದವನಲ್ಲ. ಕವಿತ್ವದ ಮೇಲ್ಮೆಯೇ ಆತನ ಹೆಗ್ಗುರಿ ಎಂಬುವನ್ನೂ ಸಹೃದಯರು ಮನಗಾಣಬೇಕಾಗಿದೆ.

ಕಥೆ ಭಕ್ತಿರಸಪ್ರಧಾನವಾದುದು. ಅದರ ಅಂಗವಾಗಿ ಕರುಣರಸ ಬಂದಿದೆ. ಕರುಣರಸವನ್ನು ಹೆಚ್ಚಿಸಿ ಆನಂದದಲ್ಲಿ ಕಾವ್ಯವನ್ನು ಮುಗಿಸುವುದು ಕವಿಯ ಉದ್ದೇಶವಲ್ಲ; ಶಿವಮಹಿಮೆಯನ್ನು ತೋರುವುದು ಕಥೆಯ ಮುಖ್ಯ ಗುರಿ. ಸಂತೋಷದಲ್ಲಿ ಕಥೆ ಮುಗಿಯದಿದ್ದಲ್ಲಿ ಶಿವಮಹಿಮೆ ಎಲ್ಲಿ? ಶಿವನ ನಾಮಕ್ಕೂ ಶಿವನಿಗೂ ಭಿನ್ನವಿಲ್ಲ; ನಿಷ್ಠೆಯಿಂದ ತನ್ನನ್ನು ನೆನೆಯುವ ಭಕ್ತರಿಗೆ ಶಿವ ನೊಲಿಯುವನು ; ಕಷ್ಟಕ್ಕೀಡಾದವರನ್ನು ಕೈಹಿಡಿದು ಶಿವನು ರಕ್ಷಿಸುವನು ಎಂಬ ಭಕ್ತಿಭಾವದ ದೃಷ್ಟಿಯಿಂದ ಕರುಣರಸವನ್ನು ಭಕ್ತಿರಸಕ್ಕೆ ಅಂಗವಾಗಿ ಪೋಷಿಸಿರು ವುದು ಉಚಿತವಾಗಿಯೇ ಇದೆ. ತಿರುಕೊಳವಿನಾಚಿಯ ಜೀವನಕಥೆಯಲ್ಲಿನ ಒಂದೊಂದು ಘಟನೆಯ ನಿರೂಪಣೆಯೂ ಕರುಣರಸಕ್ಕೆ ಪೋಷಕವಾಗಿದೆ. ಭಕ್ತಿರಸವನ್ನು ಶೃಂಗಾರದಲ್ಲಿಯೂ, ಹಾಸ್ಯವನ್ನು ಭಕ್ತಿರಸದಲ್ಲಿಯೂ ತಂದು ಕವಿ ಯಶಸ್ವಿಯಾಗಿದ್ದಾನೆ. ಪೌರಾಣಿಕದೃಷ್ಟಿಯ ಸುಂದರವಾದ ಕಲ್ಪನೆಗಳು ಆ ಭಕ್ತಿಯಲ್ಲಿ ಮೂಡಿ ಕವಿಯ ಹೃದಯಾನುಭವವನ್ನು ಮಿಡಿಯುವುವು.

ಸತ್ಯೇಂದ್ರಚೋಳನೇ ಕಥಾನಾಯಕ. ಶಿವಭಕ್ತನಾದ ಆತನು ರಾಜ ಧರ್ಮದ ಆದರ್ಶವ್ಯಕ್ತಿ; ಭಕ್ತವಾತ್ಸಲ್ಯದ ಕರುಣಾನಿಧಿ; ಭಕ್ತವಧೆಗಿಂತ ಹಾನಿ ಯಿಲ್ಲವೆಂದು ಭಾವಿಸಿ ತನ್ನ ಒಬ್ಬನೇ ಒಬ್ಬ ಮಗನನ್ನು ಅಪರಾಧಿ ಎಂದು ಕಂಡ ಬಳಿಕ ಆತನನ್ನು ಕೊಲ್ಲಿಸಿದ ನ್ಯಾಯನಿಷ್ಠಾಪರ. ಅಪರಾಧಿಯಾದ ತನ್ನನ್ನು ಕೊಲ್ಲುವುದೇ ಧರ್ಮ ಎಂದು ಮುಂದೆ ಬಂದು ನಿಂತ ಮಗನಾದರೋ 'ಓಂಕಾರ ಬೀಜಂ ಕಂದವಾಗಿ' ಜನಿಸಿ ಶಿವಮಂತ್ರಸಿದ್ಧನಾದವನು. ರಾಜನ ಅಪ್ಪಣೆ ಯನ್ನು ಮೀರಲಾರದೆ ತನ್ನನ್ನೇ ಕೊಂದುಕೊಂಡ ಮಂತ್ರಿಯೇ ಪತಿವ್ರೋಹಿ. ತನ್ನ ಭೃತ್ಯತೆಗೆ ಹಾನಿ ಬಂದರೂ ಬರಲಿ, ಶಿವನನ್ನು ನೆನೆಯದೆ ಬರುಗಾಯದಿಂದ ಸಾಯುವುದು ಲೇಸೆಂದ ಸಂಡಾಯಿ ಕರ್ತವ್ಯಪರನೂ ಶಿವಭಕ್ತಿನಿಷ್ಠನೂ ಆದ ಭೃತ್ಯ. ಶಿವನನ್ನೇ ನಂಬಿ ಕಷ್ಟವನ್ನು ಸೈರಿಸಿ ಬರಿದಾದ ಬಾಳನ್ನು ಪುತ್ರ ಪ್ರೇಮದಿಂದ ನಡಸಿದವಳೇ ತಿರುಕೊಳವಿನಾಚಿ. ಈ ಎಲ್ಲಪಾತ್ರಗಳ ದೃಢನಿಷ್ಠೆಯ ಅದ್ಭುತ ದೃಶ್ಯದ ಚಿತ್ರಣದಲ್ಲಿ ಕವಿ ಶಿವಮಂತ್ರಮಹಿಮೆಯನ್ನೂ ಪಾತ್ರಗಳ ಜೀವನಸಿದ್ಧಿಯನ್ನೂ ವ್ಯಕ್ತಪಡಿಸಿದ್ದಾನೆ. ಕಥೆಯಲ್ಲಿ ಒಳ್ಳೊಳ್ಳೆಯ ಸಂವಾದಗಳು ಅಲ್ಲಲ್ಲಿ ಬಂದು ಕಥನಕಾವ್ಯದ ಸೊಬಗನ್ನು ಹೆಚ್ಚಿಸಿವೆ.

## ಗ್ರಂಥ ಪಾಠ

ಈ ಗ್ರಂಥವನ್ನು ಪರಿಷ್ಕರಿಸುವುದರಲ್ಲಿ ಉಪಯೋಗಿಸಿಕೊಂಡಿರುವ ಓಲೆಯ ಪ್ರತಿಗಳು ಆರು. ಇವುಗಳಿಗೆ ಅ. ಆ. ಇ. ಈ. ಉ. ಒ. ಎಂದು ಸಂಕೇತಗಳನ್ನು ಕೊಡಲಾಗಿದೆ. ಇವುಗಳ ಜೊತೆಗೆ ಕೈಬರೆಹದ ಎರಡು ಪ್ರತಿಗಳ ಸಹಾಯವನ್ನು ತೆಗೆದುಕೊಳ್ಳಲಾಗಿದೆ. ಈ ಕೈಬರೆಹದ ಪ್ರತಿಗಳನ್ನು ಓ. ಗ. ಎಂದು ಕರೆಯಲಾಗಿದೆ.

೧. ಅ.ಆ.ಇ—ಈ ಮೂರು ದಂಡಿನಶಿವರದ ಕೈ। ಕಲ್ಲಿನಾಥಸ್ವಾಮಿಗಳವರು ಇಟ್ಟಿದ್ದ ಪ್ರತಿಗಳು—ಶ್ರೀ ವರ್ಮ ಸಿದ್ಧವೀರಪ್ಪನವರಿಂದ ದೊರೆತುವು. 'ಅ' ಮತ್ತು 'ಇ' ಪ್ರತಿಗಳು ಬಹುಮಟ್ಟಿಗೆ ಒಂದೇ ಎಂದು ಹೇಳಬಹುದು. 'ಆ' ಪ್ರತಿಯು ಉ.ಒ.ಗ. ಪ್ರತಿಗಳನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ.

೨ 'ಈ' 'ಉ' ಪ್ರತಿಗಳು ಶ್ರೀ ಚನ್ನಮಲ್ಲಿಕಾರ್ಜುನ ಅವರಿಂದ ದೊರೆತವು. 'ಈ' ಪ್ರತಿ 'ಅ' 'ಗ' ಪ್ರತಿಗಳನ್ನು ಬಹುಮಟ್ಟಿಗೆ ಹೋಲುತ್ತದೆ. 'ಉ'—ಮರಿಸಿದ್ಧಲಿಂಗದೇಶಿಕನಿಂದ ರಚಿತವಾದ ಟೀಕೆಯನ್ನೊಳಗೊಂಡ ಪ್ರತಿ.

೩ ಒ.ಓ—ಈ ಎರಡೂ ಮೈಸೂರು ಓರಿಯೆಂಟಲ್ ರಿಸರ್ಚ್ ಇನ್ಸ್ಟಿಟ್ಯೂಟ್‌ನಲ್ಲಿರುವ ಪ್ರತಿಗಳು. ಇವೆರಡೂ ಮೇಲ್ಕಂಡ ಟೀಕೆಯನ್ನು ಹೊಂದಿರುವುವು. 'ಒ'—ತಾಳೆಯ ಪ್ರತಿ. ಓ—ಕಾಗದದ ಪ್ರತಿ. ಇದು 'ಅ' ಪ್ರತಿಯನ್ನು ಹೋಲುತ್ತದೆ.

೪ ಗ—ಇದು ಹೆಡ್‌ಮಾಸ್ಟರ್ ಜಿ. ಎಸ್. ಮುರಿಗಪ್ಪನವರು, ಪ್ಲೀಡರ್, ಗುಬ್ಬಿ, ಅವರಿಂದ ದೊರೆತ ಬಹು ಹಿಂದಿನಕಾಲದ ಕಾಗದದ ಪ್ರತಿ. ಈ ಪ್ರತಿಯನ್ನು ಕ್ರಿ.ಶ. ೧೮೦೨ರಲ್ಲಿ ಮಾಡಿದಹಾಗೆ ಗ್ರಂಥಾಂತ್ಯದ ಹೇಳಿಕೆಯಿಂದ ನಿರ್ಧರಿಸಬಹುದಾಗಿದೆ.

ಈ ಮೇಲೆ ಹೇಳಿರುವ ಯಾವ ಪ್ರತಿಯಲ್ಲಿಯೂ ೞ (ೞಕಾರ) ಕಂಡು ಬರುವುದಿಲ್ಲ. ಅ.ಆ.ಇ.ಈ. ಪ್ರತಿಗಳಲ್ಲಿ ಶಕಟರೇಫ (ಱಕಾರ) ವನ್ನು ಬಳಸಿದೆ. 'ಈ' ಪ್ರತಿಯಲ್ಲಿ ಱಕಾರಕ್ಕೆ ಬದಲು ಸಾಮಾನ್ಯ ರೇಫವನ್ನು ಕೆಲವೆಡೆ ಬಳಸಿದೆ. 'ಆ' ಪ್ರತಿಯಲ್ಲಿ ಱಕಾರ ಕೆಲವೆಡೆ ಉಂಟು, ಬಹಳ ಕಡೆ ಇಲ್ಲ. ಆದರೆ 'ರ'

ಕಾರ 'ಱ'ಕಾರಗಳನ್ನು ಪ್ರಾಸಸ್ಥಾನದಲ್ಲಿ ಕವಿ ಬೆರಸದಿರುವುದರಿಂದ ಪ್ರಕೃತ ಗ್ರಂಥವಲ್ಲಿ ಶಕಟರೇಫವನ್ನು ಉಳಿಸಿಕೊಳ್ಳಲಾಗಿದೆ.*

ಅನುಬಂಧವಲ್ಲಿ ಕೊಟ್ಟಿರುವ ಹರಿಹರನ ಮನುಚೋಳರಗಳೆಯನ್ನು ಎರಡು ಓಲೆಯ ಪ್ರತಿಗಳ ಸಹಾಯದಿಂದ ಪರಿಷ್ಕರಿಸಲಾಗಿದೆ. ಇವುಗಳಲ್ಲಿ ಒಂದು ಪ್ರತಿ ಮೈ. ಓ. ರಿ. ಇ. ನಲ್ಲಿದ್ದದ್ದು(K.A. ೩೮೫). ಈ ಪ್ರತಿಯಲ್ಲಿ ಸೂಕ್ತವಾದ ಪಾಠವನ್ನು ಸ್ವೀಕರಿಸಿ ಈ ರಗಳೆಯನ್ನು ನಮಗೆ ದೊರೆತ ಮತ್ತೊಂದು ಓಲೆಯಪ್ರತಿಯ ಆಧಾರದಿಂದ ಸದ್ಯದ ಆವಶ್ಯಕತೆಗನುಗುಣವಾಗಿ ಸಂಪಾದಿಸಲಾಗಿದೆ.

## ಟೀಕಾಕಾರನ ಪರಿಚಯ

ರಾವ್ ಬಹದ್ದೂರ್ ಆರ್. ನರಸಿಂಹಾಚಾರ್ಯರು ತಮ್ಮ ಕವಿಚರಿತ್ರೆಯಲ್ಲಿ† ಪಟ್ಟುಗಂಬಳಿ ಸಿದ್ದಲಿಂಗಸ್ವಾಮಿ ಗುಬ್ಬಿಯ ಮಲ್ಲಣಾರ್ಯನ ಭಾವಚಿಂತಾರತ್ನಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ. ಈತನು ವೀರಶೈವ ಕವಿ ಎಂದು ತಿಳಿಸಿದ್ದಾರೆ. ಭಾವಚಿಂತಾರತ್ನದ ಟೀಕೆಯನ್ನು ಬರೆದವರು ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ ಯವರೆಂದು ಆಯಾ ಟೀಕಾಗ್ರಂಥಗಳ ಅಂತ್ಯದಲ್ಲಿ ಪ್ರತಿಮಾಡಿದವರು ಹೇಳಿರು ತ್ತಾರೆ. ಭಾವಚಿಂತಾರತ್ನಕ್ಕೆ ಟೀಕೆಯನ್ನು ಬರೆದು ಪೂರೈಸಿದ ಮೇಲೆ ವ್ಯಾಖ್ಯಾನ ಕಾರನು ಸಿದ್ಧಲಿಂಗಸ್ತುತಿಯನ್ನು ಮಾಡಿ, ಆ ಬಳಿಕ

"ವರ ಭಾವಚಿಂತರತ್ನಕೆ
ಬರೆದಂ **ಮರಿಸಿದ್ಧಲಿಂಗದೇಶಿಕ** ಟೀಕಂ।
ಕರುಗಾಯ್ಗಳೋದಿ ಅರ್ಥವ
ನರಿಯದೆ ಜರ್ಜುವರು ಮತ್ತವರೆದೆಗಿದು ಕೊಂತಂ॥"

ಎಂದು ಹೇಳಿರುವನು. ಅಲ್ಲದೆ ಈ ತನ್ನ ಕಂದಕ್ಕೆ ತಾನೇ ವ್ಯಾಖ್ಯಾನವನ್ನೂ ಮಾಡಿರುವನು. ಈ ಸಂದರ್ಭದಲ್ಲಿ 'ಮರಿಸಿದ್ಧಲಿಂಗ' ಕರ್ತೃ, ಟೀಕ ಬರೆದಂ ಕ್ರಿಯೆ

---

*ಮಂ. ಆ. ರಾಮಾನುಜಯ್ಯಂಗಾರ್ಯರಿಂದ ಪರಿಶೋಧಿತವಾಗಿ ಮೈಸೂರು ಜಿ. ಟಿ. ಎ. ಪ್ರೆಸ್ಸಿನಲ್ಲಿ ಮುದ್ರಿತವಾದ ಭಾವಚಿಂತಾರತ್ನದ ದ್ವಿತೀಯ ಮುದ್ರಣಪ್ರತಿ (೧೯೩೩) ಯನ್ನು ನಮಗೆ ದೊರೆತಿದ್ದ ಹಲವು ತಾಳೆಯ ಪ್ರತಿಗಳೊಡನೆ ಹೋಲಿಸಿ ನೋಡುವಲ್ಲಿ ಆ ಮುದ್ರಿತ ಪ್ರತಿ ಕೇವಲ ಸಾಮಾನ್ಯ ಪ್ರತಿಯಾಗಿ ಕಂಡುಬಂದುದರಿಂದ ಅದರ ಪಾಠಾಂತರವನ್ನಿಲ್ಲಿ ಕೊಡುವ ಗೋಜಿಗೆ ಹೋಗಿಲ್ಲ.

†ದ್ವಿ. ಸಂ. ೫೩೨ ನೆಯ ಪುಟ.

ಎಂದು ತಿಳಿಸಿರುವನು. ಇದಿಷ್ಟರಿಂದಲೆ ಟೀಕಾಕಾರನ ಹೆಸರು "ಮರಿಸಿದ್ಧಲಿಂಗ" ಎಂಬುದು ಸ್ಪಷ್ಟ, ಆತನು ತನ್ನನ್ನು ಚರಜಂಗಮವೆಂದೂ ದೇಶಿಕನೆಂದೂ ಹೇಳಿಕೊಂಡಿರುವುದರಿಂದ ಆತನು ಒಬ್ಬ ವೀರಶೈವಸ್ವಾಮಿಯಾಗಿರಬೇಕೆಂದು ಊಹಿಸಬಹುದು. ಆತನು ರೇಷ್ಮೆಯ (ಪಟ್ಟು) ಕಂಬಳಿಯನ್ನು ಧರಿಸುತ್ತಿದ್ದುದರಿಂದಲೋ ಏನೊ ಇತರರು ಆತನನ್ನು ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿ ಎಂದು ಕರೆದಿರುವ ಹಾಗೆ ತೋರುತ್ತದೆ.

"ದುರ್ಮತಿ ಸಂವತ್ಸರದ ಶ್ರಾವಣ ಶುದ್ಧ ೧೧ ಸೋಮವಾರ, ಮೂಲಾ ನಕ್ಷತ್ರ ಧನುರ್ರಾಶಿ, ವಿಷ್ಕಂಭಯೋಗ ತೈತುಲಕರಣ ಒಂಬತ್ತಾಸಿನಲ್ಲಿದ್ದ ಅಮೃತ ಗಳಿಗೆ ಬೃಹಸ್ಪತಿ ಸತ್ವವೇಳೆಯದ ಸಾವಿತ್ರಿಕೆಯೆಂಬ ಪಂಚಾಂಗಪೂರ್ವಕವಲ್ಲಿ ಬ್ರಹ್ಮವಾರದ ಪಟ್ಟುಗಂಬಳಿ ಸಿದ್ಧಲಿಂಗಸ್ವಾಮಿಯವರು ಮಾಡಿದ ಟಿಪ್ಪಣಿವ ಬರೆದು ಸಮಾಪ್ತಿ ಮಾಡಿದೆ." ಎಂದು ಗ್ರಂಥದ ಕಡೆಯಲ್ಲಿ ಹೇಳಿರುವುದನ್ನು ನೋಡಿದರೆ ಮರಿಸಿದ್ಧಲಿಂಗದೇಶಿಕನು ಟೀಕೆಯನ್ನು ಕ್ರಿ.ಶ. ೧೭೪೧ ಜುಲೈ ೧೩ನೆಯ ತಾರೀಖು ಸೋಮವಾರ ಬರೆದು ಸಮಾಪ್ತಿಗೊಳಿಸಿದನೆಂದೂ, ಆತನು ಬ್ರಹ್ಮವಾರ ಎಂಬ ಸ್ಥಳಕ್ಕೆ ಸೇರಿದವನೆಂದೂ ನಿರ್ದಿಷ್ಟವಾಗಿ ಹೇಳಬಹುದು. ಆತನು ಕವಿ-ಹೃದಯವನ್ನೂ ಕಾವ್ಯಲಕ್ಷಣವನ್ನೂ ಮತ್ತು ರಚನಾರಹಸ್ಯವನ್ನೂ ಒಹು ಸೂಕ್ಷ್ಮವಾಗಿ ಅರಿತ ಪಂಡಿತನೆಂಬುದು ಆತನ ಟೀಕೆಯಿಂದ ಗೊತ್ತಾಗುತ್ತದೆ.

# ಭಾವಚಿಂತಾರತ್ನ ಸಂಗ್ರಹ

---

## ೧. ದ್ರಾವಿಡದೊಳೊರೆದುದಂ ಕನ್ನಡದಿ ಪೇಳ್ವೆ

ಶ್ರೀ ಗುರು ಸದಾನಂದ ವಾಗೀಶವರದ ತುಹಿ
ನಾಗಜಾರ್ಧಾಂಗ ಮಹಿಮಾಗರಿಮಚರಣ ಸಕ
ಲಾಗಮಸ್ತುತ್ಯ ಶಶಿಭಾಗಭೂಷಿತಮಕುಟ ಯೋಗಿಜನಹೃನ್ನಿವಾಸಾ ।
ರಾಗಾದಿ ರಹಿತ ಸುಖಸಾಗರನಲಾ ನೀಸು
ಭೋಗ ಮಲ್ಲೇಶ ಬಿಡದೀಗ೧ಲೆನ್ನಯ೧ ಕೃತಿಯ
ಭೂ ಗಗನ ದಿಗ್ಭರಿತವಾಗಿ ಪಸರಿಸುವಿನಂ ಸಾಗಿಸುವುದಕ್ಕಱಿಂದೆ ॥ ೧

ತೊಡೆಯನೇಱಿದಳಂಬಿಕಾಮಾತೆ ೨ವ್ಯಾಜದಿಂ೨
ಜಡವನಿತೆ ಶಿರವನಡರಲ್ ೩ಮೀಹ೩ ತಡೆಯೆ ತಲೆ
ಜಡೆಗಟ್ಟಿಯುರಿಯೆ ಪಣೆಗಣ್ಣೆಡದ ಕಣ್ ಕಂದೆ ಬಲ೪ಗಣ್ಣೊಳಡರೆ ಕೆಂಪು೪ ।
ಬಿಡದೆ ಮೆಯ್ಯೆಲುದೋಱೆ ಮಲಿನ ಕಂಠದೊಳುಣ್ಮೆ
ತಡೆಯದಂಗದ ಸಮ್ಮ ಒಣಗಿತೆಮ್ಮಯ್ಯಂಗೆ
ಒಡೆಯರಿಲ್ಲೆಂದು ಬಾಯೂಱೆ ಗುಹನಂ ನೋಡಿ ನಗುವ ಶಿವ ರಕ್ಷಿಸೆಮ್ಮಂ ॥ ೨

---

೧ಮೆನ್ನಯ(ಅ.ಈ.ಒ.ಗ) ೨ ವ್ಯಾಜ್ಯದಿಂ(ಅ.ಗ), ಪಾಜದಿಂ(ಇ). ೩ ಮಿಹಣ(ಒ).
೪ ಗಣ್ ಕೆಂಪಡರಲು(ಅ.ಇ), ಕಣ್ಣು ಕೆಂಪಡರಲು(ಈ.ಒ)

೧ಪರುಷನಂ೧ಗೆಯ್ಯೆ ದೀಕ್ಷಾರ್ಥಿಗಳನಲ್ಲಿ ಚಿ
ತ್ತರಣಿ ವಿಸ್ಫುರಿಸೆ ಹಸ್ತಾಬ್ಜವಿಕಸನವಾಗೆ
ಪರತರ ಬ್ರಹ್ಮಪುರುಷನ ಪೆತ್ತು ಸದ್ಭಕ್ತಿ ಭಾರತಿಯನಲ್ಲಿ ಪಡೆದು।
ಕರುಣದಿಂದಿರ್ವರ್ಗೆ ಪರಿಣಯಂ೨ಗೆಯ್ದು೨ಭಾ
ಸುರಶಿವರ್ಯಾಶಿನೀಲೇಶಕೇತಣಾರ್ಯರ್ಗಳನೊಳಲೆಸೆವ
ವರ ಸಿದ್ಧಮಲ್ಲಿಕಾರ್ಜುನ ಗುರುವೆ ಜಯಪರಾತ್ಪರವೆ ಮತ್ಕಲ್ಪತರುವೆ॥ ೩

ನಿರುಪಮ ನಿರಂಗನೆನಿಪಲ್ಲಮಪ್ರಭುರಾಯ
ಹರಭಕ್ತರೇ ಸಂಗಮೇಶನೆಂದೆಂಬ ಬಸ
ವರಸ ವಿಮಲಪ್ರಸಾದಾಂಗಿಯಹ ಚೆನ್ನಬಸವೇಶರಿವರಂಘ್ರಿಕಮಲ।
ಪರಮ ಷಟ್ಸ್ಥಲವಾದುವವ ನುತಿಸುವೆನ್ನ ನುಡಿ
ನಿರುತ ಷಟ್ಪದಿಯಾದುವಿವು ಕಮಲಜಾಂಡದೊಳ್
ಪರಕಲಿಸಿ ಪಸರಿಸುಗೆ ಚರಗುರು ಶಿವಾರ್ಚಕರ ಮನಕುತ್ಸವಂ ಬೀಱುತೆ॥ ೪

ಲಾಲ್ಯವೆಲೆ ದೇವ ನಿಮ್ಮಯ ವಚನ ಭಕ್ತರ್ಗ
ಮೂಲ್ಯವೆನ್ನಯ್ಯ ನಿನ್ನುರುಭಕ್ತಿ ಭಾಪು ನೈ
ರ್ಮಲ್ಯ ನಿನ್ನಯ ಕೀರ್ತಿಯಖಿಳ ದಿಕ್ಕಿನೊಳು ಯತಿರಾಜ ನೀನಾದ ಕತದಿಂ।
ಕಲ್ಯಾಣದಾದಿ ಬಸವೇ೫ಶ್ವರರ ಮಹತ್ವಮಂ
ಕಲ್ಯಾಣವಾಗಿ ಶರಣರ್ಗಱಿಪುವ್ಯೆ ಶಿವನ
ಕಲ್ಯಾಣದುತ್ಸವದ ನಾಗವಲ್ಲಿಯ ಮೆಱೆವ ಶಿವಪೂಜೆಯಾರ್ಯ ಶರಣು॥ ೫

ಎಲೆ ಮಲ್ಲಣಾರ್ಯ ಕೇಳ್ ನಿನ್ನಯ ಪಿತಾಮಹಂ
ಲಲಿತ ವಾತೂಲತಂತ್ರಕ್ಕೆ ಟೀಕಂ ಮಾಡಿ
ನಲಿದಾಗಮಗ್ರಂಥ ವಚನದಿಂ ಗಣಭಾಷ್ಯರತ್ನಮಾಲೆಯ ರಚಿಸಿದಾ।
ಸುಲಭನನ್ವಯಭವನೆ ಮದ್ಭಕ್ತವಾತ್ಸಲ್ಯ
ದಲಘುಮಾರ್ಗೋದ್ಧರಣ ಸತ್ಯೇಂದ್ರಚೋಳ ಭೂ
ಲಲನಾಧಿಪನ ಕೃತಿಯನೊರೆಯೆಂದ ದೇಶಿಕಾಣತಿಯಿಂದಲಾಂ ತೊಡಗಿದೆಂ॥ ೬

---

೧ ಸ್ಪರುಷನಂ(ಅ.ಆ). ಪರಿಸನಂ(ಇ). ೨ ಗೆಯ್ದು (ಈ) ೩ ವಾರ್ಯ (ಅ.ಆ.ಈ.ಬ) ೪ ರೊ (ಅ.ಆ.ಈ.) ೫ ಶನ(ಅ.ಬ)

ಕರುಣಾಳುವಮರಗುಂಡದ ಮಲ್ಲಿಕಾರ್ಜುನಾ
ರ್ಯರ ನಿರೂಪದಿ ನಿಶಿತ ಶೂಲವೇಱಿದ ಮಹ
ದ್ಗುರುಭಕ್ತನನ್ವಯಾಂಬುರುಹ ದಿನನಾಥ ಗುಬ್ಬಿಯ ಮಲ್ಲಣಾಚಾರ್ಯರ।
ತರುಣ ಗುರುಭಕ್ತಾಖ್ಯ ಗರ್ಭಾಬ್ಧಿಚಂದ್ರಮಂ
ವರ ಬಸವಪೌರಾಣದುರು ಮಲ್ಲಣಾರ್ಯನಘ
ಹರ ಸಿದ್ಧಮಲ್ಲೇಶ ಗುರುಚರಣಸುರಕುಜಂ ಹೃದ್ಭೂಮಿಯೊಳ್ಮೆಱೆಯಲುಂ॥ ೭

ತನ್ನ ಮೋಹದ ಭಕ್ತ [೨]ಚೇರ[೨]ಮಾಂಕನ ನೋಡಿ
ನಿನ್ನಿಷ್ಟವೇನೆನಲ್ ದೇವ ನಿಮ್ಮಡಿಗಳಿಂ
ದೆನ್ನ ಜನ್ಮದ ಜಾಡ್ಯ ಪರಿದು ಲೇಸಂಬಡೆದೆನಯ್ಯ ಸತ್ಯೇಂದ್ರಚೋಳಂ।
ಮುನ್ನ ಕೈಲಾಸಕ್ಕೈದಿದ ಕಥೆಯನೆನಗೆ ಕೃಪೆ
ಯಿನ್ನಿರೂಪಿಸೆ ಕಾವ್ಯವಿನ ಚಂದ್ರ ಧರೆಗಳು
ಳ್ಳನ್ನೆಗಂ ಪರಕಲಿಸಿ ಮೆಱೆವುದೆನಲಾತಂಗೆ ಪೇಳ್ದನಾನಂದದಿಂದೆ॥ ೮

ಕೃತಿಯು[೩]ಪಲ್ಲವಿ[೩] ತೊಡಗಿ ಪೂರ್ಣವಪ್ಪನ್ನೆಗೀ
ಕೃತಿಯೊಳುತ್ಪ್ರೇಕ್ಷೆಯಿಲ್ಲದುದೊಂದು [೪]ಪದವಿಲ್ಲ[೪]
ಕೃತಿಗದು ನಿಮಿತ್ತದಿಂ ಭಾವಚಿಂತಾರತ್ನವೆಂಬ ಪೆಸರೀಕಾವ್ಯಕೆ॥
ಪತಿಯುಮರಗುಂಡ ಮಲ್ಲೇಶ್ವರಂ ಕಥೆಯಜೀವ
ಯತಿ ನಾಗವಲ್ಲಿಯುರು ಶಿವಪೂಜೆಯಾರ್ಯನನು
ಮತದೊಳೆಸೆದಂ ಮಲ್ಲಣಾರ್ಯನೆನಲಿದು ಸುಜನ ವದನಭೂಷಣಮಾಗದೆ॥ ೯

ತ್ರಿಣಯನಣುಗಂ ತಿರುಜ್ಞಾನಿ ಸಂಬಂಧೀಶ
ನಣಿಯರದಿ ಜಿನಮತವಿದಾರಣಂಗೈದು ಧಾ
ರಿಣಿಯಲ್ಲಿ ತಿರುಪಾಟು ಪದಿನಾಱು ಸಾವಿರವನೊರೆವುತ ಕುಲಚ್ಛಱಿಯಗೆ।
ಪ್ರಣವಪಂಚಾಕ್ಷರಿಯ ಮಹಿಮೆಯಂ ತಿಳಿಪೆ ಸ
ದ್ಗುಣಿಯಪ್ಪ ಸತ್ಯೇಂದ್ರಚೋಳ ಭೂಪನ ಕಥಾ
ಭಣಿತೆಯಂ ದ್ರಾವಿಡದೊಳೊರೆದುದಂ ಕನ್ನಡದಿ[೫] [೬]ಪೇಳ್ವೆ[೬]ನಾಲಿಸಿ
ಸುಜನರು॥ ೧೦

---

೧ ಲಿ (ಅ) ೨ ಚಾರ (ಅ.ಇ.ಒ) ೩ ಪಲ್ಲವ (ಒ.ಗ) ೪ ಪದನಿಲ್ಲ (ಅ.ಇ)
೫ ಕನ್ನಡಿಸಿ (ಒ.ಓ) ೬ ಪೇಳ್ದ (ಇ.ಈ.)

ತರುಣಿ ಪೊರೆದಣುಗನಶ್ವದ ಖುರದ ಹತಿಯಿಂದೆ
ಹರಭಕ್ತನಳಿಯಲಪ ಕೇಳ್ದು ಕೊಲೆಯಂದವಂ
ಪರಿಕಿಸಿ ನಿಜಾತ್ಮಜಂ ಮೊದಲಳ್ತಿಗೆಂದ ನುಡಿಗಾ ಮುದ್ದುಮಗನ ತಲೆಯ ।
ಅರಿಸುವೆಡೆಯೊಳು ಮತ್ತೆ ಭಕ್ತವಧೆಯೆಂದು ನಿಜ
ಶಿರದೊಡನೆ ತಱಿದೆಂಟು ತಲೆಗಳಂ ಪಡೆದು ಶಂ
ಕರನೊರ್ಗೆ ಪೋದ ಸತ್ಯೇಂದ್ರಚೋಳನ ಕಥೆಯನಿದ ಬೆಳಸಿ ಕೃತಿಮಾಳ್ಪೆನು ॥ ೧೧



## ೨ ಗದ್ದುಗೆಯನಿಳಿ ತಂದೆ

ಕೃತಿಯಿಂತಿಗಕ್ಕೆ ಮೊದಲಾವು[೧]ದೆಂದೆನೆ[೧] ಪತಿ
ವ್ರತೆಯಂತೆ ಕಾಂತಾನುಕೂಲದಿಂ ಕೌರವ
ಕ್ಷಿತಿವರನ ಸೇನೆಯಂತಾ ದ್ರೌಣಿಯಿಂ ವೀಣೆಯಂತಾ ಪ್ರವಾಳದಿಂದೆ।
ಕ್ರತುಭುಜರ ಸುಡಲು ಗರಳವನುಗುಳ್ದ* ಲೋಚನ
ಶ್ರುತಿಪನಂತಚಲಾವೃತತ್ವದಿಂ ಕೃಷ್ಣಗಿರಿ
ಸುತರನೊಳಕೊಂಡು ತದ್ವೈರಿಗಳ ಗರ್ಜಿಸುವ ತೆಜದೊಳೊಪ್ಪಿತು ಸಮುದ್ರಂ॥ ೧

ಆ ವಾರ್ಧಿಮಧ್ಯ ಭುವನಜಕರ್ಣಿಕೆ[೨]ಯೊ ಕೂರ್ತು
ಭೂವನಿತೆ[೩]ಗಿ[೩]ನಕುಲದ ನೃಪನೊಸಗೆಗಟ್ಟಿರ್ದ
ಜೀವನಿಧಿವಸನದೊಡನೆಸೆವ ರವಿಯುಂಗುರವೊ ಬೊಮ್ಮನೆನಿಸುವ ಸೂತ್ರಿಕಂ।
ದೇವತೆಗಳೆಂಬ [೪]ಹಾಹೆ[೪]ಗಳನಾಡಿಸ ಕಂಬ
ವೋ ವಿಚಾರಿಸೆ ಬೆಡಂಗ[೫]ಸುರ್ದ*[೫] ಕಣ್ಗೆಡ್ಡವಾ
ಯ್ತಾವರಿಸೆ ತೇಜದಗ್ಗದ ಮೇರು ಗಿರಿರಾಜ ವಿಧೃತಕಲ್ಪಾವನೀಜಾ॥ ೨

ಉಡುವರಂ ದಕ್ಷಸುತೆಯರ ಮದುವೆಯಾಗಿ ಬ
ರ್ಪೆಡೆಯೊಳಿಂದಿರೆ ನಿಜಾಗ್ರಜನನುಜಂ [೬]ಬಾಗಿಲಂ[೬]
ತಡೆಯಲಚ್ಛತ್ವ[೭]ದಿಂದಿರ್ದಂತಿರಿರ್ಪ[೭] ಮೇರುವಿನ ಸಾನ್ನಿಧ್ಯದಲ್ಲಿ।
ಕಡು[೮]ಮೋಹದಿಂ[೮] [೯]ಸುತವಿವಾಹಕ್ಕೆ[೯] ಬಂದು ಪಾ
ಲ್ಗಡಲಜಾದ್ಯರ್ಗೆ ಭಾವಿಸೆ ಗೋತ್ರ [೧೦]ಂತಾನಾಗು
ತು[೧೦]ಂಡುತ ಮುಸುಕಿಟ್ಟುದಂಬರವನೆ ಝುಗಝುಗಿಸುತೊಪ್ಪಿತ್ತು ರಜತಾಚಲಂ॥ ೩

---

೧ ದೆಂತೆನೆ (ಉ.ಒ.ಗ) ೨ ಯಃ(ಈ.ಉ.ಒ.ಗ) ೩ ಯಿ (ಅ.ಈ.ಗ) ೪ ಹಂಸೆ (ಇ.ಗ)
೫ ಡರಿ (ಅ) ೬ ಬಾಗಿಲಿಂ(ಉ.ಒ), ಬಾಗಿಲಲಿ (ಅ.ಅ.ಓ). ೭ ದಿಂದಿರ್ದಳಂತಿರ್ಪ (ಉ.ಒ.ಓ)
೮ ನೇಹದಿಂ(ಅ,ಈ.ಉ.ಒ.ಗ) ೯ ಸುತನವಿವಾಹಕೆ(ಓ) ೧೦ ವಾಗುತಂದು (ಅ.ಈ.ಉ.ಒ.ಗ.)

ಆ ರಜತ ಪರ್ವತಾಗ್ರದೊಳು ಪೀಯೂಷಪರಿ
ಪೂರಚಿತ ಹೇಮಸುಪ್ರಾಕಾರ ಮರಕತ ಮ
ಹಾರಮ್ಯವಪ್ಪ ವೃಷಭಧ್ವಜಂಗ೧ಳೊಳ್ಗ ಮಣಿವೇದಿಗಳಿಂ ಪರುಷಮಯದಾ।
ದ್ವಾರಬಂಧಾಧಿಕ ಕವಾಟಂಗಳಿಂ ೨ಕಾವ
ಭೈರವಗಣಾಕೀರ್ಣ೩ಮಪ್ಪ ಕೊತ್ತಳ೪ಗಳಿಂ
ರಾರಾಜಿಸಿತ್ತು ಶಂಕರವಾಸ ಕೈಲಾಸ ವಿಮಲಮೂರ್ತಿಯ ವಿಲಾಸಾ ॥ ೩

ಹರುಷಜಲದಕ್ಷಿಗಳ ಮುನಿಗಳಿಂ ವೈದಿಗೆಮ
ಹರನೊಳೊಂದುವ ಪರಮಕಾಷ್ಠರಿಂ ಪರಿಯೆ ದೃ
ಕ್ಕಿರಣಂಗಳೊಡನೆ ಕಣ್ಮುಚ್ಚುವಾಸಂಪರಿಂ ಸಾಸಿರದಳಾಬ್ಜ ವೀವಾ।
ಪರಮಯೋಗೀಶರಿಂ ಸದ್ವಾಸನಾಂಗರಿಂ
ಭರಿತ ಸುಜ್ಞಾನರಿಂ ಹರಣಾರ್ಪಣಾಢ್ಯರಿಂ
ಪರಮಾನುರಾಗಿಗಳಿನೆಸೆವ ಸಭೆಯುಸ್ಸವಿಧಪೂಜೆಯೆನೆ ಕಣ್ಗೆಸೆದುದು ॥ ೫

ಕರೆದು ಸಿಂಹಾಸನದ ಸನ್ನಿಧಿಗೆ ಗಜಮುಖನ
ನುರಗ ಕಂಕಣದ ಕರ೫ದಿಂದೆ ಶಿಖಿವಾಹನನ
ಶಿರವ ತಡವುತ್ತೆರಲೆಗ್ಗೈಯ್ಯ ಪುಲಿದೊವಲುಡಿಯೊಳಿಡುತವಳ್ತಿಯ ಪೆಂಪುಮಂ।
ಪರಿತೋಷ೬ಮಂ೬ ಬೀಱುತೆಸೆವ ಶಂಕರನೆ ಭಾ
ಪುರೆ ದೇವ ದೇವಕುಲಚಕ್ರೇಶ ನಿನ್ನ ೭ಸಾ
ರ್ದರಿಗರಿಗಳಿಲ್ಲೆಂದು ಕೈಯೆತ್ತಿ ಚಂಡಕೀರ್ತಿಗಳು ಪೊಗಳುತ್ತಿರ್ದರು ॥ ೬

ಮುಂಗಡೆಯೊಳುಲಿವ ೮ಪಂಚಮುಹಲವಾದ್ಯದಿ ನವ ರ
ಸಂಗಳಭಿನಯಿಸುವೆಡೆಯೊಳು ಭಕ್ತಿರಸವೆಸೆವ
ಸಿಂಗರಮುದಾಗೆ ತಾಂಡವಮುಖ್ಯನೃತ್ಯಂಗಳಿಂದೆ ರೂಪಾದಿಯಾದಾ।
ಅಂಗದಿಂದಂ ಗಾಡಿ ಸಂಚಾರಿಗಳಿನುಚಿತ
ಸಾಂಗ೯ಭಾವಂಗಳಿಂ ಶಿವನ್ಲೀಲೆಯೊಳ್ಮೈದು
ಪಿಂಗೆ ವಿಂಶತಿಯ ಭೃಂಗಿರಿಟಿ೧೦ನರ್ತಿಸಲು ಗಣತತಿಂ೦ಭಾಪೆನುತ್ತಿರ್ದುದು ॥ ೭

೧ ಳಿಂದೆ (ಅ), ಳಿಂದ (ಇ) ೨ ಕಾಯ್ವ (ಆ.ಇ.) ೩ ದಾ ಕೊತ್ತಳಂ (ಆ. ಈ.ಗ.), ದ ಕೊತ್ತಲಂ (ಉ.ಒ). ೪ ದಿಂ (ಇ.ಈ ಗ) ೫ ದಿಂ ನವಿಲನಡರ್ದವ (ಅ.ಒ.ಗ)
೬ ದಿಂ (ಅ) ೭ ಸಾರ್ದರೊಳರಿ (ಅ.ಆ.ಈ.ಒ) ೮ ಪಂಚಮ )ಅ.ಆ.ಇ.ಒ.ಗ)
೯ ಭಾವಂಗಳೀಶನ (ಅ,) ಭಾವಗಳಿನೀಶನ (ಇ). ೧೦ ನರ್ತಿಸೆ ಗಣಂಗಳ್ (ಆ.ಈ.ಗ.)

ಭೃಂಗೀಶಮುಖ್ಯರಂ ಪುರೆಯಿಟ್ಟು ಸತ್ಕೃಪಾ
ಪಾಂಗದಿಂ ನಿಜ ಕುಮಾರನ ಗುಹನನೀಕ್ಷಿಸು
ತ್ತುಂಗಜಾರಾತಿ ಬೊಮ್ಮನ ನೋಡಲೆದ್ದು ಕರಕಮಲಮಂ ಮುಗಿದು ನಿಂದ।
ಇಂಗಿತಕಿದೇನು ವಿಪರೀತವೆಂದೀಕ್ಷಿಸೆ ಗ
ಣಂಗಳಜನಾಗ ಬಿನ್ನೈಸಿದಂ [1]ದೇವ[1] ಕುವ
ರಂಗಕ್ಷರವನಱಿಪಲೆನ್ನನಟ್ಟಿದ ಹದನ [2]ಜೀಯ[2] ಚಿತ್ತೈಸೆಂದನು॥ ೮

ಉದಯಕಾಲದೊಳು ಪಠನಃಗಾರಕ್ಕೈದಿ ಷ
ಡ್ವದನನಂ ಗದ್ದುಗೆಯೊಳಿರಿಸಿ ಸುದ್ದಗೆಯೊಳ
ಗ್ಗದ ಬಿಣ್ಪಿನೋಂಕಾರಮಂ ಬರೆಯಲೆನ್ನ ಕೈವಿಡಿದರ್ಥಮಂ ಕೇಳ್ದೊಡೆ।
ಮೊದಲನ್ವಯಂಗೇಳ್ವ ಮಾತು ಲಘುವೆನಲೆನ್ನ
ಗದಱುತ ಕಶಾದಂಡದಿಂ ಹೊಡೆದನಯ್ಯ ಪು
ಟ್ಟಿದ ಸಪ್ತ[3]ದಿವಸದೊಳೆ[3] ತಾರಕಾಸುರನ ಕೊಂದದಟನೆನ್ನಂ ಬಗೆವನೇ॥ ೯

ಒಡೆಯನ ಕುಮಾರಕಂ ಬಾಯಲ್ಲಿ ಬಲ್ಲಿದಂ
ಕಡೆಯೊಳೇಗೆಯ್ವನೆಂದಳ್ಕಿ ಸುಳಶ್ಲೋಕಗಳ
ಗಡಣ [4]ಪನ್ನೆರಡು ಸಾಸಿರ[5]ದಿಂದೆ ಪೇಳಿದೆಂ[5] ಪ್ರಣವದರ್ಥವ[6]ನೀತಗೆ[6]।
ಜಡಮತಿಯೆ [7]ಸಾರೆ[7]ನುತ್ತೆನ್ನ ಜಱಿದೆದ್ದು ನಿ
ಮ್ಮಡಿ[8]ಯ ಮುಂಬಿಗೆ[8]ಬಂದ[9]ನಯ್ಯ[9] ನಾನಱಿ[10]ಯೆನೆಲೆ[10]
ಮೃಡ ವಿಶೇಷಾರ್ಥ[11]ಮಂ ಪೇಳ್ವುದೆನಲ[11]ಭವನೊರೆದಂಪ್ರಮಥರಾನಂದಿಸೆ॥ ೧೦

ಶ್ಲೋಕಲಕ್ಷದ್ವಾದಶಂಗಳಿಂ ಶಿವನೊರೆ[12]ಯು
ಲಾ[12]ಕುಮಾರಂ ಕರಾಂಬುಜಗಳಂ ಮುಗಿದು ಗಂ
ಗಾಕಾಂತ ಕೇಳಯ್ಯ ಬೊಮ್ಮನಂ ಜಡನೆಂದುದೆನ್ನದಪರಾಧಮೆನಲು।

---

೧ ಜೀಯು (ಅ.ಇ) ೨ ದೇವ (ಇ) ೩ ದಿವಸಕ್ಕೆ (ಅ.ಇ.ಈ.ಉ.ಗ) ೪ ಶ್ಲೋಕಂಗಳೆಡೆವಿಡದೆ (ಅ.ಈ.ಗ). ೫ ದೊಳುಸುರ್ದೆ ನಾಂ (ಈ.ಗ.), ವನುಸುರ್ದೆ ನಾಂ (ಅ) ೬ ನಾಗಳೆ (ಅ), ನಿವಂಗೆ (ಈ.ಒ.ಗ). ೭ ಪಾಱೆ (ಅ.ಇ.), ಪಾರೆ (ಒ), ಹಾರೆ (ಈ.ಗ) ೮ ಯೆಡೆಗೆ (ಅ.ಈ.ಗ) ೯ ನಿವ (ಈ.ಗ), ತಾ (ಅ) ೧೦+ಜೀಯು (ಅ.ಇ.ಗ.) ೧೧ ವ ನಿರೂಪಿಸೆನೆಯು (ಇ) ೧೨ ದಡಾ (ಅ.ಇ.ಗ)

ಈ ಕಟಕಿ ಬೇಡನ್ವೆ ಪ್ರಣವಕೆನಿತುಸಿರೆನೆ ಮು
ಹಾ ಕೋಟಿ ಪನ್ನೆರಡೆನಲ್ಕೆ ಚಿಂತಿಸಿದಂ ಪಿ
ನಾಕಿ ಮಜ್ಜಿಹ್ವೆಯಿಂದಾವ ಕಾಲದೊಳು ಪೊಱಮಟ್ಟವಗೆ ಸಾದುರ್ದೆಂದು ॥ ೧೧

ಹಿಂದೆ ಕೋಟ್ಯನುಕೋಟಿಯುಗದೊಳು ಜಲಪ್ರಾಣಿ
ಯೊಂದನಿರಲೀಯದಬ್ಧಿಯೊಳು ಪಾರ್ವತಿಗೆ ಪೇ
ಳ್ವಂದು ತನ್ಮಾತೆಯ ನವಿಲ್ಮುಡಿ¹ಯೊಳಳಿ²ಯಾಗಿ³ಕೇಳಿದನಲಾ ಚೌರ್ಯದಿಂದೆ³ ।
ಎಂದಱ⁴ದು ಚಪಲ ಪೇಳೆನಲು ಗದ್ದುಗೆ⁴ಯಿಂಳಿ
ತಂದೆಯಾಂ ಪೇಲಿರ್ದು ಪೇಳ್ವೆ⁵ನೆನೆ ಕಡುಮುಳಿಸಿ
ನಿಂದೆ ಹದಿನಾಱು ಸಾಸಿರ ಜನ್ಮದಲ್ಲಿ ಪುಟ್ಟೆಂದು ಗುಹನಂ ಶಪಿಸಿದಂ⁴ ⁵ * ॥ ೧೨

ಈ ವಿಷಮಶಾಪಕಾಱಿಂ ಕುವರನೆನೆ ಮೂಱು
ಸಾವಿರ ಗಣಂಗಳಂ ಝಂಕಿಸುತ್ತಿವನೊಡನೆ
ನೀವುದಯಿಸೆಂದೊಡಂತಹುದಲಾ ಜ್ವರದ ಮೊದಲೊಳ್ ಪಾಲು ಬಿಸಮೆಂಬಿನಂ ।
ದೇವ ಮುಂಗೋಪದೊಳಗೆಂದ ನುಡಿಯುಚಿತವ
ಲ್ಲೀ ವತ್ಸನಿಂದ ನುತಿ ಷೋಡಶ ಸಹಸ್ರಗಳ
ನೀವೊಪ್ಪುಗೊಂಬೊಂದು ಜನ್ಮ ಸಾಲ್ಗಿವಗೆನಲ್ ಪಶುಪತಿ ನಗುತ್ತೆಂದನು ॥ ‡ ೧೩

---

೧ ಯೊಳ್ಟಿದಳಿ (ಅ) ೨ ಕೇಳ್ದನತಿ ಚೌರ್ಯದಿಂದೆ (ಅ.ಈ.ಗ), ಕೇಳಿದನಲಾ ಪ್ರೀತಿಯಿಂ (ಅ.ಇ.ಉ.ಒ) ೩ ಯೊಳಿರು । ತಂದುಸುರಲು ಕೇಳಿ ಹರುಷದಿಂ ಧರೆಗೆಯ್ದಿ ಯಾ । ನಂದದಿ ಕುಲಚ್ಚರಿಯರಾದಿ ಶರಣರೊಳು ಬೆಸಸೆನುತ ಗುಹನಂ ಮನ್ನಿಸಿ (ಅ)
೪ ನೆನೆ ನಸುನಗುತ । ಯಿಂದುಧರನಾತ್ಮೋ(ರುವೈ ಪುತ್ರನಾಮಾಸಿಯೆಂಬ ಶ್ರುತ್ಯರ್ಥದಿಂದೆ (ಅ.ಇ.ಈ.ಉ.ಒ.ಓ), ಕೇಳೆನೆ ಮುಳಿಸಿ...ಸಾಸಿರ ಜನ್ಮವಕ್ಕೆ ನಿನಗೆಂದು...(ಗ)
* ಈ ಪಾಠ 'ಅ' ಪ್ರತಿಯ ಕಡೆಯಲ್ಲಿ ಸಿಕ್ಕಿದ ಮೂಲ ಬಿಡಿಪತ್ರವೊಂದರಲ್ಲಿ ಮಾತ್ರ ಇದೆ.
‡ 'ಅ' ಪ್ರತಿಯ ಕಡೆಯಲ್ಲಿ ಸಿಕ್ಕಿದ ಮೂಲ ಬಿಡಿಪತ್ರವೊಂದರಲ್ಲಿರುವ ಪದ್ಯ.
'ಅ' ಪ್ರತಿಯಲ್ಲಿ ಈ ಪದ್ಯ ಹೀಗಿದೆ:—

ಈ ವಿಮಲ ಚಾತುರ್ಯನಹುದೈ ಕುಮಾರನೆನಲಾ ಗ
ಣಾವಳಿ ಸಹಸ್ರ ತ್ರಯಂಗಳಂ ಕೀರ್ತಿಸುತೆ
ನೀವು ಯೀ ಶಿವನೊಳೆನಲಪ್ಪುದ್ಜ್ವರದ ಮುದದೊಳ್ಪಾಲೆ ಪತ್ಯಂಬಿನಂ ।
ದೇವ ಮುನ್ನೋಪನೊಳಗೆಂಬ ನುಡಿಯುಚಿತವ
ಲ್ಲೀ ವತ್ಸನಜನುಗ್ರದಿಂ ಪೊಡೆದೊಲ್ಗೈಯ್ಯದೆ
ದಯಾವಲೋಕನದಿಂ ನಿರೂಪಿಸವೇಳ್ಕುಮೆನೆ ಪಶುಪ ನಗುತಾಗಲಿಂತೆಂದನು ॥ ೧೩

ಗಶಾಪವೆನ್ನವರಿಗುಂಟೇ ಗಣಂಗಳ್ ನೀವುಂ
ಭೂಪವಿತ್ರಾರ್ಥ೨ದಿಂ ಜನಿಸಿ೨ ಭಕ್ತ೩ವ್ರಜಾ೩
೪ಳಾಪ೪ವುಂ೫ತಿರ್ದಿ೫ಪೇರಂಬಣದ ತಿಲ್ಲೆವಾಳಾಂ೬ದಣಾಹ್ವಯರಾಗಲು।
ವೋಪುದೆಂದೊರೆದು ತತ್ಪ್ರಣವದರ್ಥವ೭ನಱಿ೮ಯ೭
ಲಾ ಪಿತಾಮಹನ ವಾಗೀಶನಾಗಲ್ಕಳುಪು
ತೋಪ ತನ್ನಣುಗಲನಲ ತಿರುಜ್ಞಾನ ಸಂಬಂಧಿಯಾ೯ಗೆ ಪೇಳ್ದ೯ಟ್ಟಲಭವಂ॥ ೧೪

ಶ್ರೀಕಾಳಿಯಾದಿಶೈವಂಗೊಗೆದು ಶಂಭುಗಿರಿ
ಜಾಕರುಣಮುಂ ಪಡೆದನೇಕ ಮಹಿಮೆಯ ಮೆಱೆದು
ಕಾಕು ಜೈನರ ಕೊಲ್ವ ಪದದೊಳವ೧೦ದಿರಿಗೆ೧೦ಶೂಲ೧೧ಮುಂ೧೧ಸವೆದಿರಿಸಿದ।
ಆ ಕುಲಚ್ಛಱೆಯುಂ೧೨ಗೆ ಪಂಚಾಕ್ಷರಿಯನಱಿಪೆ
ಲೋಕಗುರುವಪ್ಪೊಡೆಯ ಪಿಳ್ಳೆಯರು ಸದ್ಗುಣಾ
ಪ್ತೋಕ ಸತ್ಯೇಂದ್ರಚೋಳನ ಕಥೆಯನೊರೆದುದಂ ಪೇಳ್ವೆನಾಲಿ೧೩ಸಿ ಸುಜನರು॥ ೧೫

---

"ಅ' ಪ್ರತಿಯಲ್ಲಿ ಹೊಸದಾಗಿ ಸೇರಿಸಿರುವ, ಅಲ್ಲದೆ (ಇ.ಈ.ಉ.ಒ) ಪ್ರತಿಗಳಲ್ಲಿರುವ ಪದ್ಯ:-

ಇವನಾನೆಯುಹುದೆಂದು ಸಂತೋಷದಿಂದುಮಾ
ಧವನಾಗ ಭೂಲೋಕದಲ್ಲಿರ್ಪ ಗಣತತಿಗೆ
ಸವಿನಯಂ ಪ್ರಣವದರ್ಥವನಱಿಪಿ ಕೃತಕೃತ್ಯರಂ ಮಾಡಲೆಂದು ನೆನೆದು।
ಇವನೊಡನೆ ಮೂಱು ಸಾವಿರ ಗಣಂಗಳ್ನೀವು
ಸವಿಲಾಸದಿಂ ಭೂಮಿಯುಂ ನೋಡಿ ಬನ್ನಿಮೆನ
ಲಿವರೆಂದರೆಲೆ ದೇವ ನಿಮ್ಮ ಪಾದಂ ಬಿಟ್ಟು ಕರ್ಮಭೂಮಿಗೆ ಪೋಪೆವೇ॥ ೧೩

೧ ಈಪರಿಯು ನುಡಿವರೆಯನ್ನ ಗಣತತಿ ನೀವು [ಅ.ಇ.ಈ.ಓ],...ಯೆಲೆ ಗಣಂಗಳು ನೀವು [ಉ.ಒ]. ೨ ಉದಯಿಸಿ [ಇ.ಈ.ಉ.ಗ] ೩ ವ್ಯಾಜ [ಅ.ಇ,ಈ], ವಾದ [ಅ.ಉ.ಒ.ಓ.ಗ] ೪ ತಾಪ (ಓ) ೫ ತೀರ್ಚೆ [ಒ.ಓ] ೬ ಪೇರಾಂಬಣದ ತಿಲ್ಲವೇಣಾಂ [ಅ.ಇ.ಈ.ಒ.ಓ], ಪೇರಾಂಬಣದ ತಿಲ್ಲವೇಳಾಂ [ಅ.ಗ] ೭ ತಿಳಿಯ [ಉ], ನಱುಪ [ಅ.ಇ.ಓ] ೮ ನಂ [ಅ] ೯ ಗವೇಳ್ದ [ಈ.ಉ.ಗ] ಗಲ್ವೇಳ್ದ [ಓ] ೧೦ ರ್ಗಳಿಗೆ [ಅ.ಒ] ೧೧ ಲಂಗಳಂ [ಅ.ಗ.] ಲವ ಮುನ್ನ [ಇ] ೧೨ ಯರ್ಗೆ [ಅ] ೧೩ ಶುದಧಿಕರು (ಅ.ಗ)

## ೩. ಮದ್ಗುರು ಸ್ವಾಮಿ ಬಿಜಯಂಗೈದರ್

ಎಲೆ ಕುಲಚ್ಛಱೆಯ ಕೇಳ್ಕೆ ಮೇರುವಿರ್ಪ ಭೂ
ತಲವಿಳಾವೃತ ವರುಷಂವದಱ ತೆಂಕಲ್[1] ನಿಷಧ
ಕುಲ[2]ಶೈಲವೀಚೆಂ ಹರಿವರುಷವಂತಾ ಹೇಮಶಿಖರಿ ಕಿಂಪುರುಷವರುಷಂ ।
ಸಲೆ ಮೆಱೆವೃ[3]ದಿಂತು[3] ಹಿಮವನ್ಮಹೀಧ್ರಂ ಪೂರ್ವ
ಜಲಧಿ ಪಶ್ಚಿಮ ವಾರ್ಧಿಗಳ ಕೂಡಿಕೊಂಡು ನಿ
ರ್ಮಳ ಶಿವನ ಮಾವನೆನಿಸುವ ಬಿಣ್ಪೆನಿಂ[4]ದೆಸೆವುದದಱ[4]ದಕ್ಷಿಣದೊಪ್ಪುಗುಂ[4] ॥ ೧

ಉತ್ತಾನಪಾದನೆನಿಸುವ ರಾಜಋಷಿ ಮೊದಲು
ಪೆತ್ತ ಭರತಂಗೆ ಹಿಮವಂತ[5]ದಿತ್ತ[5]ಣ[5]ಧರೆಯು
ನಿತ್ತ ಕತದಿಂದೆ ಭಾರತವರುಷವೆನಿಸಿತದಱಾಕಾರವೆಂತೆಂದೊಡೆ ।
ಬಿತ್ತರಿಪೆನಿನಕುಲದ ನೃಪನೆಂಬ ಕಾವಂಗೆ
ತೆತ್ತು ಮನಮಂ ಭೂಮಿರತಿ ಪುರುಷಧನುವನ
ಚ್ಯೊತ್ತಿಕೊಂಡಳೊ ತನ್ನ ಪೇರುರದೊಳೆನೆ [6]ಬಿಗಿದ ಬಿಲ್ಲಂತೆ
ಮೆಱೆದಿರ್ದುದು[6] ॥ ೨

ಮಣಿ ಸರ್ಪ ನಕ್ಷತ್ರ ಧೇನು[7]ಗಿರಿ ತರು[7]ಸರ್ವ
ಗುಣ ಮಂತ್ರತತಿಯೊಳೆಸೆದಿರ್ಪ ಚಿಂತಾರತ್ನ
ಫಣಿಪ ಚಂದ್ರಮ ಕಾಮದುಘ ಮೇರು ಸುರವೃಕ್ಷ ದಾನ ಪಂಚಾಕ್ಷರಿಗಳ ।
ಗಣವೆಂತು ಘನವಧಿಕ ಮುಖ್ಯಾಗ್ರತಮ ಮುಖಾ
ಗ್ರಣಿ ಮಹಾಶ್ರೇಷ್ಠಂಗಳಪ್ಪಂತೆ ಭರತಧಾ
ರಿಣಿಯ ನಾನಾದೇಶಲಗಳಲ ಭಾಗ್ಯನಿಧಿಯೆನಿಸಿ ಚೋ[8]ಳದೇಶಂ ಮೆಱೆದುದು॥ ೩

---

೧ ವಾ ದಕ್ಷಿಣದ [ಅ.ಗ], ವದರ ದಕ್ಷಿಣದ[ಒ]. ೨ ನಗ [ಆ.ಗ],—ನಗಂ[ಈ. ಒ], -ಶೈಲ [ಓ]—ಬಳಿಕ. ೩ ದಿತ್ತ- ೪ ತೆಂಕಲುಸ್ಯೆವಿನಿಂ-[ಆ·ಈ.ಉ ಓ.ಗ] ೫ ದೀಱೆಯ [ಅ.ಇ.ಉ.ಒ.ಓ) ೬ ಬಿಲ್ಲಿನಂತೆ ರಾರಾಜಿಸಿದುದು [ಅ.ಇ], ಬಾಗಿಸಿದ ಬಿಲ್ಲಿನಂತೆಸೆದುದು [ಒ.ಓ] ೭ ತರು ಗಿರಿ [ಈ.ಉ.ಒ.ಓ.ಗ] ೮ ಕಿದು [ಆ.ಉ.ಒ.ಓ ಗ]

ವಿನುತ ಹಂಸಾವಳಿಯು ನದಿಗಳಿಂದಬ್ಜಮಯ
ವೆನಿಸುವ ತಟಾಕಂಗಳಿಂದ ಕುಜಪಂಕ್ತಿಯಿಂ ಮ
ದನುಪಮ ಬುಧರ್ಕಳಿರ್ಪಗ್ರಹಾರಂಗಳಿಂ ಗುರುಕುಲಾಢ್ಯರ ಪುರಗಳಿಂ।
ಘನ ಕವೀಶ್ವರ ರಾಜಧಾನಿಗಳಿನಸಿತಕಂ
ಠನ ನಗರಿಗಳಿನಹಿತ[೨]ವಿಧು[೨]ರಾಹುವೆನಿಪ ಬಿರು
ದಿನ ಕೇತುಮಯ ಪತ್ತನಂಗಳಿಂ ದೇಶಂ ನವಗ್ರಹಾತ್ಮಕವೆನಿಸಿತು ॥ ೪

ಸೂರಿಜನಹರ್ಷವಿಸ್ತಾರಿ ಸುಖಸಂಕಥಾ
ಕಾರಿ ಬಳ್ಳಿನೆರ್ದೆ*ಗಂ ಕಠಾರಿ ಬೆಳೆಸಿರಿಯ ಭರ
ಭಾರಿ ಕುಶ್ರಮಸಂಘವೈರಿ ಜಲಚರಸದಾಧಾರಿ ಕಾಲಾರಿ ಶಿವನ।
ನಾರಿ ಗಂಗಾಂಬಾವತಾರಿ ದುರ್ದೋಷಸಂ
ಹಾರಿಯೆಂದೊದಱು[೨]ತಿಹ[೨]ಭೇರಿಯಾರ್ಭಟಿವೀಚಿ
[೩]ಧಾರಿ[೩] ಬಹುಮಾರ್ಗಪ್ರಚಾರಿಯಾನಾಡ ಕಾವೇರಿ ಭೋರ್ಗರೆದೆಸೆದುದು ॥ ೫

ಮೂಡೆಗಟ್ಟಂ ಕಟ್ಟಿ ಹುಡುಕುನೀರೊಳ್ ಮೆಟ್ಟಿ
ಕಾಡುತಿಹ ಪಾಮರರ ಕೈವಿಡಿತೆಗೊಳಗಾಗಿ
ನಾಡೆ ಪಂ[೪]ಕವ ಪೊಗುತ್ತೆ[೪]ರ್ದೆ*ಯೊಡೆದು ಪುಲ್ಗಚ್ಚಿ ಕಂಟಕಂಬಡೆದೆವಿನ್ನು ।
ರೂಢಿಸಿದ ಕಾವೇರಿಯಿರ್ಕೆಲ[೫]ನ ಸಾರ್ದು[೫] ಶಶಿ
[೬]ಚೂಡಂಗೆ ಸಲ್ವಪೇರೊಲ್ಮೆಯಿಂ[೬]ಪಿಡಿದವರ
ಕೂಡೆ ಬಾಯ್ವಿಡಿಸದಿರೆವೆಂದು ರಾಗಿಸುವ ಕಳವೆಯ ಮಡಿಯ
[೭]ಸಾಲ್ಮೆಱೆದುವು[೭] ॥ ೬

ಸತತಮಿಂತೊಪ್ಪು[೮]ತ್ತಿಹ[೮] ಚೋಳದೇಶದ ಸಮು
ನ್ನತಿಯ ಕೊಂಡಾಡುವಡೆ ಫಣಿರಾಜನೆಂಬ[೯] ವಾ
ಗ್ಮಿತೆ ಬೇಡ[೯] ಸಮಸುಖದೊಳೆಸೆವ ಕೆಱೆ[೧೦]ಂತೊಱೆ[೧೦]ಂಕಾಲ್ಗಳುಪವನದ[೧೧]
ಸಂಪತ್ತಿನಿಂ ।

---

೧ ರವಿ (ಓ) ೨ ವತಿ (ಆ.ಗ), ವಾ (ಈ), ೩ ವಾರಿ (ಇ). ಧಾರ (ಓ). ೪ ಕವಂ ಪೊಗುತ್ತೆ (ಇ), ಕಂಜೊಗುತ್ತೆ (ಆ.ಈ.ಗ), ಕಂಜೊಕ್ಕುಯೆ (ಉ.ಒ.ಓ). ೫ ದೊಳಿರ್ದು (ಆ.ಗ), ನೊಳಿರ್ದು (ಓ). ೬ ಚೂಡಗರ್ಪಿತಮಪ್ಪ ಬಲ್ಮೆಯಿಂ (ಅ.ಇ) ೭ ಸಾಲ್ನೆಱೆದುದು (ಅ) ೮ ವಾ (ಆ.ಉ.ಒ.ಓ) ೯ ಶ್ರುತಿ ಮತವಲ್ಲ (ಅ), ನುಡಿ ಮತವಲ್ಲ (ಈ.ಉ.ಒ.ಓ.ಗ). ೧೦—, ೧೧+ಸರ್ಗ (ಆ.ಈ.ಉ.ಒ.ಓ.ಗ).

ಅತಿ ಪುಣ್ಯದಿಂದಲತಿ ನೀತಿ ಸನ್ಮಾರ್ಗದಿಂ
ದತಿ ಚದುರ ಸಾಮರ್ಥ್ಯವತಿ ಧರ್ಮದಿಂ ಧರ್ಮ
ವತಿಯೆಂಬ ಪಿರಿಯ ಪಟ್ಟಣವೊಪ್ಪುತಿರ್ದುದಾ ನಾಡ ಸೈಪಿನ ಕರಂಡಂ ‖ ೭

[1]ಅಳವಟ್ಟ ಸಾಧನದ[1] ಸಂಪತ್ಕರಂಗಳಿಂ
ನಳಿನಸಖನಂತರುಣರಾಗಿ ಪೊಂಬೆಟ್ಟ[2]ಮಂ[2]
ಬಳಸುವ ವಣಿಗ್ವರರ ಸೈಪಿನಿಂ ಶಿವಭವನದೊಪ್ಪಂಗಳಿಂ ಭಕ್ತರ ।
ನಿಳ[3]ಯ[3]ಗಳಗುರ್ವಿನಿಂ ಮಕುಟವರ್ಧನರ ಮಂ
ಡಳಿಕ ಮನ್ನೆಯರ ಗೇಹಂಗಳಿಂ ನಡುವೆ ಕಂ
ಗೊಳಿಪ ಪಿರಿಯರಮನೆಯೊಳಿರ್ಪನಾ ಸತ್ಯೇಂದ್ರಚೋಳಧರಣೀಪಾಲನು ‖ ೮

ಲಿಂಗಪೂಜೆಯ ಮಾಡುವಲ್ಲಿ ರತಿ ಸತ್ಯವಾ
ಕ್ಯಂಗಳಂ ನುಡಿವಲ್ಲಿ ಸದ್ವಾಣಿ ನಿತ್ಯ ಹ
ರ್ಷಾಂಗಿಯಪ್ಪುದಱಿಂದರುಂಧತಿಯಪಾಂಗಪಾವನಲಕ್ಷ್ಮಿ ತನ್ನೊಳಿರಲು ।
ಸಾಂಗರೂಪಂ ಪ್ರೌಢಿ ಪತಿಭಕ್ತಿ ಸಿರಿಗಳು
ಳ್ಳಂಗನೆಯರಾಣ್ಮ[4]ಳರಹಳ ಮದನಾಜ [5]ವಾಸಿಸ್ತ
ತುಂಗ[5] ಹರಿಗಳ ಜಱಿವ ಸತ್ಯೇಂದ್ರಚೋಳಂಗೆ ಸತಿಯಮೃತವತಿಯಾದಳು ‖ ೯

ಸಲೆ ನಿರ್ಜರಾಧೀಶ ವೃದ್ಧಶ್ರ[6]ವಂಗೆಯೊ[6]
ಪ್ಪಲು ಜೀವ[7]ನಾಗಿ[7] ಚಿತ್ರಶಿಖಂಡಿಜಂ ಮಂತ್ರಿ
ತಿಲಕಂ ಗಡಾ ಹಾಸ್ಯಮಲ್ತೆಲ[8]ಯ್ಯೆಂತಲ್ಲಲ[8]ಮಿಸುನಿಯ ಕೆಲಸದೊಳಗೆ ರನ್ನಂ ।
ಚಿಲು[9]ಂಪಾಲೊಳೆ[10]ಸೆವ ತವರಾಜ[11]ಪನಿ[12]ನೀರೊಳೊಡ
ಗಲಸಿರ್ದ[12] ಶಿರಪಚ್ಚೆ ಶಿವತತ್ತ್ವದೊಳ್ [13]ಕೂರ್ತ[13]
ನೆಲಸಿ[14]ದಾಪ್ರಣವದಂತರಸಂಗೆ[14]ಪತಿವೋಹಿಯೆನಿ[15]ಪಮಂತ್ರೀಶನೆಸೆದಂ ‖ ೧೦

೧ ವಿಳಸಿತದ್ವಾರ ಮುಖ (ಅ.ಈ.ಒ.ಓ.ಗ) ೨ ಗಳ (ಅ.ಇ) ೩ ಯಂ (ಅ.ಈ.ಗ) ೪ ರಾ (ಅ.ಈ.ಓ.ಗ) ೫ ವಾಸಿಷ್ಠೋತ್ತುಂಗ (ಒ) ೬ ವಾಖ್ಯನೆ (ಅ.ಇ) ೭ ವಾ (ಅ) ೮ ಯಂತುಟಲ್ಲ (ಅ.ಇ) ೯ ಳೆ (ಅ,ಇ) ೧೦ ಪಾಲಿನಲ್ಲೆ (ಅ.ಇ) ೧೧ ವಾ (ಅ), ನಾ (ಈ.ಉ.ಒ.ಓ.ಗ.) ೧೨ ನೀರ ಕಲಸಿರ್ದ (ಅ.ಈ,ಉ.ಒ.ಓ.ಗ) ೧೩ ಪ್ರಣವ (ಅ.ಇ) ೧೪ ದಂತಾ ಚೋಳನೃಪಗೆ (ಅ.ಇ) ೧೫ ಸುವ ಮಂತ್ರಿ ರಾಜಿಸಿದನು (ಅ.ಇ.)

ಒಂದು ದಿನ ಸತ್ಯೇಂದ್ರಚೋಳಧರಣೀಶನಾ
ನಂದದಿಂ ವಾರಣಾಸಿಯ ಪೊಕ್ಕು ಶಿವಗೆ ನಲ
ವಿಂದ ಭಾಗೀರಥಿಯ ಪಾವನೋದಕದಿನಭಿಷೇಕಮಂ ಮಾಡವೇಳ್ಕುಂ।
ಎಂದು ಗಂಭೀರ ಭೇರಿಯ ಮೊಳಗವೇಳ್ದೊಡೈ
ತಂದೊಡೆಯನಂಘ್ರಿಪಂಕಜಕೆ ಸಚಿವಂ ಪಣೆಯ
ನೊಂದಿಸಿದ¹ನಿಟ್ಟ² ಕುಂಕುಮಗಂಧರಜ³ತತ್ಪ⁴ರಾಗದಂದಂ ಬಡೆಯಲು॥ ೧೧

ಕರಕಮಲಮಂ ಮುಗಿದು ಜೀಯ ನೀವಿರ್ದ ಮಂ
ದಿರವಲಾ ಕಾಶಿ ⁴ತತ್ತೀ⁴ರ್ಥವೆಯ್ತಪ್ಪುದೆಂ
ದರರೆ ಭಾಗೀರಥಿಗೆ ಧರ್ಮವತಿಗೇಳ್ನೂಱು ಗಾವುದದೊಳೆಡೆಗುಂದದೆ।
ವರ ಮಕುಟವರ್ಧನರ ⁵ನಿಲಿಸ⁵ಲೋರೊರ್ವರ್ಗೆ
ಪರಮ ಜಲಮಂ ಕನಕ ಘಟದೊಳೆಯ್ದಿಸಲು ಶಂ
ಕರನ ಪೂಜೆಯನೆಸಗಿದಂ ರಾಯನೆನಲುಳಿದ ಪಡೆಯನಿನ್ನಾರೆಣಿಪರು॥ ೧೨

ಇಂತು ಸದ್ಭಕ್ತಿಸಂಪತ್ತಿನಿಂ ಚೋಳಭೂ
ಕಾಂತನಿರಲೊಂದು ದಿವಸಂ ಬಂದನರರೆ ನಿ
ಶ್ಚಿಂತನಜ್ಞಾನಸುಜ್ಞಾನ ಕುಮುದಾಂಭೋಜತರಣಿಯತ್ಯಂತ ಕರುಣಿ।
ಕಂತುಹರ ಮೂರ್ತಿಯಿಾ ಬಂದನೀ ಬಂದಂ ಕೃ
ತಾಂತಭಂಜನನಪ್ಪ ಚಿಪ್ಪನ ಶಿವಾರ್ಯರು ಸ
ಮಂತು ಬಿಜಯಂಗೈದರೆಂಬ ಕಹಳೆಗಳೊದಱೆ³ ಕೇಳ್ದನಾನಂದದಿಂದೆ॥ ೧೩

ಹಾ ಮಹಾದೇವ! ಬರ್ದು*ಕಿದೆನಲಾ **ಮುದ್ನುರು**
**ಸ್ವಾಮಿ** ಬಿಜಯಂಗೈದರೆಂದೆದ್ದು ಶಿವಗಣ
ಸ್ತೋಮದೊಡನಧಿಕ ಸಂಭ್ರಮದಿಂದೆ ಪೊಳಲ ಸಿಂಗರಿಸವೇಳ್ದೊಡನೆ ನಡೆದು।
ಕಾಮಿತಪ್ರದನ ಸಾಲೋಕ್ಯಾದಿ ಪದದಗ್ರ
ಧಾಮ ಗುರುವರನ⁶ನಾ⁶ಸ್ವಚ್ಛಂದ⁶ ಗುರುಕುಲ ಲ
ಲಾಮನಂ ಕಂಡನಾ ಚೋಳಧರಣೀನಾಥನತಿಶಯಾನಂದದಿಂದೆ॥ ೧೪

---

೧ ಯೋಳೀಶ್ವರ್ಗೆ (ಅ.ಈ.ಉ,ಒ.ಓ.ಗ) ೨ ಯಿಟ್ಟ (ಉ.ಒ), ಡಿಟ್ಟ (ಓ) ೩ ವಾಪ (ಅ.ಈ.ಉ.ಒ.ಓ.ಗ) ೪ ಯಾತಿ (ಅ.ಈ.ಉ.ಒ.ಓ,ಗ) ೫ ನಿರಿಸ (ಅ), ಗೆಲಿಸ (ಈ), ೬ ಸಾಕ್ಷಾತ್ (ಈ.ಉ) ೭+ಸಂ (ಉ).

ಕಂಡು ಶುಭಚಿಹ್ನಾಂಗನಾಗುತುಂ ಸಾಷ್ಟಾಂಗ
ದಂಡಾಪ್ರಣಾಮುಮುಂ[1] ಮಾಡಿ [2]ಗುರುಪದವಿಡಿಯ
ಲಂ[3]ಡಲ್ಲೆವ ಮಾಯೆಯೆರ್ದೆ*ಯೊಡೆವ ಗಂಭೀರವಚನದಿ ಪರಸಿ ಕಣ್ಬೊಳೆಯಲು।
ಮುಂಡಾಡಿ ನೋಡಿ ಭಸಿತವನಿಟ್ಟು [3]ಋತ್ವಿಜರ[3]
ತಂಡ [4]ಸುರಿ[4]ವಕ್ಷತೆಯೊಳೆಲೆ ಕಂದ ಬಾಯೆಂದು
ಕೊಂಡಾಡಿ ಕಜಿ[5]ದಂ ಕೃಪಾಮೃತದ [5]ಸೋನೆಯಂ[5] ಚಿಧ್ಘನ ಶಿವಾಚಾರ್ಯನು ॥ ೧೫

ಶರಣರುಘೆ! ಚಾಂಗು! ಬೊಲ್ಲೆನಲು ಪೊಂಬಲ್ಲಕಿಯು
ಹರುಷದಿಂದಿಳಿದರಸನಿಟ್ಟ ಮಣಿಪಾತ್ರೆಗೆಯು
ಚರಣದೊಳ್ತಳೆದು ಮೇಲುಪ್ಪರವಧಾರೆಂಬ ತಾರ್ಕಿಕರ ಘೋಷಣದೊಳು।
ಅರಮನೆಯ ಪೊಕ್ಕು ಪದಕೆಜಿಗಿವ ನೃಪಾಂಗನೆಯು
ಪರಸಿ ಶಿವಲಿಂಗಪೂಜೆಯನೆಸಗಿ ಸಿಂಹವಿ
ಷ್ಟರವ [6]ನಲಿದೇ[6]ಜಿ[6] ಭಕ್ತರೊಳೆಸೆದು ಶಿಷ್ಯನೊಡನೆಂದನಾ ಗುರುರಾಯನು ॥ ೧೬

ನಿನಗಿಷ್ಟಮೇನೆನಲು[8] ಜೀಯ ನಿಮ್ಮಂಘ್ರಿ ದ
ರ್ಶನವೆನ್ನ ದೋಷತಿಮಿರಜ್ಯೋತಿಯೆನ್ನ ಜೀ
ವನಚಾತಕಕ್ಕೆ ಕಾರ್ಮುಗಿಲಜನಿಯಲಾ ನಿಮ್ಮ ಕರುಣರಸವಿನ್ನು ಬೇಜಿ[3]।
ಘನ್‌ತತ್ತ್ವವುಂಟೆ ನೀವೇ ಶಿವಂ ಗುರುವೆ ಕೇ
ಳೆನಗೆ ನಿಮ್ಮಮಲ ಬೋಧೆಯ ನಿರೂಪಂಗೆಯ್ವು
ದೆನೆ [10]ಸುತಗೆ[10] ಶಿವತತ್ತ್ವ[11]ದಿರವ ಬಿತ್ತರಿಸಿದಂ[11] ಚಿದ್ಘನ
ಶಿವಾಚಾರ್ಯನು[12] ॥ ೧೭

ಪರಮ ಶಿವತತ್ತ್ವಕ್ಕೆ ಪ್ರಣವ ಕುಸುಮಕೆ ಗಂಧ
ವರ ಫಲಕೆ ರುಚಿ ದಿವ್ಯರತ್ನಕ್ಕೆ ಸತ್ಕಾಂತಿ
ಎರವಿಲ್ಲದಂತೆ ಪರೆಯಾದಿಯಿಚ್ಛಾಜ್ಞಾನ ಸತ್ಕ್ರಿಯಾ ಶಕ್ತಿರೂಪ।

---

೧ ಪ್ರಣಿಮಮಂ (ಅ) ೨ ಕಯ್ಯ—+ಂ (ಗ),—ಮುಗಿಯುಲಂ (ಅ.ಈ.ಉ.ಒ.ಓ.ಗ.)
೩ ರುಗ್ವಿಜರ (ಉ.ಒ.ಓ) ೪ ವೀ (ಅ.ಈ.ಉ.ಒ.ಓ.ಗ) ೫ ವರ್ಷಮಂ (ಅ)
೬ ಸೋಲ್ದೇ (ಅ.ಈ.ಉ ಒ.ಗ), ನೋಲಿದೇ (ಓ). ೭ ವ (ಓ) ೮ ವಾವುದೆನೆ,—
೯ ವಸ್ತು,- ೧೦ ಸುತಂಗೆ- ೧೧ ಮಂ ಪೇಳ್ದರಾ,- ೧೨ ರು,- (ಅ.ಈ.ಉ.ಒ.ಓ.ಗ)

ಧರಿಸಿ ಶಾಂಭವ ಲೋಕಪತಿಯಪ್ಪ ತನ್ಮಹೇ
ಶ್ವರಗನನ್ಯದ ವನಿತೆಯುಮೆಯಾಗಲದುವೆ ಪಂ
ಕರುಹಗರ್ಭಾಂಡಕೋಟಿಗಳುದಯ ಕಾರಣದ ಲೀಲೆ ಕೇಳ್ಸೆಯೆಂದನು ॥ ೧೮

ಆಲೋಕಮಾತ್ರದಿಂದಖಿಳಮಂ ೧ಸುಟ್ಟುರುಹಿ೧
ಮೇಲೆ ಡಮರುಧ್ವಾನದಿಂದೊಡೆದಜಾಂಡಮಂ
ಕೀಲಕಾದಿಗಳ ಪದಹತಿಯಿಂದೆ ೨ಸುರ್ಗಿ೨ ತಿಱನೆ ೩ತಿರುಗಲಹಿ೩
ಅ ೪ಮೋಱಿಯಲುಳ್ ।
ಫಾಲಾಗ್ನಿಯಿಂದಿಂದು ೫ಕರಗಲಮೃತದಿನಸ್ಥಿ
ಮಾಲೆ ಜೀವೆಂಬಡೆಯೆ ಸೃಜಿತಾಜಕೃಷ್ಣೇಂದ್ರ
ಜಾಲ೫ನೇ೫ನಲೆಸೆವ ನಾಟ್ಯಾಡಂಬರದೆ ಶಿವನ ಲೀಲೆ೬ಯಂ ಕೇಳೆಂ೬ದನು ॥ ೧೯

ಸುರನಿಕರ೭ಮಾ ತಾರಕಂ೭ಗಳ್ಕಿ ಕಾಮನಂ
ಹರನ ತಪಮಂ ಕಿಡಿಸಲೆಂದಟ್ಟೆ ಗಿಳಿಗುದುರೆ.
ಮರುಳ ತುಂಬಿಗಳೊಡನೆ ತಾವರೆಯ ನೂಲ್ದಿರುವಿ೮ನಿ೮ನಿವಿಲ್ಲಿಗರಲಂಬನು ।
ಅರರೆ! ಪೂಡುತ್ತೆಚ್ಚೊಡೋತು ತಪಮಂ ಮಾಳ್ಪ
ವರ ತಪ್ತಜಾಂಬೂನದಾಂಗ ನಾಗಾಜಿನೋ
ತ್ತ೯ರವಸನ೯ಯಂತ್ರ೧೦ವಾಹಕ೧೦ಭಾಳನೇತ್ರನವನಂ-ಸುಟ್ಟು ಭಸಿತವಿಟ್ಟಂ ॥ ೨೦

೧೧ಕಾಲಿ೧೧ ಸೂಡಿದ ಪುಷ್ಪಮಾಲೆಯಂ ದುರ್ವಾಸ
ಲೋಲಮುನಿ ಕುಡೆ ಸಿತವ್ಯಾಲ ಕುಂಭಕ್ಕಿಟ್ಟೊ
ಡಾ ಲೇಖವಲ್ಲ೧೨ಭಸ್ಸೂ೧೨ಲಭ್ಯಾಗ್ಯಂ ಪೋದ ಕಾಲದೊಳಗಸುರ ಸುರರ ।
ಶೈಲದಬ್ಧಿಯ ಮಥನವೇಳೆಯೊಳಗಹಿವಿಷ
ಜ್ವಾಲೆಯಿಂ ಬೇವ ಬಲಮೂಲದನಿಮಿಷರ ಭಯ
ಜಾಲಮಂ ಪಱಿದುಗ್ರಹಾಲಾಹಲವನರರೆ ಶೂಲಿ ಕಂಠದೊಳೆ ತಳೆದಂ ॥ ೨೧

---

೧ ಸಂಹರಿಸಿ (ಅ.ಇ.) ೨ ಸುರ್ಗೆ (ಆ.ಈ.ಗೆ) ೩ ತಿರುರ್ಗೆ (ಅ.ಈ) ೪ ಮೋಱಿಯೆ ಸರ್ಪಂ (ಅ.ಈ.ಉ.ಗ) ೫ ನೆ(ಅ.ಇ) ೬ ಕೇಳ್ಳೆಯೆಂ (ಅ) ೭ ವಸುರ ತಾರಕ (ಅ.ಇ,ಓ) ೮ ೧...[ಉ.ಓ.], ೧ನಿವಿಲ್ಲ ಮಲರಂಬನು. (ಗ) ೯ ರಿ೯ಯಕಂ (ಅ.ಇ) ೧೦ ವಾಹಂ (ಅ-ಇ.ಉ.ಓ.ಗ) ೧೧ ಶೂಲಿ (ಗ) ೧೨ ಭನ ಸ್ಯೂ (ಅ.ಈ.ಉ.ಓ.ಗ)

ಎಲೆ ಚೋಳ ಪಂಚವಿಂಶತಿ ಲೀಲೆಗಳ ಕಥೆಯ
ನೊಲಿದು ಕೇಳ್ದವರಷ್ಟ ಮದ೧ಗಳಂ೧ ಕೆಡೆಮೆಟ್ಟಿ
ಯಲೆದು ಸಪ್ತವ್ಯಸನದೇಳ್ಗೆಯಂ ವೈರಿಷಡ್ವರ್ಗಮಂ ಕಿಳ್ತು ಬಿಸುಟು ।
೨ಬಲುಪಿನಂ೨ತಃಕರಣ ಚಾತುಷ್ಟಯಂಗಳ
ಗ್ಗಲಿಕೆಯಂ ತೀರ್ಚಿ ಪಡೆವರು ಭೋಗ ಮೋಕ್ಷಂಗ
ಳಲಘು ಪದವಿಯನೆಂದು ಪೇಳ್ದನಾ ಚಿದ್ಘನ ಶಿವಾರ್ಯನಘತಿಮಿರಸೂರ್ಯಂ ॥ ೨೨

ಎಂತೆನ್ನ ಪರಮಾರ್ಥದಾರಿದ್ರ್ಯಕೆಂದು ಚಿ
ತ್ಕಾಂತ ಗುರುವಂ ಕೇಳಲಾ ಶಿವಾಗಮಲಿಖಿತ
೩ಪಂತಿಯೆನಿಸುವ೩ ಸಾಧನಂ೪ಗಳಿಂ೪ ನೆಲೆಯಱಿದು ಕಾರಿಕಾಲಮ್ಮೆ ಕಾಲು ।
ಮುಂತಾಗಿ ನಡೆಯೆ ಸುಜ್ಞಾನಾಂಜನವನಿ೫ಕ್ಕೆ
ಶಾಂತ ಮುರುಘರೆ ಮಂತ್ರವಾದಿ೬ಯಾಗುತ್ತಿರೆ ಪು
ರಂತರೆಮ್ಮಧಿಕ೬ ಪರವಸ್ತುವಂ ೭ಕಂಡ೭ರವರಡಿವಿಡಿದು ಬರ್ದು*ಕೆಂದನು ॥ ೨೩

---

೧ ವಸುರೆ (ಅ.ಗ.) ೨ ಒಲದೊಳಂ (ಅ.ಗ) ೩ ಸಂತತೆಯೆನಿಪ್ಪ (ಅ.ಓ.ಗ)
೪ ದಿಂದೆ (ಅ.ಗ) ೫ ಟ್ಟಿಂ (ಅ.ಗ) ೬ ಯೆನೆ ಶರಣರು । ಸಮಂತು (ಅ ಓ.ಗ)
೭ ಕಂಡು ಬೆರಸಿದ (ಅ.ಓ.ಗ)

## ೪ ಪರ್ಬಿತ್ತು ಶುಭವಾರ್ತೆ ಧರೆಗೆ

ಇಂತು ಚಿದ್ಘನ ಶಿವಾಚಾರ್ಯರಾ ಚೋಳ ಭೂ
ಕಾಂತಂಗೆ ಬೋಧಿಸುತ್ತಿರ್ಪೆಡೆಯೊಳಾ ನೃಪನ
ಕಾಂತೆ ಸದ್ಗುಣಿಯಮೃತವತಿ ನೋಡಿ ಕೆಳದಿಯೊರ್ವಳೊಳೆಂದಳಾನಂದದೆ ।
ಚಿಂತಾಮಣಿಯ ಜಱಿವ ಪಂಚ ಕಲ್ಪದ್ರುಮದ
ಸಂತತಿಯುಂನತಿಗಳೆವಂ ಕರದಾನಿ ಗುರುಮೂರ್ತಿ
ಮುಂತೆ ರಾಜಿಸುತಿರ್ಪರಿವರ ಕೃಪೆಯಿಂ ಪಡೆವೆನೆನ್ನಭೀಷ್ಟವನೆಂತೆನೆ ॥ ೧

ಹಿಂದೆಮ್ಮ ಮಂತ್ರಿ ಪತಿಮೋಹಿಯುಣುಗನನೆನ್ನ
ಕಂದನೆಂದೇ ಬಗೆದು ಸಲಹುತಿರ್ದಪ್ಪೆನಾ
ನಂದು ರೇವಣದೇಶಿಕೇಂದ್ರ೩ಪದಯುಗವ೩ ತೆಲ್ಲಿಗ ಕಲ್ಲಿಸೆಟ್ಟಿ ನೆನೆದು ।
ಒಂದು ಮುನ್ನುಳ್ಳಕ್ಕಿಗೆಣೆಗಣ್ಣನುಳ್ಳಾತ
ನೆಂದೆಂಬಿನಂ ಮೆಱೆದನಂತೆ ಮದ್ಗುರುಕೃಪೆಯೊ
ಳಿಂದು ಸುತನೊರ್ವನಂ ಮದ್ಗರ್ಭಶರಧಿಯೊಳು ಪಡೆವೆನಾನೆಂತೆಂದೊಡೆ ॥ ೨

ಚೆಲ್ಲೆಗಂಗಳ ಮಿನುಗುವರಳೆಲೆಯ ಮಾಗಾಯ್ಗ
ಳುಲ್ಲಾಸದಿಂ ಮಿಱುಗುವೆಳನಗೆಯ ಮೊಳೆವಲ್ಲ
ಗಲ್ಲದೆಡೆಯೊಳಗೊಸರ್ವ* ಲಾಲಾಜಲಾಮೃತದೊಳಬ್ಬೆಂಬ ಸುತನ ತೊದಲಾ।
ಸೊಲ್ಲನಾಲಿಸಿ ನೋಡಿ ತೆಗೆದು ಮೂರ್ಧ್ನಿಘ್ರಾಣ
ದಲ್ಲಿ ತಕ್ಕೈಸಿ ಬಾಯೊಳ್ಬಾಯನಿಟ್ಟಳ್ಕ
ಱಲ್ಲಿ ಮುಂಡಾಡುವೆಂ ಪಾಡುವೆಂ ಮುದ್ದುಗಳ ಜೇಡುವೆನೆನುತ್ತೆ ನಲಿದು ॥ ೩

ಸೋಗೆಗಂಗಳ ವನಿತೆ ಮನದೊಳಗೆ ನರ್ತಿಸು
ತ್ತಾಗಳೈತಂದು ಗುರುಪದಕೆ ವಂದಿಸಿ ನಿಂದು
ಕೈಗಳಂ ಮುಗಿದು ಬಿನ್ನಪ ಜೀಯ ಚೋಳಕುಲಕಮಲಬಾಲಾರ್ಕನೆನಿಪ ।

---

೧ ನಿಳಕೆಯ್ವ [ಅ.ಗ] ೨ ರ [ಅ] ೩ ನಡಿಗಳನೆ [ಅ.ಗ]

ಚಾಗಿ ಕುವರನನಿತ್ತು ರಕ್ಷಿಸೆನೆ ದೇಶಿಕಂ
ರಾಗಿಸುತ್ತಂ ಮಗಳೆ ಕೊಳ್ಳೆನುತ ಕರ್ಪೂರ
ಯೋಗ ೧ತಾಂಬೂಲ ಪ್ರಸಾದ೧ದೊಡನಿಷ್ಟಸಿದ್ಧಿಯನಿತ್ತನಾನಂದದೆ ॥ ೪

ಧಾರಿಣೀಶನ ಹೃದಯಕಮಲವನಲರ್ಚಿ ಗಂ
ಭೀರ ಶಿವಭಕ್ತಚಕ್ರಂಗಳಿಗೆ ನಲವಿತ್ತು
ಸಾರಿದವರಜ್ಞಾನತಿಮಿರಮಂ ತೀರ್ಚಿ ನೃಪನಂಗನೆಯ ಹರ್ಷಮೆಂಬಾ ।
ಚಾರುನಯನಕ್ಕೆ ಬೆಳಗಂ ಬೀಱಿ ಸರ್ವ ಸ
ತ್ಕಾರಮಂ ಕೈಕೊಂಡು ಗಣ೨ಸಂತತಿ೨ಯ ಸಿರಿಯೊ
ಳಾರಾಧ್ಯಮೂರ್ತಿ ಬಿಜಯಂಗೈದನಮಲಪ್ರಭಾಕರಂ ನಿಜವಾಸಕೆ ॥ ೫

ಇತ್ತಲೀ ಚೋಳಧರಣಿಪನೀಶ ಪೂಜೆಗೈ
ಯುತ್ತೆ ಶಿವಶರಣಗೋಷ್ಠಿಯ ಸುಖದೊಳಾಳಿ ಮುಳು
ಗುತ್ತೆ ಮಾರ್ಕಂಡೇಯಮುಖ್ಯ ಪೌರಾಣಪ್ರಸಂಗದೊಳಗೋಲಾಡುತಾ ।
ಸತ್ಯ ಸದ್ಗುಣ ಶಾಂತಿ ವೀರ ವಿತರಣ೩ಗಳಿಂ೩
ತತ್ತರುಣಿಸಹಿತ ಚರಸೇವೆಗೈವುತ್ತಲೈ
ವತ್ತಾಱು ದೇಶವರಸರು ತನ್ನನೋಲೈಸೆ ರಾಜ್ಯವಾಳುತ್ತಿರ್ದನು ॥ ೬

ಅರಿರಾಯಗಿರಿವಜ್ರದಂಡನಘವನಕಾಲ
ಸರಣಿ ೪ನಿರ್ಮಲಳ೪ಧರ್ಮಸಂಪನ್ನ ೫ಸನ್ಮಾರ್ಗ೫
ನಿರುತಿ೬ಯಜ್ಞಾನಪಾಶಚ್ಛೇದ೬ ಪಾವನಂ ರಾಜರಾಜಂ ಮದೀಶಂ ।
ಧರಣಿಯಧಿನಾಥನಹ ಸತ್ಯೇಂದ್ರಚೋಳವರ
ನರಪತಿಯನಂತಗುಣಿಯೆಂದು ದಶದಿಕ್ಕಿನೊಳ್
ಪರಿದಾಡಿದಳು ಕೀರ್ತಿಮಾನಿನಿ ವಿಲಾಸದಿಂ ಶಿವನ ಭುಜಬಲವಂದದೆ ॥ ೭

ಅಂಬುಧಿಪರೀತವಸುಮತಿಯನಾಳುವ ನೃಪಕ
ದಂಬಕೋಟೀರಮಂಡಿತಪದಂ ದಿಗ್ಭೂಮಿ
ಯಂಬರವ ಚುಂಬಿಸುವ ಕೀರ್ತಿ ಬಾಲಾರುಣಾನ್ವಯ ಸಮುದ್ಧರಣ ಸುತನು ।

---

೧ ಪ್ರಸಾದ ತಾಂಬೂಲ [ಅ.ಗ] ೨ ತಿಂತಿಣಿ [ಅ.ಇ] ೩ ದಿಂದೆ [ಅ ಗ] ೪ ನಿರುಪಮ [ಗ] ೫ ಸುಜ್ಞಾನ [ಅ.ಗ] ೬ ಶಿವಭಕ್ತಿಪಾಶಾನ್ವಿತಂ [ಅ.ಗ]

ಬಿಂಬಾಧರೆಯ ಗರ್ಭದಿಂದೊಗೆವನೆಂಬುದ ನಿ
ತಂಬಿನಿಯ ಚೆಲ್ವಿನಂಬರದಲ್ಲಿ ಕಾಣಲಾ
ಯ್ತೆಂಬಂತೆ ಮಾಣಿಕಂಗಂಡಳಂತಾ ನೃಪನ ರಾಣಿ ಗುರುಮಂತ್ರವಾಣಿ ॥ ೮

ಹಿಂಡದಿರು ಹಿಳಿಯದಿರು ಹಿಕ್ಕಿ ಕೂಡೊವಜಿದಿರು
ಪುಂಡರೀಕೇಕ್ಷಣೇ ನಾನಳುತ ನಿನ್ನ ಮಱೆ
ಗೊಂಡು ಪಾದಾಬ್ಜಮಂ ನೆಱೆ ಸಾರ್ದು ಬಾಳ್ವೆನೆಂದಿರ್ದನೆಲೆ ತಾಯೆ ಕೂರ್ತು!
ಮಂಡೆಯೊಳ್ ಕೈಯಿಡಲು ನಂಬಿರ್ದನಕಟ! ಮುಂ
ಕೊಂಡು ಮುಡಿಮಾಡಿ ಪೆಡಗಟ್ಟುವಾ[೧]ಕೇಳ್[೧] ನಿನ್ನ
[೨]ಗಂಡಂಗೆ[೨] ಲೇಸೆ ಪೇಳೆಂಬ[೩]ಳಕದಿಂ [೪]ಬಿಂದು ರಾಜಿಸಿದಳಾ ಮಾನಿನಿ ॥ ೯

ಇಂತು ಚಾತುರ್ಥಿಕಸ್ನಾನಮಂ ಮಾಡಿ ನೃಪ
ಕಾಂತೆ ದೇವಾಂಗಮಂ ತೆಗೆದುಟ್ಟು ಸತ್ಕೃಪಾ
ವಂತನಂ ಪಡೆವಕ್ಕಱಿಂ ಬಟ್ಟೆ ಮುತ್ತುದೊಡಿಗೆಯ ತೊಟ್ಟು ಸುಲಿಪಲ್ಗಳಾ।
ಕಾಂತಿ ಮುಖದೊಳ್ ಪೊಳೆಯೆ ಶುಭ್ರತ್ರಿಪುಂಡ್ರದಿಂ
ದಂ ತಳ್ತ ಚೆಲ್ವ ಪಣೆಯಿಂ ಮುಡಿದ ಮಲ್ಲಿಗೆಗ
ಳಿಂ ತರಳೆ ಮೂಱು ಲೋಕಕ್ಕಮುರ್ದು*ಗಱೆವ ಚಂದಿರವೊಗ[೫]ದೋಳೊ[೫]ಪ್ಪಿರ್ದಳು ೧೦

ಕುಮುದದಿಂ ಪ್ರತಿಕೂಲದಿಂ ವಿಜಾತಿಗಳ ಸಂ
ಗಮದಿಂದೆ ಜಡಜೀವನೋ[೪]ಪಾಯದಿಂ[೪] ಭಂಗ
ಸಮಿತಿಯಿಂದಿರ್ಪ ತಾವರೆಗೊಳಂ ಪತಿಯ ಹರ್ಷಾನುಕೂಲೆಯ ಸತ್ಕುಲ।
ರಮೆಯನುತ್ತಮ ಶಿವಪ್ರಾಣಿಯನಭಂಗದು
ತ್ತಮ [೫]ಪೂರ್ಣ[೫]ಚಂದ್ರವದನೆಯ ನಾಭಿಸರಸಿಯೊಂ
ದಮಲತ್ವಕ್ಕೆಣೆಯಲ್ಲವೆನಲೆಸೆದಳಾ ಚೆಲ್ವ ಪೆಣ್ಣು ಭೂಭುಜನ ಕಣ್ಣು ॥ ೧೧

ಲೋಕಕ್ಕೆ ನಾಂ ಮಿತ್ರನೈಸಲೇ ಶಿವಗಣಾ
ನೀಕಕ್ಕೆ ಮಿತ್ರನುದಯಿಪನಿಲ್ಲಿ ನೋಳ್ಪೆನಾ
ನೀಕೆಯ ಪವಿತ್ರ ಕುಕ್ಷಿಯನೆಂದು ಪೂರ್ವಗೋತ್ರದೊಳು[೬]ದಯಮಾಗೆ[೬] ಮಿತ್ರಂ।

---

೧ ಗಳ್ [ಅ.ಇ] ೨ ಗಂಡಗಿದುವೆ [ಅ.ಇ] ೩ ದಿನೊ [ಅ] ೪ ಪಾದಿಯಂ [ಅ]
೫ ಪೂರ್ವ [ಅ] ೬ ದೇಹವಾಗೆ [ಈ]

ಆ ಕಾಲದೊಳಗನ್ಮೃತವತಿ ಶಿವನ ಪೂಜೆಯಂ
ಭೂಕಾಂತ[1]ಸಹಿತಲೊಡರಿಚಿ[1] ಸುಖದಿನಿರೆ ಗುರುಕೃ
ಪಾಕಲ್ಪವೃಕ್ಷದುತ್ಪತ್ತಿಬೀಜದ ಮೊಳ್ಕೆಯಿಂ[2]ಗರ್ಭ ತಲೆದೋಱಿ[2]ತು[3] ॥ ೧೨

ವಿಳಸದೋಂಕಾರಬೀಜಂ ಕಂದವಾಗಿ ಪೊಡೆ
ಯೊಳೆ ಮೆಲ್ಲನಂಕುರಿಸೆ ನಾಭಿಮಂಡಲದಲ್ಲಿ
ಸುಳಿದೋಱಲೆರ್ದೆ*ಯ [3]ಸೆರೆ[3]ಪಸುರ್ವ*ಳ್ಳಿಯಾಗೆ ಮತ್ತಧರದೊಳು
ತಳಿರುದೋಱ[3] ।
ನಳನಳಿಪ ಕುಚಕುಟ್ಮಲಂ ಮೆಱ[3]ಯೆ ನಾಡೆ ಕ
ಣ್ಗಳುಮಲರೆ ರಾಜಿಸಿದಳಾ ಕಾಂತೆ ಚೋಳಭೂ
ವಳಯಾಧಿಪತಿಳಯಿಪ್ಪ[4]ಳವೀವ[5]ನವ[5]ಕಲ್ಪಲತೆಯಂತೆ ಕಣ್ಗೆ[6]ನಿದ[6] ಬೀಱ[7] ॥ ೧೩

ಮಿಗೆ ಶಾರದಾಭ್ರದಿಂ ಚಂದ್ರಮಂ ರೋಹಣದ
ನಗದಿಂದ ಚೆಲ್ವ ರನ್ನಂ ಕಾಮಧೇನುವಿಂ
ಸೊಗಸೀವ ಪಾಲ್ ಮಿಱುಪ ತಾಮ್ರಪರ್ಣಿ[8]ಯ [9]ಸಿಂಪಿನಿಂ[9]ಮುತ್ತು ಪೂರ್ವಾ[8]ದ್ರಿಯಿಂ।
ಝುಗಝುಗಿಪ ಬಾಲಾರ್ಕನುದಯಿಸಿದನೆಂದೆಂಬ
ಬಗೆ ಬೇಡ ಸತ್ಪ್ರಣವದಿಂ ಮೂಲಮಂತ್ರ ಲತಾ
ನೊಲಗೆದಂದದಿಂದುದಯವಾದನಾ ವನಿತೆಯುದರದಿನಮಲ ಸುಕುಮಾರನು ॥ ೧೪

ಆ ವೇಳೆಯಲ್ಲಿ ಕೆಳದಿಯರೆಯ್ದಿ ಪೇರೊಸಗೆ
ದೇವ ಬಿನ್ನಪ[8] ಚೆಲ್ವ[8]ಕುವರನುದಯಿಸಿದನೆನೆ
ಭೂವರಂ ಚಿತ್ತಭೂಮಿಯೊಳು ಹರ್ಷದ ಬೀಜಮಂ ಬಿತ್ತೆ ಸರ್ವಾಂಗವ।
ತೀವಿದಗೆಯೆನೆ ರೋಮ[10]ರಾಜಿ[10]ಯುವಱ[3]ಡೆಗೆಱ[3]ದ
ಪಾವನೋದಕಮೆಂಬಿನಂ ಸ್ವೇದಮುಣ್ಮೆ ಭ
ಕ್ತಾವಳಿಗಳಾಯೆಂದು ನಲಿಯೆ ಪರಕಲಿಸಿ **ಪರ್ಬಿತ್ತು ಶುಭವಾರ್ತೆ ಧರೆಗೆ** ॥ ೧೫

---

೧ ನೊಡನೆ ವಿರಚಿಸಿ [ಅ.ಈ,ಓ,ಗ] ೨+ದೆ ಗರ್ಭಂದೋಱತು [ಈ.ಗ] ೩ ಪಸುರೆ [ಗ]
೪ ಗಿಪ್ಪಫಲ [ಅ.ಉ.ಓ], ಯಿಪ್ಪಫಲ [ಈ.ಗ] ೫—[ಅ.ಈ.ಉ.ಓ.ಗ] ೬ ದಿರ [ಉ]
೭ ಚಿಪ್ಪಿನಿಂ [ಉ] ೮ ವೇಪೊ [ಅ.ಈ.ಉ.ಗ] ೯ ವಯ್ಯ [ಅ.ಈ.ಉ.ಗ] ೧೦ ಹರ್ಷ [ಅ.ಇ]

ಪೌರಜನ¹ವೆಯ್ದೆ² ಹರ್ಷಾಮೃತಂದಳೆವುತಿರೆ³
ಭೋರೆಂದು ಬಹುವಾದ್ಯ ಸಂತತಿಗಳುಲಿವುತಿರೆ
ಚಾರು ಪುಷ್ಪಾಂಜಲಿಗಳುಂ ನಿವಾಳಿಯ ರತ್ನ³ವಾ³ ಬೀದಿಬೀದಿಯಲಿ |
ಆರಯ್ಯೆ ಪರಕಲಿಸಿ ⁴ವಮುಕರ⁴ತೋರಣಮುಖ್ಯ
ಚಾರುಪ್ರಕಾಶವಾವರಿಪ ಕಾಲದೊಳೆ ಮುಂ
ಗಾರಂತೆ ಚಿದ್ಘನಶಿವಾಚಾರ್ಯರೆಯ್ತಂದರು ಕೃಪಾವರ್ಷಮಂ ಕಱೆಯಲು ‖ ೧೬

ಭೂತಳಾಧಿಪನೆದ್ದು ಸಾಷ್ಟಾಂಗವೆಱಗಿ ಸಂ
ಪ್ರೀತಿಯಿಂ ಪರಸಿ ಕುವರಂಗೆ ಗುರು ತನ್ನ ಕರ
ಜಾತಕರ್ಮಂ ಮಾಡಿ ⁵ಲಿಂಗೋ⁵ಪದೇಶಪ್ರಭಾಪುಂಜಮಂ ಕರುಣಿಸಿ |
ಆತಂಗೆ ಮಂತ್ರಲಕ್ಷಕನಾಮವಿತ್ತು ತ
ನ್ಮಾತೆಯಂ ಸತ್ಕರಿಸಿ ಪೊಡಮಡಸಿಕೊಂಡು ವಿ
ಖ್ಯಾತನೆಯ್ದಿದನು ನಿಜವಾಸಕ್ಕೆ ಪರಮಗುರುರಾಜ ನತಕಲ್ಪಭೂಜಾ ‖ ೧೭

ಅಣಿಯರದೆ ದಾನ ಧರ್ಮಂಗಳಂ ⁶ಸಕಲ ಜನ⁶
ದಣಿವಂತೆ ಮಾಡಿಯಾರಾಧನೆಯ ಭಕ್ತತಿಂ
ತಿಣಿಗಿತ್ತು ಭೂತಿವೀಟಕೆವೆರಸಿ ಶಿವಪುರಂಗಳ ಸಮರ್ಪಣೆಯ ಮಾಡಿ |
ಗಣಪರ್ವಮಂ ತನಯನೊಗೆದ ಪನ್ನೆರಡು ದಿನ
ಮಣಿದೊಟ್ಟಿಲುಚ್ಚವದೊಳೆಸಗಿ ಸುಖದಿಂದೆ ಧಾ
ರಿಣಿಯ ಪಾಲಿ⁷ಸುತಲೊಪ್ಪಿದನು ಚೋಳೇಂದ್ರ ನೃಡಸಮುಯಾಬ್ಧಿ
ಪೂರ್ಣಚಂದ್ರಾ⁷ ‖ ೧೮

ನಗಿಸಿ ಕೈವೆರಲ್ಗ*⁸ಳಿಂದಳ್ಳೆಯಂ ಜಕ್ಕುಲಿಸಿ
ಮಗನೆ ಬಾಯೆಂದು ಬರ ಸೆಳೆದಪ್ಪಿ ಶಿರ⁸ಕೆ ಕರ
ಯುಗವಿಡುತ್ತಾನಂದದಿಂದೆ ಜೋಗುಳವಾಡಿ ವಾಸನೆಯ ಕಮ್ಮಲರ್ಗ*ಳಾ |

---

೧ —[ಅ.ಇ] ೨ ಯೆ ಚಿತ್ತದೊಳು [ಅ.ಇ] ೩ ಗಳು [ಅ.ಇ.ಓ] ೪ ಮುಕುರ [ಅ.ಈ.ಉ.ಗ] ೫ ಸೈವೋ [ಅ.ಇ] ೬ ಬಹುಜನಂ [ಅ.ಈ.ಉ.ಗ] ೭ ಸುತಲೊಪ್ಪಿದ ನಧಿಕ ಚೋಳೇಂದ್ರ ನೃಡಸಮಯ ಶರಧಿಚಂದ್ರಾ ‖ [ಅ.ಈ.ಉ], ಸುತೊಪ್ಪಿದನಧಿಕ ..........ಸಮಯಾಬ್ಧಿ ಪೂರ್ಣಚಂದ್ರಾ ‖ (ಓ), ಸಲೊಪ್ಪಿದನಧಿಕ.........ಸಮಯಶರಧಿ ಚಂದ್ರಾ ‖ (ಗ) ೮ ವ ಹಸ್ತಗಳೆರಡರಿಂ ಪಿಡಿದು ತೂಗಿ (ಅ.ಇ)

ಅಗಜಾಧಿಪತಿಗರ್ಪಿಸುತ್ತಿತ್ತು ಯತ್ನದಿಂ
೧ಸೊಗಸುವಡೆಯಿಸಿ೧ ಪುತ್ರನಂ ತಂದೆ ಮುದ್ದಿಸುವ
ಬಗೆ ಮೊದಲ್ ಪಂಚಾಕ್ಷರಿಯ ಮೋಹವಲ್ಲದೀ ಲೋಕವರ್ತನೆಯಪ್ಪುದೆ ॥ ೧೯

ಆ ರಮಾಕರೆ ಮುನ್ನ ಮಂತ್ರಿ ತನಗಿತ್ತ ಸುಕು
ಮಾರ ಮಿತವಚನನಂ ಮಂತ್ರಲಕ್ಷಕನನೊ
ಯ್ಯಾರದಿಂ ಸರಿಯಕ್ಕಳಿಂ ಸಲಹೆ ರಾಮಲಕ್ಷ್ಮಣ ನಕುಲಸಹದೇವರ ।
ಓರಗೆಯೊಳು ಅ೨ ಬಳೆದರೆಂಬುದನುಚಿತ ಕಾಮ
ವೈರಿಯಾಲಯದ ಕಂಬವನೊಡೆದ ಬೌದ್ಧನ ವಿ
ದಾರಿಸಿದ ರೇಮಯ್ಯ ರೇಚಯ್ಯಗಳ ಮಾಳ್ಕೆಯಿಂದ ಬಳೆದರು ಬಳೆದರು ॥ ೨೦



೧ ಸೊಗಸ ಸುಡಿಯಿಸಿ (ಅ), ಸೊಗಸೆ ಸುಡಿಯಿಸಿ (ಇ) ೨ ದಲ್ಲಲ್ಲು ಕಾಮಾ (ಅ.ಈ.ಉ.ಓ.ಗ)

## ೫. ಸುಖದಿಂ ವಸಂತಪೂಶವ ಕಳೆದಸು

ಇಂತು ಕುವರರು ನಾಡೆ ಮೆಱೆಯೆ [1]ಧರೆಗೆ ಕೊಂಡಾಡೆ
ಸಂತಸದ ಚೈತ್ರಕಾಲಂ ಮೂಡೆ ದಕ್ಷಿಣದಿ
ಶಾಂತದೊಳಗೆಲರು ತಣ್ಣನೆ ತೀಡೆ ಕೋಕಿಲಂಗಳ್ ಕೊರಲ್ದೆಱಪುವಾಡೆ।
ಕಂತು ನಲಿದಾಡೆ ವನಿತೆಯರಳುಪಿಸಿಂ ನೋಡೆ
ಮುಂತೆ ಪಾರ್ವಲರ್ವ*ಕ್ಕಿ ಝೇಂಕಾರದಿಂ ಪಾಡೆ
ಕಾಂತ ಸಹಕಾರ[2]ವಾ[2] ಕೆಂದಳಿರ್ಗ*ಳೊಳ್ಳೊ[3]ಡೆ[3] ರಾಜಿಸಿದುದಾ ವಸಂತಂ॥ ೧

ಕಂಡು ವನಪಾಲನಾ ಸುರಗಿಪ್ರಸೂನಮುಂ
ಕೊಂಡು ಧೃತರಕ್ತಕರವೀರನೆಳ್ತಂದು ಭೂ
ಮಂಡಲಾಧಿಪ ಕೇಳು ಕಾಮುಚಕ್ರೇಶ್ವರನ ದಂಡು ಬನದೊಳಗೆ ಬಿಟ್ಟು।
ಪುಂಡರೀಕಾಕರಂ ಜಂಡ್ರಾಯ್ತು ಶುಕಪಿಕಂ
ತೊಂಡುಗೆಡೆದುಱೆ ಕೂಗಲಳ್ಕಿ ನಮಿಸುತ ಭಯಂ
ಗೊಂಡು ಪಲ್ಗಿರಿವುತಿವೆ ದಾಳಿಂಬವಿನ್ನಾ ವಸಂತವೇಳೇಳೆಂದನು॥ ೨

ಎಂದ ಮಾತಂ ಕೇಳ್ದು ನೂತನಾನಂಗನಾ
ನಂದರತಿಸಹಿತ ವೈಭವದಿಂದ ಪೊಱಮಟ್ಟು
ಪಿಂದೆ ಕೋಟ್ಯನುಕೋಟಿ ವನಿತೆಯರ ಸೌರಂಭದಿಂದಮೃತವತಿ ನಡೆಯಲು।
[4]ಬಂದು ವನಮುಂ ಪೊಗುತ್ತಂದಾ ವಸಂತನೊಲಳ
ವಿಂದ ಸುಖದೊದ[5]ವೀಯಲಿಂದಾನು[5] ಸರ್ವೇಶ
ನಂ ದಯಾನಿಧಿಯನಾ ಸ್ಕಂದಪಿತನಂ ಪೂಜಿಪಂದಮುಂ ಮಾಳ್ಪೆನೆಂದ॥ ೩

ಕಳವಾಗ್ರ ಚಿಂತಾಮಣಿಕ್ಷೇತ್ರ[6]ಮಧ್ಯದೊಳ್[6]
ತೊಳಪ ವನದೊಳಗಮೃತದಿಂದನಿಮಿಷಾಳಿಯಿಂ
ನಳನಳಿಪ ಪಾರಿಜಾತದೆ ಮಾರುತಸ್ಪರ್ಶದಿಂ ಸೋಗೆಗಳ ಕಂಗಳ।

---

೧ ಜನ (ಅ.ಇ)  ೨ ದೊಳ್ (ಅ.ಇ)  ೩ ಡಿ (ಳ)  ೪ ಬಂದಲ್ಲಿ ವನವ ಪೊಕ್ಕಂದಾ ವಸಂತ ನಲ (ಅ.ಇ)  ೫ ವ ಕುಡಲಿಂದಾವು (ಅ.ಇ)  ೬ ದಗ್ರದೊಳ್ (ಗ)

ತಳೆಗೆದಜುತಿಹ ಶಿಖಿಗಳಿಂ ಧರ್ಮರಕ್ಷಕಂ
ಜಳಧಿಮುದ್ರಿತಧರಾಧೀಶ ಪಾವನ ಶಿವನ
ಕಳೆಯಂಶ ಚಿನ್ಮಾನಿನೀಶ ಸೌರಂಭಾಳಿಯಿಂದೆ ಸತ್ಯೇಂದ್ರನೆಸೆದಂ॥ ೪

ಅನಿತಕ್ಕೆ ವಲ್ಲಿ ತರು ಗುಲ್ಮ ಕಾಸಾರದೊಳ್
ಘನಮಾಗರಲ್ದಾ ತೊಡಂಬೆಯುಂ ಸಡಿಲ್ದ ಕೀ
ಟ ನಿಕಾಯ[1]ಮುಜಿ[2] [3]ಸಾರ್ದ[3] ಪಜಮೆಗಳು [4]ಪೊಗವಿಟ್ಟು[4] ಪೀರ್ದ ಪುಷ್ಪ
ಗಳನುಳಿದು।
ತನಿಗಂಪನೀವ ಸೊಂಪಿಂದಲ್ಲರ್ವಿರಿದ ಚೆ
ಲ್ವಿನ ಸೊಬಗಿನುಳ್ಳಲರ ತಿಜಿದರಬಲೆಯರು ಪಾ
ವನ ಮಲ್ಲಿಕಾಸ್ಮೇರ ಕನಕಪ್ರಭಾಂಗ ಸೌಂದರಜಾತಿ ಪದ್ಮಿನಿಯರು ॥ ೫

ಅತ್ತೆಸೆವ ಮಾವನಳಿಯಂ ಮುಗಮುಗಿಪ ಕಂಪು
ವೆತ್ತ ಕುಸುಮವನೀಕ್ಷಿಸೊಸೆವುತಂ ಮನದೊ[5]ಳಂ[5]
ದತ್ತಿಗೇಕೀ ಹುಳುಕತನವೆಂದು ಭಾವಜಂ ತನ್ನಯ್ದನೆಯ ಬಾಣದ।
ಉತ್ತಮದ ಕನ್ನೆಯ್ದಿಲೆಂಬ [6]ಕಣ್ಮುಚ್ಚಿದನೆ[6]
ನುತ್ತ ನಾದಿನಿದುಗಂಪಿಂ ನಗುವ ತಾವರೆಯ
ಮೊತ್ತಮಂ ನೋಡೆಂಬ ನೆವದೆ ಬಂಧುಗಳ ನೆನೆದಾಡುತಿರಲಾ ಸತಿಯರು ॥ ೬

ಭಾವಕಿಯರೆಯ್ದೆ ಪೂಜಾಸ್ಥಲಕೆ ನಡೆತಂದು
ದೇವ ಚಿತ್ತೈಸಯ್ಯ ಸಿರಿವೆತ್ತು ರಾಜಿಸುವ
ತಾವರೆಯ ಕುಸುಮವನಶೋಕೆಗಳ ಚೂತದೊಳ್ದಳಿರ್ಗ*ಳಂ ಮಲ್ಲಿಗೆಗಳಾ।
ಪೂವ ಕರ್ನೆಯ್ದಿ[7]ಲ್ಗಳಟ್ಟಿದಂ[7] ಮನ್ಮಥ ಮ
ಹಾವೀರನೀಶಂಗೆ ಸೋಲ್ತಸ್ತ್ರಸಂಕುಲವ
ನೇವೇಳ್ವೆನುಳಿದ ಪುಷ್ಪಗಳನೆಂದೀವುತಿರ್ದರು ರಾಯನಾನಂದಿಸೆ॥ ೭

---

೧ ಗಳು (ಅ.ಇ  ೨ —(ಅ.ಇ.ಓ.)  ೩ ಸಾರ್ದು (ಇ.ಓ.ಗ.)  ೪ ಮುಸುಂಡಿಟ್ಟು (ಅ.ಇ.ಓ)  ೫ ಳಗೆ (ಆ.ಉ)  ೬ ಕಣ್ಮುಗಿದರೊಯೆ (ಉ)  ಕಣ್ಮುಚ್ಚಿದವೆ(ಅ.ಈ)
೭ ಲಟ್ಟಿದನೊಯೆನೆ (ಓ)

ಭೂಪನಾನಂದದಿಂದಂ ಭಸಿತಸರ್ವಾಂಗ
ಲೇಪನಾಗುತ್ತಂ ತ್ರಿಪುಂಡ್ರ ಭಾಳಾದಿ[೧]ಯಿಂ[೧]
ತ್ರೈಪುರಾರಿಯ ನೆನೆದು ರುದ್ರಾಕ್ಷಿಗಳನಾಗಮಕ್ರಮದೆ ಧರಿಸಿ ಬಳಿಕಾ।
ಶ್ರೀಪಂಚವರ್ಣಮಂ ಜಿಹ್ವೆಯೊಳ್ ಜಪಿಸುತ್ತ
[೨]ಲಾ[೨] ಪಾವನದ ವೇದನಾ[೩]ರುದ್ರ[೩]ಯೆಂಬರ್ಥ
ದಾ ಪರಬ್ರಹ್ಮ ತಾನಾಗಿ ಪದ್ಮಾಸನದೊಳಿರ್ದು ಮತ್ತಾ ಚೋಳನು ॥ ೮

ಶಿರದೊಳೇಕೋರುದ್ರ ನೆತ್ತಿಯೊಳ್ ತ್ರಿಣಯ[೪]ನಾ[೪]
ಪರಿವೃತಂ ತತ್ತ್ವಷಟ್ತ್ರಿಂಶಾಧಿ[೫]ಪಂ ಜ್ಞಾನ[೫]
ವರ ಸತ್ಕ್ರಿಯಾ ಕರ್ಣಯುಗದೊಳಾ ಚಂದ್ರಕಲೆ ತೋಳ್ಗಳೊಳು ತರಣಿಯಂಶ।
ಎರಡು ಮುಂಗಯ್ಯೊಳಗ್ನಿಯ ಕಲೆಗಳೈವಡಿಸಿ
ಯುರದಲ್ಲಿಯುಪನಿಷದ್ಗಳ[೬]ದೊಳಾ[೬]ಷಟ್ಸ್ಥಲ[೭]ಗ
[೮]ರದೆ[೮] ಪದಿನೆಂಟುಮುಡಿ[೮] ರುದ್ರಾಕ್ಷಿಯುಪವೀತ ಜಪಮಾಲೆಯುಗಮುವಂಗೆ[೮] ॥ ೯

ಚತುರಷಡ್ದಶರವಿಕಳಾದ್ವಿಗುಣನಾಂಬುಜಾ
ಶ್ರಿತದಳಾಧಾರವಾ ಸ್ವಾಧಿಷ್ಠ ಮಣಿಪೂರ
ಯುತದನಾಹತ ವಿಶುದ್ಧಾಜ್ಞೇಯ ತಟಿ[೯]ದಿನಾಗ್ನಿಸ್ಫಟಿಕ ಸುರಧನುವಿನಾ।
ವಿತತ [೧೦]ರತ್ನಾ[೧೦]ಭದಾಚಾರ ಗುರು ಶಿವ ಚರಾ
ನ್ವಿತ ಸುಪ್ರಸಾದ ಮಹದಾಖ್ಯನೆ ಶಿಖಾಸ್ಥಲಾ
ಶ್ರಿತ ಸುಪ್ರಕಾಶ ಗುರುದತ್ತ ಲಿಂಗವ ಕರದೊಳಳವಡಿಸಿದಂ ಚೋಳನು ॥ ೧೦

ವ್ಯೋಮಕೇಶನ ನಾದಮೂರ್ತಿಯಂ ನಾಡೆ ವಾ
ಚಾಮತಿ[೧೧]ಗಗಮ್ಯನಂ[೧೧] ಶ್ರುತಿತತಿಗ[೧೨]ಭೇದ್ಯನಂ[೧೨]
ಶ್ರೀ ಮನೋಂತಃಕರಣದುರ್ಲಭನನುರು[೧೩]ಗುಣಾಶಕ್ಯ[೧೩] ಕಾಲಾಂತ
[೧೪]ಭವನಂ[೧೪]।

---

೧ ಯುಂ (ಉ) ೨ ಲೀ (ಆ.ಗ) ೩ ರುದ್ರಾ (ಈ) ೪ (ರಾ ಅ.ಇ.ಓ), ವಾ (ಉ), ದಾ (ಗ). ೫ ಪ ಜ್ಞಾನ (ಅ.ಇ) ೬ ದಲ್ಲಿ (ಈ.ಗ),—(ಉ) ೭ ವದಿರದೆ (ಆ.ಈ.ಉ.ಗ) ೮ ರುದ್ರಾಕ್ಷಿ (-ಅ) ಯುಪವೀತ ಜಪರಸಗಳಾಡುವಂದಾರಾಯುಗೆ (ಅ.ಇ) ರುದ್ರಾಕ್ಷಿಯುಪವೀತ ಜಪಮಾಲೆಗಳುಮುವಂಗೆ (ಉ). ೯ ವಿ (ಅ. ಇ) ೧೦ ರಕ್ತಾ (ಅ.ಇ) ೧೧ ಗಭೇದ್ಯನಂ- ೧೨ ಗಮ್ಯನಂ (ಆ.ಈ.ಉ.ಗ) ೧೩ ಗಣಾಸಂಖ್ಯಾ (ಗ) ೧೪ ಶಿವನಾ (ಆ.ಈ.ಉ ಗ)

ಸ್ವಾಮಿವರ ಶುದ್ಧವಿದ್ಯಾರೂಪನುನ್ನತ
ಪ್ರೇಮಿ ಷಟ್ತ್ರಿಂಶತತ್ತ್ವಾತೀತ ಶಂಭುವಂ
ಭೂಮಿಪಾಲಂ ನೋಡಿದಂ ಕೂಡೆ ಪಾಡಿದಂ ಶಿವಭಕ್ತಿಯಂ ಬೇಡಿದಂ ‖ ೧೧

ಮಂಡಗೆಯ ಮಾದರಸರಿಷ್ಟದ ವೃಷಾಂಕಂ[೧]ಗೆ[೧]
ಖಂಡಿತಾಮೃತಕಿರಣ ಜೂಟಂಗೆ ಕಮಲಗ
ರ್ಭಾಂಡ[೨]ಭಾಂಡಾಪೂರ್ಣ[೨]ಸಿತಕೀರ್ತಿಮಯ[೩]ಗೆ[೩] ಖರ್ಜೂರಪರ್ವತವಾಸಿಗೆ ।
ಕಂಡು ನುತಿಸಿವರ ಮನದನ್ನ[೪]ನೊಡನಾ[೪] ಶರಣ
ರುಂಡು ವಿಃಕ್ಕಾ[೫]ಶೇಷಮಂ ಶಿವಂಗಿತ್ತು[೫] ಕೈ
ಕೊಂಡು [೬]ಭೂಪಂ[೬] ನಿಯೋಗಂಬೆರಸಿ ಸುಖದಿಂ **ವಸಂತ[೭]ವಾಸವ[೭]** ಕಳೆಪಿದನು ೧೨



೧ ವೃಷಭಧ್ವಜಗೆ (ಅ.ಇ), ವೃಷಾಂಕಂಗ (ಗ) ೨ ಭಾಂಡಂ ಪೂರ್ಣ (ಅ) ೩ ದ (ಉ)
೪ ಗರ್ಪಿಸಿ (ಅ.ಇ) ೫ ಪ್ರಸಾದವನೀಶಗಿತ್ತು (ಅ.ಇ) ೬ ತನ್ನಯ (ಆ.ಉ.ಗ)
೭ ಮಂ ನೆಜಿ (ಆ.ಉ.ಗ)

## ೬ ಪಕ್ಷಿಗೇತಕೆ ಪಾಶುಪತ?

ಆ ವಸಂತೋತ್ಸಾಹಮಂ [೧]ಕಳೆದು[೧] ಸಂತಸದೆ
ಭೂವರಂ ಮಂತ್ರಿಯ ಮೊಗಂ ನೋಡಿ ಪುರಕೆ ರಾ
ಜೀವಲೋಚನೆಯಮೃತವತಿಮುಖ್ಯವಾದ ಪಲ್ಲಕಿಗ[೨]ಳಂ[೨] ತೆರಳವೇಳ್ದು ।
ಪಾವನಸ್ಥಲಕೆ ನಡೆತಂದು [೩]ತುರಗವನಡರು
ವಾನೇಳೆಯೊಳಗೊ[೪]ರ್ವ ಶಬರನಾಯಕನ ನಿಜ
ಕೋವಿದಸಖಂ ತ್ವರಿತದಿಂದಲುಪಗಮಿಸೆ ದೂರದೊಳವನ ಬರವನಱಿದು ॥ ೧

ಕ್ಷೋಣೀಶನೀಕ್ಷಿಸುವ ದೃಷ್ಟಿಭೇದವನಱಿದು
ಜಾಣರೆನಿಸಿರ್ದ ಕಂಬಿಯ ಕಲಿಗಳಾಕ್ಷಣದೆ
ಕಾಣಿಸಲು ಶಬರ[೫]ನ ಸಖಂ ಬಂದು ಸಾಷ್ಟಾಂಗ ದಂಡದಿಂ ನಮಿಸಿ ನಿಂದು ।
ಮಾಣಿಕವ[೫]ನೊಂದ[೫] ಕಾಣ್ಕೆ[೬]ಯನಿತ್ತು ಕೈಮುಗಿದು[೬]
ಮಾಣದಡಿಗಡಿಗೆ ಗಂಭೀರವಾರಾಶಿ ಮ
[೭]ತ್ರಾಣ[೭] ಜಯಜೀಯ ರಕ್ಷಿಪುದೆಂದು ಕೀರ್ತಿ[೮]ಸುತ್ತಿರ್ದ[೮]ನಾ[೮] ಸಮಯದಲ್ಲಿ ॥ ೨

ನೆಟ್ಟನಾ †ಪ್ರೌಢವಣಿಜರ್[೯]ಂಗ[೯]ಂ[೯]ಚಿತ್ತ[೯]ಂಮಂ
ಕೊಟ್ಟು ಸತ್ಯೇಂದ್ರಚೋಳಾಧೀಶ್ವರಂ ಚರನ
ನಿಟ್ಟಿಸಲು ಜೀಯ ಬಿನ್ನಪ ದಕ್ಷಿಣಾಂಬುಧಿಯ ಸೀಮೆಯ ಕಿರಾತನಗರ ।
ಪುಟ್ಟಿದೂರಲ್ಲಿಗಧಿಪರು ನಮ್ಮವರು ನಿಮ್ಮ
ಮೆಟ್ಟುಗಳ ಲೆಂಕರಾ ನಾಯಕನ ನಾಮವಳ
ವೆಟ್ಟಿರ್ಪ ಕಾಳಮೇಘಂ ಸುಖದೊಳಿರೆ ಮಹಾಗ್ರೀಷ್ಮಕಾಲಂ ಬಂದುದು ॥ ೩

---

೧ ಮುಗಿದು (ಅ.ಇ) ೨ ಳ (ಅ.ಈ.ಗ) ೩ ತೇಜಿಯ ಬೆಂಗೆವಾಯ್ವ ಕಾಲದೊಳೊ (ಅ.ಇ). ತೇಜಿಯುನಡರುವಾ ವೇಳೆ... (ಓ), ೪ ನವರಂ ಕಂಡು,— ೫ ನರಸಂಗೆ,— ೬ ಯಿತ್ತಂತಲ್ಲಿ. (ಅ.ಈ.ಉ.ಓ,ಗ) ೭ ತ್ಪ್ರಾಣ (ಅ) ೮ ಸುತ್ತೆನಿಂದನಾ. ೯ ಚಿತ್ರ
† ಆ ಮಾಣಿಕ್ಯವನ್ನು ಪರೀಕ್ಷಿಸಿ ನಾರದಮುನಿಯ ಮನೋರಾಗಕ್ಕೆ ಸಮಾನವಾದ ಬೆಲೆಯಿಂದ.

ಸ್ಫಟಿಕವೆಂದೆಂಬ ಕಂದದಿನೊಗೆದು ನಾಡೆ ಛಿಣಿ
ಛಿಟಿಲೆಂಬ ಕಿಡಿಗಳೇ ವೊಳೆಗಳಾ ಸೂರ್ಯನು
ತ್ಕಟದ ಕಿರಣಂಗಳೇ ವಲ್ಲಿ[೧]ಯುಗ್ರದ ಭಾಸ್ಕರನೆ[೨] ಫಳಂ ಪಕ್ವವಾಗಿ।
ಪುಟ[೩]ವೇಜು[೩] ಯುಕ್ಕುತಂ ಬ್ರಹ್ಮಾಂಡವೆಂದೆಂಬ
ಘಟದೊಳು ರಸಂ ತೀವಿತೆನೆ ಮರೀಚಿಳಕಳಜಲಂ
ಪಟುವಾಗಲಾಗಿ ಬೇಸಗೆ ಬೆಳೆದು ಪಣ್ತುದೆಲೆ ದೇವ ಚಿತ್ರೈಸೆಂದನು ॥ ೪

ಇಂತಪ್ಪ ಕಾಲದೊಳು ಬೇಡವಡೆಯಿಂ [೫]ವೊಜು[೫]ವ[೫]
ನಂತ ವಾದ್ಯಂಗಳಿಂ ತಳ್ತಲಗುಗಳ ಮಿಙುಪ
ಕಾಂತಿಯಿಂ ಬೇಂಟೆಗುಜ್ಜುಗಿಸಿ ವಿಪಿನಕೆ ನಡೆವೆನಲ್ಲಿ ಶರತತಿಯ ಕಜು[೫]ವೆಂ।
ದಂತಿಗಳ ತಲೆಯ ಮುತ್ತುಗಳುದುರೆ [೬]ಸೀಳ್ವೆನಿದಿ
ರಾಂತ[೬] ಕೋಡುಳ್ಳ ಮೃಗಕೆನ್ನ ಲುಬ್ಧಕಸೇನೆ
ಯಂತಕರಲಾ ಭಾಪೆನ್ನುತ್ತಲ್ಲಿಗೆಯ್ದಿದಂ ಕಾಳಮೇಘಂ ಹರ್ಷದಿಂ ॥ ೫

ಇದೆಯಣಿಲೆಯೊತ್ತಿನೊಳೆ ಸಿಂಗದುಗುರ್ಗೆ*ನೆವಜ್ಜೆ
ಯಿದೆ ಸೋಮವಲ್ಲಿಯೆಡೆಯೊಳ್ ವೊಲದ ಕಾಲ್ಗುಙುಹು
ಯಿದೆ ರಾಜವೃಕ್ಷದ ಸಮಾಪದೊಳಗೆರಲೆ [೭]ಕಾಲಿಂತುಳಿದ[೭] ನೆಲದ ಠಾವು।
ಇದೆ ಬಿಲ್ವಮೂಲದೊಳ್ ಪುಲಿಯ ನಖಚಿಹ್ನವಿಂ
ತಿದೆ ಸರ್ವ ಮೃಗಪಕ್ಷಿಗಳ ಪಕ್ಕೆಯೆಂದು ಪೆರಿ
ದೊದಙುವಾ ಪಡೆವೆರಸಿ ಬೇಂಟೆಯಾಡುತ್ತಿರ್ದನೆಲ್ಲ ಮ್ಮ[೮] ಶಬರಾಧೀಶನು ॥ ೬

ಈ ಪರಿಯ ಬೇಂಟೆಯಾಡುತ್ತುಮಿರೆ ಸಿಂಹಳ
ದ್ವೀಪದಿಂದೆಮ್ಮ ತೋಹಿಂಗೊಂದು ಸಿಂಹವಾ
ಟೋಪದಿಂ ಬರ್ಲೆಮ್ಮ[೯] ಬಲವೆಯ್ದೆ ಖೋಯೆಂದು ಬೊಬ್ಬಿಟ್ಟು ಕವಿಯಲಾಗಿ।
ಕೋಪದಿಂದಟ್ಟಿತ್ತು ಮುಟ್ಟಿತ್ತು ಮೆಟ್ಟಿತ್ತು
ಭಾಪುರೇ ಸಙಗಿಙು[೧೦]ಂದು ಸೀಳ್ದೊದಙುತ್ತು
ಏ ಪೇಳ್ವೆನರ್ಧ ಬಲ[೧೧]ವಳಿಯೆ[೧೨]ಂ ಕಂಡೊಡೆಯನತಿಸರಭಸದೊಳಿದಿರಾದನು ॥ ೭

---

೧ ಯು (ಅ.ಆ.ಇ) ೨ ರಂ (ಆ.ಈ.ಗ) ೩ ಮಾರಿ (ಅ.ಇ) ೪ ಕೆ (ಅ), ಯು(ಆ.ಇ.ಉ.ಓ), — (ಗ), ೫ ಮೆರೆವ (ಅ) ೬ ಸೀಳ್ವೆ ಮಾಙಾಂತ (ಅ.ಇ) ೭ ಕಾಲಿಂಗುಳಿದ (ಅ.ಈ.ಗ),... ಗಳಿದ (ಇ), ೮ ನಂದು (ಅ) ೯ ಲೆಂದು (ಅ) ೧೦ ವಙುಿಯೆ (ಈ)

ಒಡೆಯ ಚಿತ್ತೈಸು ನಿನ್ನಯ ಬಂಟನಿದಿರಾಗೆ
ಖಡುಗದೊಳ್ವೆಳಗೆ ಮಿಂಚಾರಕ್ತವಾರ್ಧಾರೆ
ವಡೆಯೆ ಘುಡುಘುಡಿಸಿ ಹೊಡೆದಬ್ಬರಂ ಸಿಡಿಲು ತಲೆರನ್ನ[೧]ವೆಸೆವಿಂದ್ರ[೧] ಗೋಪಂ ।
ಕೆಡೆಯಿತ್ತು ಹರಿ ಕಾಳಮೇಘನಿಂ ಭಾಪೆಂದು
ನುಡಿಯಿತ್ತು ಸಕಲ ಪರಿವಾರವನಿತಕ್ಕೆ ಬೆಂ
ಬಿಡದೆ ಬಂದತ್ತು ಸಿಂಹಳನೃಪನ ಸೇನೆಯಾರ್ಭಟಿಸುತಂತಾ ತೋಹಿಗೆ ॥ ೮

ಬಂದು [೨]ನಮ್ಮಯ[೨] ಸೀಮೆಯದು ಸಿಂಹವಿಲ್ಲಿಗೇ
ಳ್ತಂದುದಿದು ನಮ್ಮದೆಂದಾರ್ಭಟಿಸಲವರು ಭುಗಿ
ಲೆಂದೆನುತ ಕಾಳಮೇಘಂ ಹರಿಯ [೩]ತಲೆಯನು[೩] ಸೀಳ್ದು ಕೆಂಗದಿರ್ವ*ಣಿಯನು ।
ತಂದೆನ್ನ ಕರದೊಳಿತ್ತೊಡೆಯನ ಪದಾಂಬುಜದ
ಮುಂದಿಟ್ಟು ಬಿನ್ನವಿಪುದೀ ಹದನೆನುತ ಬೋ
ಯೆಂದು ಬೊಬ್ಬಿಱಿದು ಕಾದುತ್ತ[೪]ಹನೆ[೪] ಕಜ್ಜವಿದು ಜೀಯ ಚಿತ್ತೈಸೆಂದನು ॥ ೯

ಈ ರತ್ನಕಗ್ಗಳದ [೫]ರಾಸಿ[೫]ಮಣಿಯುಂಟೆಂದು
ವಾರಿಧಿಯ ಮಧ್ಯದೊಳ್ ಮಲೆ[೬]ತನವನೆಂದೆನೆ[೬] ಮು
ಹಾರಾಯ ಕಪ್ಪವವನಿಂ ಬಂದುದಿಲ್ಲೆಂದು ಕೂಡೆ ಕರಣಿಕರೋದಲು ।
ಭೂರಮಣನುಗ್ರದಿಂ [೭]ಪೋಗ[೭]ಲುಜ್ಜುಗಿಸೆ ಕರ
ವಾರಿಜವ ಮುಗಿದು ಸಚಿವಂ ಜೀಯ ನಿಮ್ಮ ಪಟು
ವೀರವಡಬಂಗಾತನಾಂಪನೇ [೮]**ಪಕ್ಷಿಗೇತಕೆ ಪಾಶುಪತ**ವೆಂದನು[೮] ॥ ೧೦

ಮಂಡಲಾಧೀಶಮಣಿಮುಕುಟಪದ ವೀರದೋ
ರ್ದಂಡ ನೀವರಮನೆಯ ಪೊಕ್ಕು ಸುಖಮಿರೆ ನಾನೆ
ದಂಡೆತ್ತಿ ಪೋಗುವೆಂ ಕರಿಹಯಪದಾತಿರಥಮುಖ್ಯ [೯]ಚತುರಂಗಬಲದ ।
ಮಂಡನದೆ ನಡೆದು ಸಿಂಹಳದರಸ ಕಟ್ಟಿ ಮುಂ
ಕೊಂಡು ಪಿಡಿತಂದೊಪ್ಪಿಸುವೆನೆಂದು ನೃಪನ ಬೀ
ಳ್ಕೊಂಡ ರಿಪುಕುಮುದಮಾರ್ತಂಡನಹಿತೋದ್ರೇಕಷಂಡಗಿರಿವಜ್ರದಂಡ ॥ ೧೧

---

೧ ಮಿಸುಪಿಂದ್ರ (ಅ.ಇ.ಓ) ೨ ದೆಮ್ಮಯ (ಅ) ೩ ಮಸ್ತಕವ (ಅ.ಇ.ಓ) ೪ ವನೆ (ಅ.ಇ.ಈ.ಉ.ಓ.ಗ) ೫ ರಾಜಿ (ಅ.ಇ) ೬ ತು ಕೊಂಡವನೆ (ಉ.ಓ) ೭ ಗಮಿಸ (ಅ.ಈ.ಉ.ಗ) ೮ ಪಕ್ಷಿಗೇತಕ್ಕಯ್ಯ ಪಾಶುಪತವು (ಅ.ಈ.ಉ.ಗ) ೯ ರಣ (ಉ)

ರಾಯನತಿವ್ರೈಭವನೊಳರಮನೆಯು ಪುಗಲಿತ್ತ
ಬಾಯತೆಱೆದಿಳೆ ಘೂರ್ಮಿಪಂತೆ೧ನಿಸ್ಸಾಹಣ ನಿ
ಕಾಯಕೋಟಿಗಳ ಧಾಂಧಳರವಂ ಪೊಣ್ಮೆ ಮಂತ್ರಿಯ ಚಾತುರಂಗಸೇನೆ ।
ಈಯವನಿಯುಗಲಕ್ಕೆ ನಡೆಯೆ ಸುಭಟರ ಚರಣ
ತ್ರೋಯಜದ ಘಾತದಿಂ ಕೆಂದೂಳಿ ಮುಸಗೆ ಕೆ
ಟ್ಟಾಯೆಂದು ಸಿಂಹಳಪದಾತಿ ಮುಱಿದೋಡಿ ಶರಧಿಯ ದಾಂಟಿ ಬೆಂಬತ್ತುತೆ ॥ ೧೨

ಕೂರಂಬಿನಿಂದಂಬುನಿಧಿಯ ಪೂಣ್ಪುದೆ ತಮಗೆ
ದಾರಿಯಾಗಲ್ ನಡೆದು ೨ಭೋ೨ಯೆಂದು ಸಕಲ ಪರಿ
ವಾರವಾ ಮಂತ್ರಿಯ ನಿರೂಪದಿಂದೆಡೆದಿಟ್ಟ ಪೊಕ್ಕು ಬೊಬ್ಬಿಱಿವುತಿರಲು ।
ವೈರಿಗಳ ಪೆರ್ಬಲಂ ಬಾಳೆತ್ತಿ ಪೊಣರ್ದೊರ್*ಡೆ ನಿ
ವಾರಣಂಗೈಯ್ದು ೩ಶಿಕ್ಷುರಿಕಾದಿಗಳ ಮುಱಿ೪ದುಳ
ವೀರಭಟರಾಲೆ ಕಂಗೆಟ್ಟೋಡಿದವರು ಮೂರ್ಮಲೆತು ಬಂದಿದಿರಾದರು ॥ ೧೩

ಘುಡುಘುಡಿಸಿ ಸತ್ಯೇಂದ್ರಚೋಳನ ಮಹಾಬಲಂ
ಕಡೆಯ ಕಾಲದ ಕಿಚ್ಚಿನಂತೆ ಯಮಭಟರಂತೆ
ಪೊಡವಿಯಂ ಬಗಿದೆದ್ದ ರಕ್ಕಸರ ಪಡೆಯಂತೆ ವಿಲಯದೊಳು ಧರೆಯ ಮೊಗೆದ ।
ಕಡಲಂತೆ ಬಿಱುಗಾಳಿಯಂತೆ ಯಕ್ಷಗ್ರಹದ
ಗಡಣದಂತಾ ಪ್ರಳಯರುದ್ರನುಗ್ರತೆಯಂತೆ
ಕಡಿದಿಱಿದು ಸಱಿಗಿಱಿನೆ ಸೀಳಿ ದಿಗ್ಬಲಿಯ ಕೊಡುತಿರ್ದರರಿಸೇನೆಯಾ ॥ ೧೪

ಕೆಟ್ಟೋಡಿ ಕೋಂಟೆಯಂ ಪೊಕ್ಕು ಸಿಂಹಳನೃಪಂ
ಕಟ್ಟರಸರೊಡನೆಮಗೆ ವೈರವೇಕೆಂದು ಗುಡಿ
ಗಟ್ಟಿ ತನ್ಮಂತ್ರೀಶನಂ ಕಂಡು ತನ್ನ ಕುವರಿಯರಿರ್ವರಂ ಮಣಿಗಳಾ ।
ಪಟ್ಟುವಸ್ತ್ರಗಳ ಗಜಹಯಮುಖ್ಯವಸ್ತುಗಳ
ಕೊಟ್ಟೊಡನೆ ಬರಲಬ್ಧಿಯಂ ಮಥಿಸಿದಿಂದ್ರನಂ
ನೆಟ್ಟನಪಹಾಸ್ಯಮಂ ಮಾಳ್ಪಂತೆ ಪತಿಸೋಹಿ ತಿರುಗಿದಂ ಧರ್ಮವತಿಗೆ ॥ ೧೫

---

೧ ನಿಸ್ಸಾಳಹಣ (ಅ) ೨ ಬೋ (ಆ ಇ.ಉ.ಗ) ೩ ಲಿ (ಇ), ಲ್ಲಿ (ಓ). ೪ ದ (ಇ)

ಕ್ಷೋಣೀಶನಂ ಕಂಡು ನಮಿಸಿ ಗಜಹಯಸುಶ್ರೆ
ಶ್ರೇಣಿ ವಸ್ತುಗಳನೊಪ್ಪಿಸುತ ಸಿಂಹಳನೃಪನ
ಕಾಣಿಸಿದೊಡಾ[೧].[೨] ಕುಮಾರಿಯರಿ[೩]ರ್ದರಂ ಕಾಣ್ಕೆಯಿತ್ತಾ ಕುಮಾರಕರ್ಗೆ ।
ಏಣಲೋಚನೆಯರಿರ್ವರಱ ವಿಭವದಿಂದೆ ಕ
ಲ್ಯಾಣಮಂ ಮಾಡೆಂದು [೪]ನಮಿಸೆ[೪] ಕೈಕೊಳುತಲ
ಕ್ಷೀಣ ಮಂತ್ರಿಯು ಪೊಗಳಲಾಗಿ ಕೈಮುಗಿದವಂ ಭೂಮಿಪಂಗಿಂತೆಂದನು ॥ ೧೬

ಪೊಱಮಟ್ಟೊಡೇಳ್ನೂಱು ಗಾವುದದೊಳೆಡೆವಿಡದೆ
ಮಿಱುಪ ಮಣಿಮುಕುಟವರ್ಧನರು ಸೇವಿಸುತಿರ್ಪ
ರಱಿದು ಸಪ್ತದ್ವೀಪದಾಣ್ಮರಟ್ಟುವರು ಭಯದಿಂದನರ್ಘ್ಯದ ಕಾಣ್ಕೆಯ ।
ಜುಱುವ ದಿಗ್ದಂತಿಗಳ ಸೂರ್ಯನ ರಥಾಶ್ವಗಳ
ನಿಱಿದ ಗಣನೆಯುನ್ನಳ್ಳ ದೇಶಾಧಿಪತಿಗಳಂ
ಜಱಿದು ಶರಣೆನೆ[೫]ಕಾದ[೫] ನಿಮ್ಮ [೬]ವೀರವೆ[೬] ಮಾಡಿತಾನೇ [೭]ಸರವನೆಂದನು[೭] ॥ ೧೭

ದೇವ ಸಿಂಹಳನ ಸಲಹೆನಲವನ ಮನ್ನಿಸಿ ಮ
ಹಾವಿಭವದಿಂ ಕಮಳೆಯೆಂಬಳಂ ಪ್ರಾಜ್ಞರ ವಿ
ಭಾವಜ್ಞ ಮಿತವಚನನಪ್ಪ ಪಿರಿಯಂಗೆ ಕುಮುದಿನಿಯನವನನುಜನಪ್ಪ ।
ಆ ವಿಮಳಕರ ಮಂತ್ರಲಕ್ಷ್ಮಂಗೆ ಕಲ್ಪಿಸುತೆ
ವೈವಾಹದುತ್ಸವಕೆ ನೃಪನಮಾತ್ಯನ ಕೂಡೆ
ಭೂವಳಯದಖಿಳ ದೇಶಾಧಿಪರ ಕರಸು ಸಾಧನಲತತಿಯ[೮] ಕೂಡೆಂದನು ॥ ೧೮

ಕಡುಚೆಲ್ವ ಮೇಲ್ವಲಗೆ ನೆಲಗಟ್ಟು ಗೋಡೆಗಳ
ಗಡಣಮಂ ಧವಳಿಸಲು ನೃಪಕೀರ್ತಿ ದಶದಿಕ್ಕಿ
ನೆಡೆಗೆ ತೀವಿದ ತೆಱದೊಳೆಸೆಯೆ ವೈವಾಹಮಂಟಪವರರೆ ಚತುರಂಗದ ।
ಒಡನೆ ಮಿಸುಪರಿದಳವ ಪಿಡಿದಿರ್ದ ಕಡ್ಡಿಯಿಂ
ಕಡೆಮಾಡಿ ತೊಡೆವೆವಿದು ಚಿತ್ರವೆನೆ ಬರೆದರಿಳೆ
ಯೊಡೆಯ ಸತ್ಯೇಂದ್ರಚೋಳನ ಪರಾಕ್ರಮದಂತೆ ಭಿತ್ತಿಯೊಳಗತಿಕುಶಲರು ॥ ೧೯

---

೧ ಸಲು,—೨ + ನಿಜ [ಅ.ಇ.ಓ.] ೩ ವದಿರ [ಅ.ಇ.], ವರ್ಗಗಳ [ಅ], ವರ್ಗಳ [ಗ]. ೪ ನೇಮಿಸಿ [ಅ] ೫ ಕಾಯ್ದು [ಅ.ಇ.ಓ], ಕಾಯ್ದು [ಆ.ಈ.ಗ]. ೬ ಬಲ್ಮೆಯೋ [ಅ.ಇ.ಓ] ೭ ತಱವನೆನುತ್ತಾ [ಅ.ಇ.ಈ.], ತರವನೆಂವನು [ಓ.ಗ.] ೮ ಗಳಂ [ಅ.ಇ]

ಕೂಡಿದರು ದೇಶಾಧಿಪತಿಗಳುಱಿ [೧]ಸಿಂಗರವಂ[೧]
ಮಾಡಿದರು [೨]ಪೊಳಲ[೨] ಶುಭವಾದ್ಯಂಗಳೊದಱಿ ನಲಿ
ದಾಡಿದರು ವಾರ[೩]ನಾರಿಯರು[೩] ಮುತ್ತೈ[೪]ದೆಯರು ಪಾಡಿದರು ಶೋಭನಳಗಳಳ ।
ನೋಡಿದರು ಸರ್ವರಾನಂದದಿಂ ಬುಧರು ಕೊಂ
ಡಾಡಿದರು ನೃಪನ ವಂಶಾವಳಿಯ[೫]ನಾಂತರ್ಗೆ[೫]
ನೀಡಿದರು ಚಾಗಮುಂ ಗಣಪರ್ವಮುಂ ರಚಿಸಿ ಸೂಡಿದರು ಸತ್ಕೀರ್ತಿಯ ॥ ೨೦

ನೀಲಕುಂತಳದ ನವ [೬]ಪೌಷಾ[೬]ರುಣಪ್ರಭೆಯ
ಲೋಲಸೂತ್ರದ ಕನಕಪುತ್ಥಳಿಯ [೭]ತೆಱಿದ ವರ[೭]
ಬಾಲೆಯರು ವಿದ್ರುಮಾಧರದ [೮]ಗೋಮೇಧಾಗ್ರೆಯರು[೮] ವಜ್ರಮಾಣಿಕ್ಯದ ।
ಹೋಲ್ಗೆ ತಿರ್ಹ ದಂತಪಂಕ್ತಿಯ ಪಚ್ಚಪಸಿವರೆಯ
ದಾ ಲಲಿತ ರತಿಯೆನಿಪ ಮೌಕ್ತಿಕಚ್ಛವಿಯೆಸೆವ
ಕಾಲುಗುರ್ಗದಿರ್ವೆ*ಣ್ಗಳೊಪ್ಪಿದರು ನವರತ್ನಮಾಲೆಗಳ ಪಾಂಗಿನಿಂದೆ ॥ ೨೧

ಇಂದಿನ ದಿನಂ ದೇವ ಮಂತ್ರಲಕ್ಷ್ಣಗೆ ಪಿರಿಯ
ಕಂದ ಮಿತವಚನರ್ಗೆ ಕನಕ ಮೌಕ್ತಿಕಮಣಿಗ
ಳಿಂದೆಸೆವ ಬಾಸಿಗಗಳಳ[೧೦]ವಟ್ಟ[೧೦]ಂ ಸುಮುಹೂರ್ತವಾಯ್ತೆಂದು ನೃಪತಿಗಱಿಪೆ ।
ತಂದು ಕುಮುದಿನಿಯ ಕಮಲೆಯ ಸಿಂಗರಂ ಮಾಡಿ
ಹೆಂದದುತ್ಸಾಹದಿಂದಾ ಕುಮಾರರ್ಗೆ ಪೆಂ
ಪಿಂದೆ ಮದುವೆಯ ಮಾಡಿದಂ ಮಂತ್ರಿ ಸಜ್ಜನರ್ ಪರಸಿ ಸೇಸೆಯನಿಕ್ಕಲು ॥ ೨೨

ವೈವಾಹ ನಾಗವಲ್ಲಿಗಳ ಚಾತುರ್ಥಿಕ ಶು
ಭಾವಹಂಗಳ ಪೂರ್ಣಮುಂ ಮಾಡಿ ಧನಕನಕ
ದೇವಾಂಬರಾದಿ ಮುಕ್ತಾಭರಣ ಕರ್ಪೂರವೀಟಿಕಾದಿಗಳನಿತ್ತು ।
ಓವಿ ಸಿಂಹಳಮುಖ್ಯ ರಾಜರಂ ತಮ್ಮ ದೇ
ಶಾವಳಿಗೆ ಬೀಳ್ಕೊಡಲು ದಿಗ್ವಿಸರದೊಳು ಜೋಳ
ಭೂವರನ ಧವಳಕೀರ್ತಿ ಪ್ರಭಾಮಯವಾಗಿ ಪರಕಲಿಸಿ ಮಡಲಿಱಿದುದು ॥ ೨೩

೧ ಸಿಂಗರಂ [ಆ.ಈ.ಉ.ಗ] ೨ ಪುರವ [ಆ.ಇ.] ೩ ವನಿತೆಯರು [ಅ.ಇ] ೪ ಪಾಯಮಂ [ಆ.ಈ.ಗ] ೫ ಸಂತವರ್ಗೆ [ಈ], ನಂತವಗೆ [ಅ.ಆ.ಇ.ಗ] ೬ ಪಾಷಾ [ಅ.ಗ], ಪೌರುಷಾ [ಓ.] ೭ ತೆಱಿದವರು [ಈ.ಗ] ೮ ಗೋಮೇಧಿಕಾಗ್ರೇಯರು [ಈ], ಗೋಮೇಧಾಗ್ರೀವರು [ಓ] ೯ ವೆಯ [ಆ.ಈ.ಉ.ಗ] ೧೦ ವಟ್ಟ [ಆ.ಗ]

## ೭. ಇಂದು ನಿನ್ನಿಂದಾದ ತಪ್ಪದೆನ್ನದು

ಆ ರಾಯನಿಂತು ಸುಖಮಿರಲು ನಿರ್ಜರನದೀ
ಧಾರನಂತತಿ ಚಪಲನಂದದಿಂ ಮದುವೆಯಾ
ಗಾರ್ದಂತಾ ಮುಸಲಿಯಂತೆ ವತ್ಸರದಂತೆ ಭೈತ್ರ[೧]ವಾಣಿಜ್ಯದಂತೆ[೧] ।
ಪೇರಱಿಯ ತೆಱದೆ ಜಲಪುಂಜದಿಂ ಮಿಂಚಿನಿಂ
ಸ್ಸಾರ ಮೊಳಗಿಂದ ನೀಲಾಂಬರದೆ ವರ್ಷಮಯ
ಧಾರೆಯಿಂದಿಂದ್ರಗೋ[೨]ಪಗಳಿಂ[೨] ಘನೋಪಲಗಳಿಂದ ಮುಂಗಾರ್ ಬಂದುದು ॥ ೧

ಶ್ರೀವಿಯತ್ತಳವೆಂಬ ಸೀಮೆಗಿರು[೩]ಳೊಳ್[೩]ಪಗಲು
ಬೇವಸದೆ ಪೋರಿ ವರ್ಷಾಂಶುಪೂರ್ಣತ್ವವೆ
ತ್ತಾ ವಿಭಾಕರನೆಂಬ ಕರಗಮಂ ಪೊತ್ತುತ್ತರಾಸೆ[೪]ಯಿಂ[೪] ನಡೆಯಲೊಡೆದು ।
ತೀವಿದುದಕಂ ಸುರಿವವೊಲ್ [೫]ಕಱಿಯೆ[೫] ಮಳೆಯಿಱಿದ
ಠಾವಿನರುಣಾಂಬುವೆನಿಸುವ ಸಂಜೆಗೆಂಪಿನೊಳೆ
ಸಾವನೆಯ್ದಲ್ದಿನಪನೊಳ್ ಪಗಲು ತದ್ರಾಜ್ಯವಡೆದುದೆನಿಸುವ ನಿಶಿಯೊಳು ॥ ೨

ಆ ರಾತ್ರಿಯೊಳು ಜಲಂಧರನ ಮುಖಶಶಿಗೆ [೬]ಮಾ
ರಾರಿ[೬]ಯಿಕ್ಕಿದ ಚಕ್ರವೆನಲು ತೇಜಂಗುಂದಿ
ವಾರಿಜವಿರೋಧಿಯಾ ಪರಿವೇಷದಿಂದೊ ಪ್ರತಿಪರ್ವ ವೇಳೆಯೊಳು ಚೋಳ ।
ಭೂರಮಣನೈದೆ ಚಿಚ್ಚಂದ್ರಪ್ರಕಾಶದಿಂ
ದಾರೈದು ಕರದ ಲಿಂಗವನೈದೆ ಪೂಜಿಸುತ
ಕಾರಣಾತ್ಮಕ ಪುರಾತನ ಗಣಂಗಳನಲ್ಲಿ ಪಾಡತೊಡಗಿದನಳ್ತಿಯಿಂ ॥ ೩

---

೧ ವಣಿಜಾತನಂತೆ [ಅ.ಇ], ವಾಣಿಜ್ಯನಂತೆ [ಆ.ಉ.ಓ], ವಾಣಿಜನಂತೆ [ಈ].
೨ ಪಂಗಳ್ [ಆ.ಗ], ಪಂಗಳಿಂ [illegible], ಪಂಗಳೊಳು [ಉ]. ೩ ಳುಂ [ಆ]
೪ ಯಂ [ಉ] ೫ ಸುರಿಯೆ [ಆ] ೬ ಮದನಾರಿ [ಉ]

ಪಿತನಳಿದೊಡನುಜಂಗೆ ಭಾಗೆಗೊಟ್ಟುಳಿದರ್ಥ
ತತಿಯೊಳನುಜೆಯ ಜಂಗಮಾರ್ಚನೆಯ ಮಾಡೆ[1]ಂದು[1]
ಸಿ[2]ತು[2]ಗಳನ ವಶಕಿತ್ತು ಪಡಗೇಱುತಗ್ರಜಂ ಶರಧಿಯೊಳೆ ಮಡಿಯೆ ತಮ್ಮಂ ।
ಅತಿಬಾಧೆಯಿಂ ಬೇಡೆ ಧನವನವರಣ್ಣನಾ
ಕೃತಿಯೊಳೈತಂದವ[3]ನ [4]ಭಕ್ತೆಯಾ[4] [5]ಕುಱು[5]ಗೋಲೊ
[4]ತನುರಿಪು ಸದೆದು ಬಯಲಾಗೆ ಮೆಱೆದಾ ಶಿವಪ್ರಿಯನಾಚಿಯಡಿಗೆ ಶರಣು ॥ ೪

ಈ ತೆಱದ ವರುಷಕಾಲದೊಳು ಹರ್ಮ್ಯಂಗಳೊಳು
ಭೂತಳಾ[6]ಧೀಶ್ವರಂ[6] ಸಕಲ ಮಾಹೇಶ್ವರ
ವ್ರಾತಕ್ಕೆ ದಿವ್ಯಭೋಗಂಗಳಂ ಸಲಿಸುತುಂ [7]ತತ್ತ್ವ ಪ್ರ[7]ಸಾದಸುಖದಿಂ ।
ಶೀತಕರಧರನ ಪೂಜಾಸೌಖ್ಯದಿಂ ಘನ ಪು
ರಾತನರ ವಚನಾಗಮಾರ್ಥಮಂ ಬಿತ್ತರಿಪ
[8]ಗೀತಂಗಳಕ್ಕಱಿ[8]ಂದಿರೆ ಬಂದುದಾ ಶರತ್ಕಾಲ ದಿಗ್ವಿಜಯಮೂಲ ॥ ೫

ಕಾಲರಜಕಂ ಮಲಿನದಿವ್ಯಾಂಬರವನಾ ವಿ
ಶಾಲ[9]ಸಾತಿಯ[9] ಮಳೆಯೊಳೊಗೆದು ದಕ್ಷಂಗೀಯ
ಲಾಲೋಕಿಸುತ್ತೈದೆ ಬೆಳೆಗಳಂ ಸಲಹಿವಳಿಯಂಗೆ ಧವಳಾಂಬರವನು ।
ಮೂಲವೈರಂ ಪೋಗೆ ದೀವಳಿಗೆಯೊಳ್ ಕರೆದು
ಮೇಲುದಂ ಪೊದಿಸಿ ಪರಸುತ್ತಕ್ಷತೆಯನಿಟ್ಟ
ವೋಲೊಪ್ಪಿದಂ ಶರನ್ಮೇಘದೊಳ್ ಚಂದ್ರಮಂ ತಾರಕಾ[10]ನೀಕ[10]ದಿಂದೆ ॥ ೬

ಧಾವಲ್ಯದಂಬರವನುಟ್ಟು ಮುತ್ತಂ ತೊಟ್ಟು
ತೀವಿ ಮುಡಿಯಲ್ಲಿ ಮಲ್ಲಿಗೆಗಳಂ ಶಾರದಾ
ದೇವಿಯಂ ಪೋಲ್ವಿಂದುಮುಖಿಯರಧರಾಮೃತಂಗಳ ಚಕೋರಂಗಳಂತೆ ।
ಸೇವಿಸಿ ಸುಖಂಬಡೆವ ಕುವರರಂ ನೋಡಿ ಶರ
ಣಾವಳಿಯ ಭಕ್ತಿಯಿಂ ಶೋಷಿಸುತ ಪಾಪಪಂ
ಕಾವಳಿಯನಿಂತು ಸುಖಮಿರೆ ಮಹೀಪಾಲನೈತಂದುದಾ ಹಿಮದಕಾಲಂ ॥ ೭

---

೧ ದು [ಅ.ಇ.ಈ.ಉ.ಗ] ೨ ತೆ [ಈ] ೩ ಳ್ [ಅ.ಇ] ೪ ಭಕ್ತಿಯಂ [ಅ.ಇ], ಭಕ್ತಿಯಾ [ಈ.ಓ.ಗ], ಭಕ್ತಿಯ [ಉ]. ೫ ಕುರು [ಉ]. ಕರು [ಅ ಈ ಗ]. ೬ ಧೀಶಂ [ಈ], ಗ್ರೇಶ್ವರಂ [ಅ.ಇ] ೭ ವರತತ್ತ್ವ [ಉ.ಓ] ೮ ಗೀತಗಳ ಸೊಗಸಿನಿಂ [ಅ.ಇ] ೯ ಶಾಂತಿಯ (ಅ.ಆ.ಇ.ಈ.ಉ.ಒ.ಗ) ೧೦ ನಿಕರ (ಅ.ಇ.ಈ)

೪೪೯ - ಪ್ರತಿ

ಅಂಜನದ ಸಿರಿಯಂತೆ ವರ್ಷದಾಗಸಂಪಾಂಗಿ
ನಿಂ ಜಲಧಿಶಯನ ವಿಷ್ಣುವಿನಂತೆ[೧] ವನಿತೆಯರ
ಮಂಜುಳ ಪಯೋಧರಂಗಳ ಸಾರ್ವ ಬಗೆಯಲ್ತು ಸೌಂದರಂಗಿಸ್ಟವಿತ್ತು ।
ರಂಜಿಸುವ ಶಿವಲಿಂಗದರ್ಶನಸ್ಪರ್ಶನಸ
ಮಂಜಸದೆ ಧೂಪದೀಪಾದಿ ಕಟುನೈವೇದ್ಯ
ದಿಂ ಜಂಗಮುವನರ್ಚಿಸುತ್ತರಸನಿರೆ ಬಂದುದಂತಲ್ಲಿ [೩]ಶಿಶಿರ[೩]ಕಾಲಂ ॥ ೮

ಶಶಿ ಶಿರವನೇಱಿದಂ ಗಂಗೆ ತಲೆಯುಳ[೪]ಡರ್ದ*ಳಾಳ
ನೊಸಲಗ್ನಿಗಣ್ಣು ತಂಪಾದುದೆರಡಚ್ಚಿ ತ
ಣ್ಣಸದಿಂದೆ ಸಮವಾದುವೆಂದು[೫]ಮಾವನ[೫] ಹೆಸರ ಹಿಡಿಯದಗಜೆಯು ಪಾಪುದಾ ।
ದೆಸೆಗೆ [೬]ಸಾರ್ಚಿದ[೭] [೭]ಶಿವನ[೭] ಶರಣಪ್ರಭಾಮಯದ
ಬಿಸಿಲಿಂದಲುಪಚರಿಸಿ ತತ್ಕಾಲಪಂ ಕಳೆದು
ವಸುಧಾಧಿಪತಿ ಸುಖದಿನಿರಲೊಂದು ದಿವಸಲ[೮]ನನಸ್ತಾದ್ರಿಯಂ ಸಾರ್ದನು ॥ ೯

ಭೂಮಿಯಂ ಸುರುಳ್ದು ಕಡ್ಬೊಯ್ದು ನರಕಾಸುರಂ
ಗಾ ಮಾಧನನ ದೆಸೆಯೊಳಾಯ್ತು ಭಂಗಂ ಸುರಪ
[೯]ಗಾ[೯] ಮುನೀಶನ ಪತ್ನಿಗಳುಪೆ ಭಾಂಡಿಕದೇಹವಾಯಿತದಱಿಂ ಕಳ್ಳರಾ ।
[೧೦]ಕಾಮಿ[೧೦] ಪಾದರಿಗ[೧೧]ರೇತಕ್ಕೆ[೧೧]ಗುಹನಂ ಪ್ರಣವ
ಸಾಮರ್ಥ್ಯಚೋರನಂ ಮಾನಕಂಜಾರನಂ
ಪ್ರೇಮದಿಂ ನೆನೆದಿಂದುಧರನ ಪೂಜೆಯ ಭಕ್ತರೆಸಗುತಿರೆ ಜಂವ್ರನೆಗೆನಂ ॥ ೧೦

ಪೊನ್ನ[೧೨]ಬೆಟ್ಟವ[೧೨] ಬಳಸಿದೆಂ ಸಜ್ಜನರ್ಗೊಂದು
ಪೊನ್ನೊರೆಯನಿತ್ತುದಿಲ್ಲೇತಱಿರವೆಂದು ಮಿಗೆ
ಪನ್ನತಿಕೆಯಿಂ ಪೂರ್ವಗಿರಿದುರ್ಗಮಂ ಕೊಂಡು ಜಯಲನಾಡಂ ಸಾಧಿಸಿ ,
ದಿಙ್ನಿಚಯದೊಳು ಹೇಮಕರಗಳಂ ಬಿಟ್ಟೆತ್ತಿ
ಜೊನ್ನವಕ್ಕಿಗಳೆಂಬ ಬುಧರ್ಗ*ಳಂ ತಣಿಪಿ ಪೊ
ಕ್ಕಂ ನಾಡೆ ಜಲದುರ್ಗಮಂ ರಾಜನೆನಲಿಂದು ಪಡುವಗಡಲಂ ಸಾರ್ದನು ॥ ೧೧

---

೧ ದ [ಅ.ಇ.] ೨ ತೆರದೆ [ಆ] ೩ ಹಿಮದ [ಉ.ಓ.ಗ] ೪ ಡರಿದಳು [ಅ.ಇ.ಓ]
೫ ಮಾನವನ [ಈ] ೬ ಸಾರ್ಚಿಸಿದ [ಓ] ೭ ಶಿವ [ಓ] ೮ ನೀ [ಆ.ಈ.ಗ], ಯಿ [ಉ.ಓ]
೯ ಸಾ [ಅ.ಉ] ೧೦ ಭೂಮಿ [ಆ. ಈ.ಉ.ಓ] ೧೧ ರಂಪೇಳೆ [ಅ.ಇ.] ೧೨ ಬೆಟ್ಟಂ [ಅ.ಈ.ಗ]

ದೇಹಕಾಂತಿಗೆ [೧]ಮುಳಿದಾ ತರಣಿಪತಿಯಂ ಪಿಡಿದು
ಕಾಹಸಿಟ್ಟನುಜೆ ಲಕ್ಷ್ಮಿಯನೊಳಗೆ ತುಂಬಿ ಪಡೆ
ಮೋಹಿಕೊಂಡಿರೆ ಮುದ್ರೆಯಿಟ್ಟ ರಾಜಂಗೆ ಕೈಸೆಕೆಯ ತೋಱುವೆನೆನುತ್ತೆ ।
ಆಹ! ಚಕ್ರಂಗಳಂ ಜೋಡಿಸುತ್ತುಂ ರಥಾ
ರೋಹನಾಗುತ್ತೆ ದಳವುಂ ಕೆದಱೆ ಹುಡಿಮಾಡಿ
ಬೇಹಳಂ ಮನ್ನಿಪಂತಂಬುಜವನಲರಿಸುತಲಿನಸುದಯ ಗಿರಿಯನಡರ್ದ*ಂ ॥ ೧೨

ಆಗಳಾ†ಕುವರರಧಿಕಸ್ನಾನಮಂ ಮನೋ
ರಾಗದಿಂ ಮಾಡೆ ಚೆಲ್ವಿಂದೆಸೆವ ಶತದಳದ
ಪೂಗಳಿಂ [೨]ಷಡ್ವಿಧಾನ[೨]ದೊಳೆ ಲಿಂಗಾರ್ಚನೆಯನೆಸಗಿ ಪರಿಮಳ ಚೂರ್ಣದ।
ಯೋಗ[೩]ಮಿಶ್ರದೆ[೩] ತತ್ಪ್ರಸಾದತಾಂಬೂಲಕರ
ರಾಗುವನಿತಕ್ಕರಸನೆಯ್ದೆ ಪೊಱಮಟ್ಟನೆನೆ
ಕೈಗೊಟ್ಟು ಕೆಲಬಲದೊಳೋಲೈಸಿ ಬರೆ ನಡೆದನಲ್ಲಿ ಚೋಳಾಧೀಶನು ॥ ೧೩

ವೈರಿಧರಣೀಪಾಲಸಂದೋಹವೆಂಬ ಕಂ
ಠೀರವಕೆ[೪] ಶರಭ ಮಝು ಭಾಪು! ಮೇಲುಪ್ಪರ ಮ
ಹಾರಾಯ ರಾಯಪರಮೇಶ ಜಯಜೀಯಯೆಂದುಲಿಯೆ ಕಂಚುಕಿಗಳಲ್ಲಿ।
ಭೂರಮಣಸತ್ಯೇಂದ್ರಚೋಳ[೫]ನಾ[೫] ಸಿಂಹಾಸ
ನಾರೂಢನಾದನಂ[೬]ದಷ್ಟ[೭] ಸಂಪದ[೬]ವ ಕಾ
ಲಾರಿಯಿಂ ಪಡೆದನೋಲಗವನಾಂ ಬಣ್ಣಿಸುವೊಡಳವೆ ಬಲ್ಲಂತೊರೆವೆನು ॥ ೧೪

ಪರಮ ಮೈತ್ರೇಯರಿಂ ಪುಂಡರೀಕಾಕ್ಷಿಯರ
ತರದಿಂದೆ ಸೂತರಿಂ ಮತ್ತೆ ತತ್ಕ್ರತುಕರ್ತೃ
ಪುರುಷರಿಂ ತಳ್ತಲಗುಗಳ ಮರೀಚಿಗಳಿಂದಲೆಸೆವ ಸಂಗರದಕ್ಷರಿಂ ।
ಮರಳಿ ನಿರ್ಜರಗುರುವ ಪೋಲ್ವ ವಿಬುಧರ್ಕಳಿಂ
ವರಮುನಿಯ ಸಭೆಯಂತೆ [೮]ತದ್ಬ್ರಹ್ಮಸಭೆಯಂತೆ
ಸುರಪತಿಯ ಸಭೆಯಂತೆ ಮೆಱೆದುದಾ ರಾಯನೊಡ್ಡೋಲಗಂ ಸೈಪಿನಿಂದೆ ॥ ೧೫

---

೧ ಮುನಿವ (ಅ.ಇ), ಮುಳಿವ (ಆ.ಈ.ಓ.ಗ). ೨ ಸದ್ವಿಧಾನ (ಅ.ಆ.ಇ.ಈ.ಓ.ಗ) ೩ ವಸ್ತ್ರದೆ (ಅ.ಇ) ೪ ರಕ್ಕೆ (ಅ.ಇ) ೫ ನೃಪ (ಅ.ಇ) ೬ ತ (ಅ.ಇ) ೭ ಮಂಪುರಾ (ಆ.ಈ.ಉ.ಗ) ೮ ಸ...(ಆ.ಈ.ಉ.ಓ.ಗ)

† ರಾತ್ರಿ ಚಂದ್ರೋದಯದಲ್ಲಿ ವಿಹರಿಸಿ ಅರಮನೆಗೆ ಹಿಂದಿರುಗಿ ಬಂದಿದ್ದ ಆ ರಾಜಕುಮಾರರು.

ಮಱೆಯದಿರು ಜೀಯ ಪಂಚಾಕ್ಷರಿಯ ಪಾಠಮಂ
ಮಱೆಯದಿರು ಮುರುಘರಿಸ್ಟವನಿತ್ತು[೧]ದಂ ಕೂರ್ತು[೧]
ಮಱೆಯದಿರು [೨]ಭಯಮುಮಂ[೨] ತೀರ್ಚಿಯುಪಮನ್ಯುವಂ ಶಿವನ
ಸಾರ್ಚಿದ ಮಂತ್ರಮಂ ।
ಮಱೆಯಬೇಡಯ್ಯ ಪಿಳ್ಳೆಯನಾರ ಮಹಿಮೆಯಂ
ಮಱೆ[೩]ಯದೆ ನಮಃಶಿವಾಯ[೩] ಎಂಬುದೆನು[೪]ತಲೆ[೪]
ಚ್ಚಱಿಸಿ ಭಸಿತದ ಪುಟ್ಟಿಗೋಲ್ಗಳಿಂದಡಿಗಡಿಗೆ ತಿವಿವರಿರ್ವರು ಚೋಳನಾ ॥ ೧೬

ಪರುಷದಂತಾ ವೇದದಳತೆಗೋಲಂತೆ ನಿ
ರ್ಜರಧೇನುವಂತೆ ಪತಿಭಕ್ತೆಯಂತಮೃತ ಸಾ
ಗರದಂತೆ ಮುಟ್ಟಲೊಡ[೫]ನಹ[೫] ಸುವರ್ಣತ್ವದಿಂ ಶ್ರುತಿಕಾಷ್ಠಜೀವಾಳದಿಂ ।
[೬]ಸೊರೆ[೬]ವಾತಿನಿಂ ಕಟ್ಟಿ ಬಾರಿಸಿದೊಡೊಳ್ನುಡಿಯ
ಪುರುಷನೊಳ್ ನುಡಿವ ದಾರದ ತೆಱದೆ ರಂಜಿಸುವ
ಕರೆ[೭]ಯಾಪ್ರ[೭]ವಾಳದಿಂದೆಸೆವ ದಂಡಿಗೆವಿಡಿದು ಜಾಣಗಾ[೮]ನಂ[೮] ಪಾಡಿದಂ ॥ ೧೭

ಪಾಲ್ಗಡಲ ಚೆಲ್ವ ಬಂಬಲ್ದೆರೆಯನೀಳ್ಕೊಂಡು
ನಲ್ಗಿಯ್ದ ತವರಾಜ[೯]ದೊ[೯]ಡಪೆರಸಿದಿಸಿದದೇಂ
ಪಾಲ್ಗೆ ಜೇನೆಯ್ದೆ ಕಂದಲ್ ಸೊಗಸು ಸಾಟಿಯೇ ಸಗ್ಗಿಗರ ಪೊಂಗೊಡನೊಳು ।
[೧೦]ಮೇಲ್ಗ[೧೦]ಂಕ್ಕುವಮರ್ದೆ*ಣೆಯೆ ಪೂರ್ವದಪ್ಪೂತಿಯರ
ಕಾಲ್ಗೆಱಗಿ ಪಡೆದನೋ ಭಾಪುಭಾಪೆಂದು ಪೊಗ
ಳಲ್ಗರುವ ಗಾನನಂತಾ ರಾಜಸಭೆ ಲೆಪ್ಪದೊಲ್ ಗಾಡಿವೆತ್ತಿರ್ದುದು ॥ ೧೮

ರವಿವಂಶ[೧೧]ಮಯರತ್ನದಗೆ[೧೧]ಗಳೋ ನಾಡೆಯೊ
ಪ್ಪುವ ರೋಹಣಾದ್ರಿಗಳ ಗಂಡಶೈಲಂಗಳಿಂ
ದಿವರ ಮಸ್ತಕದೆಡೆಗೆ ಬಂದ [೧೨]ಮಣಿಪುಂಜಗಳೊ[೧೨] ಪೆರ್ಚು ಕುಂದಿನ ಶರಧಿಯ ।

---

೧ ದಂ ಕೂಡೆ (ಅ.ಆ.ಇ.) ೨ ಭಯುಗಳಂ (ಅ.ಇ), ಭವಗಳಂ (ಆ). ೩ ದಿರು ಓಂ ನಮಃ ಶಿವಾ (ಅ.ಇ), ಯದೆ ನಮಃ ಶಿವಾ (ಈ). ೪ ತ್ತದೆ (ಈ) ೫ ಸಾ (ಆ.ಈ.ಗ), ನಾಹ (ಓ). ೬ ಸ್ವರ (ಓ) ೭ ತತ್ರ (ಅ.ಇ), ಯ ಪ್ರ (ಆ), ಯಿಂ ಪ್ರ (ಓ). ೮ ನವ (ಆ) ೯ ನೊ (ಅ.ಇ.ಈ.ಉ.ಗ) ೧೦ ಮೇಲು (ಈ) ೧೧ ಗಳರನ್ನದೆನೆ (ಅ.ಇ), ಮಯರನ್ನದಗೆ (ಉ.ಓ) ೧೨ ಪುಂಜಂಗಳೋ (ಆ.ಈ.ಗ)

ನವರತ್ನರಾಶಿಗಳ್ ಗಾಂಭೀರ್ಯನಿಧಿ ಚೋಳ
ಭುವನಾಧಿಪನ ಸಭೆಯು ಸಾರ್ದಪೋ ಪೇಳಿಮೆಂ
ಬವೊಲಿರ್ಪ ಮಣಿಮುಕುಟವರ್ಧನರಸಂಖ್ಯಾತರಿರ್ದರೊಡ್ಡೋಲಗದೊಳು ॥† ೧೯

ಗಾಯಕರು ಪಾಡಿ ೧ವಾಗ್ಮಿಗಳರ್ಥಮಂ ಮಾಡಿ೨
ಬಾಯತೆಱದಾಡೆ ಶಿಕ್ಷಿಪೆ೩ವರ ಕೂಡೆ ೪ಮು
ತ್ತೀಶಯವನಿಪರು ಕಪ್ಪಮಂ ತಂದು ಮುಂದಿಟ್ಟು ಬಿನ್ನೈಸಿಳಿಯಳ್ತಿವಟ್ಟಳ |
ರಾಯನಂ ೫ನಿರಘನಿರ್ಮಾಯನಂ ನೈರ್ಮಲ್ಯ
ಕಾಯನಂ ಸಂತತಾಜೇಯನಂ ನಿರ್ಜಿತಾ
ಪಾಯನಂ ಕಾಣ್ಬುದೋಹೋ ಎನುತ್ತಿರ್ದರೈ ನ್ಯಾಯದಿಂ ದಂಡಧರರು ॥ ೨೦

ಆ ರಾಯನಿಂತು ವೈಭವದಿಂದಲೋಲಗದ
ಸಾರ ಸುಖದಿಂದೊಪ್ಪುತಿರೆ ಸಿಂಧುದೇಶದ ಮ
ಹೀರಮಣನಖಿಳ ಸಂಪತ್ತಿನಿಂ ನಡೆತಂದು ಗಜಮಸ್ತಕದಿನಿಳಿವುತೆ |
ತೋರಮುತ್ತುಗಳ೬ನಂಜುಲಿಗೆದಱಿ ಕೈಮುಗಿದು೭
ಸೇರಿ ಸಾಷ್ಟಾಂಗದಿಂ ನಮಿಸಿ ನಿಂದಿನಕುಲಮ
ನೋರಥ ಸಹಾಯಂಗಳಪ್ಪ ತೇಜಿಯನೆರಡ ತಂಮು ಕಾಣ್ಕೆಯನಿತ್ತನು ॥ ೨೧

ದುರ್ವಾಸ ಮುನಿಶಾಪದಿಂದಂದು ಪೋದ ಸುರ
ರರ್ವಮಂ ಬೇಡಿ ಮಥನಿಸಿದೊಡಂ ತತ್ಸಿಂಧು
ಪೂರ್ವಾಮರಾಮುರರ ಬಲ್ಗಾವ ಪಿಡಿಸುತುಚ್ಚೈಶ್ರವವೆನಿಪ್ಪ ಹಯವ |
ಸರ್ವ ಬಾಧೆಯೊಳಿತ್ತನಂತಲ್ತು ನಿಜ ಹರ್ಷ
ದುರ್ವಿನಿಂದೀಸಿಂಧುನೃಪನೆರಡು ಕುದುರೆಗಳ
ನುರ್ವರಾಧಿಪಗೀಯಲರರೆ ! ಭಾಪೆಂದೆನುತ ಸರ್ವರಾನಂದಿಸಿದರು ॥ ೨೨

---

† ಈ ಪದ್ಯ 'ಓ' ಪ್ರತಿಯಲ್ಲಿ ಮುಂದಿನ ಪದ್ಯವಾದ ಬಳಿಕ ಬಂದಿದೆ.

೧ ರರ್ಥೈಸಿರೆ ವಾಗ್ಮಿಗಳ್ [ಅ.ಈ.ಉ ಗ] ೨ ಸೆ [ಅ.ಇ] ೩ ಕೇಳೀ [ಅ.ಇ.ಗ] ೪ ಭಯುವಬಿಟ್ಟು [ಅ.ಇ] ೫ ನೈರ್ಮಲ್ಯಕಾಯುಸಂ ನಿರಘನಿರ್ಮಾ [ಅ.ಇ] ೬ ರನ್ನಗಳ ನಂಜುಲಿಗೆದರೆ (ಅ.ಇ.ಉ)

ಆ ನೆರೆವ ಸಭೆಯ ಬೀಳ್ಕೊಟ್ಟಣುಗರಿರ್ವರ್ಗೆ
ಯಾನೆರಡು ಕುದುರೆಗಳ ಕೊಡುವೆನೆಂದಿತ್ತರಸ
ನಾನೇಹದಿಂ ಸಿಂಧುನೃಪನಂ೧ಕಳುಹಿದೊಡಾತ೧ನಾನೆಗಳಿಗಧಿಕವಪ್ಪ ।
ಆನೆಯ ಶಿರಸ್ಥಲವ ಸಿಂಧು೨ಭೂಮಿಪ೨ನಡರ್ದು*
ತಾನೆ೩ಯ್ದಿ ಪೊಗಲು೩ ಚೆಲ್ವಿನ ಸೌಖ್ಯಮಂದಿರವ
ನಾನೆಳಗಳ ಸಿಂಧುವಂ ಪೊಕ್ಕನಿ೪ನನನ್ಯೋನ್ಯದಾ ೫ನೇರ್ಪಿ೫ನೊಲ್ಮೆಯಿಂದ ॥ ೨೩

ಪಗಲು ಕಡೆಗಾಣೆ ತಮವೆಂಬ ಗಿಡುಗಂಗಳ್ಕಿ
ಖಗದ ಮಱಿ೬ಗಳು ಬಿಗುತ್ತೋ೬ಡಿ ಮನೆಮನೆಯ ಗೂ
ಡುಗಳ ಪೊಕ್ಕಿರ್ದ* ಧಿಗಿಲನುರಿಯಲಂತ್ಯದ ಗುಣವ ಸಾ೭ತಸ್ಪೃಶ್ಯವಾ೭ಗಿ ।
ಮೊಗ೮ವೆಯ್ದೆ ಹೊತ್ತಿ ಹೊಗೆವಂತು೮ರಿವುತಿರ್ಪ ದೀ
ಪಗಳ ಸಂತೈಸಲ್ಕೆ ತಂದಂದದಿಂ ಪೂರ್ವ
ನಗದಗ್ರದೊಳಗುದಯವಾದನಾ ತರಣಿ ಕಣ್ಣಾಲ್ಗೆ ಹರವರಿಯ ಸರಣಿ ॥ ೨೪

ಲೋಕಬಾಂಧವನುದಯವಾಗಲುಪ್ಪವಡಿಸುತ
ಲಾಕುಮಾ೯ರು ನಿತ್ಯಕೃತ್ಯಂಗಳಂ ರಚಿಸಿ
ಭೂಕಾಂತನಿತ್ತ ಭಾಸ್ವತ್ತುರಂಗದ್ವಯಂಗಳಂ ತನ್ನಿಶಾಂತದಲ್ಲಿ ।
ಜೋಕೆಯಿಂದಿರ್ದವಂ ತರಿಸಿ ೭ರಥ್ಯ೭ಸ್ಥ೮ಕ
ನೇಕ ಮನ್ನೆಯ ಮಕುಟವರ್ಧನರು ಸಹಿತವಾ
ಲೋ೮ಕನಂಗೆಯ್ದು೮ರಾನಂದದಿಂ ನಲಿವು ಕೊಂಡಾಡಿ ಹರುಷವನೆ ಸೂಡಿ ॥ ೨೫

ಜಾಣ೯ರೆನಿಸುವ೯ ಕುವ೧೦ರಾ೧೦ ವಾಜಿಶಾಸ್ತ್ರ ಪ್ರ
ವೀಣರಂ ಕರೆದಿವಂ ಪರಿಕಿಸುವುದೆನೆ ಜೀಯ
ಕಾಣೆವೀ ಧರೆಯೊಳಿಂತಪ್ಪ ಸೌಖ್ಯ೧೧ನುವು೧೧ ನಿಂತಿವಱ ಹೃತ್ಕಮಲ೧೨ದೊಳಗೆ೧೨ ।

---

೧ ಬೀಳ್ಕೊಟ್ಟೊಡವ (ಅ.ಇ) ೨ ರಾಜಂಅ (ಉ), ರಾಜಂ ನ (ಅ .ಆ .ಇ ಈ. .ಗ ೩ ಯ್ದೆ ಪೊಕ್ಕ (ಅ.ಇ) ೪ ಯುಂ ಸಿಂಧುವಂ ಪೊಗಲುಯಿ (ಉ), ಗಳಸಿಂಧುರಂ ಪೊಕ್ಕನಿ (ಅ). ಗ ಸಿಂಧುರಂ ಪೊಕ್ಕನಿ (ಗ). ೫ ನೆಪ್ಪಿ (ಉ) ೬ ಹೊತ್ತಿ ಹೊಗವುತಿಪ್ಪವೊಲು (ಅ.ಇ) ೭ ಗವ್ಯ (ಉ), ರವ್ಯ (ಓ). ೮ ಕಿಸುತ್ತಿರ್ದ (ಅ.ಇ.) ೯ ರಹ (ಅ.ಇ) ೧೦ ರಂತಾ (ಅ.ಇ) ೧೧ ಗಳ (ಅ.ಇ) ೧೨ ಗಳೊಳು (ಅ.ಇ)

ಮೋಣು ಸಿರಿ ಸತ್ಯಂಗಳೊಳವು ಮನವದಜ[೨]ನಿಂ
ದೇ[೧]ಣಂಗೆ ಮಾರುತಂಗತಿವೇಗ ಪಂಚ ಕ
ಲ್ಯಾಣವೀ ದೇವಮಣಿ ದೊರೆಸುಳಿಗಳಿವೆ ಯಿಾ ಸು[೩]ಲಕ್ಷಣವನ[೪]ವ[೫]ನೀಶಂ ॥ ೨೬

ಎಂದ ಮಾತಂ ಕೇಳುತಾ ಮಂತ್ರಲಕ್ಷನಾ
ನಂದದೆ ಮನೋಜವಾರಣಸೌಮ್ಯಗಮಳನೆ[೬] ನೇ
ಹಂದಳೆದು ಮೇಲ್ವರಿ[೭]ದು ಬರೆ[೮] ತುಡುಂಕುವ ಬರ್ದಿನಿನಿಯನ ವಿಲಾಸದಂತೆ ।
ಮುಂದುವರೀವಾ ತವಕದಿಂದೇ ಮಿತವಚನನೊಡ
ನೆಂದನಣ್ಣಯ್ಯ ಕೇಳಿರ್ವರಿವನಡರಿಯಾ
ವಿಂದು ಪೈಹಾಳಿಯಂ ಮಾಡವೇಳ್ಕೆಂದು ಕಿಊಸಗೆ ಮೊಗದೊಳೆಸೆಯೆ ನುಡಿದಂ ॥ ೨೭

ಆ ನುಡಿಯ ಕೇಳ್ದು ಮಿತವಚನನೆಂಪಂ ತಮ್ಮ
ನೀನಜ[?]ಯಲಾ ಮುಂದಣಾಗುಹೋಗಂ ತಂದೆ
ಯೇನುಳಿದ ನೃಪರಂತೆ ನಾರಿಸುತಮೋಹಿಯೇ ಸಕಲಸೌಭಾಗ್ಯಮಿರಲು ।
ಜ್ಞಾನಿ ಶಂಕರಭಕ್ತವರ್ಗಕೆಮ್ಮಿಂದ ನೋ
ವೇನಾನುಮಾದೊಡಾತ್ಮಜರೆಂದು ಮನ್ನಿಸುವ
ನೇ ನವ್ಯಘೋಟಕಂಗಳನೆಮ್ಮ ತೊಡೆಮುಡಂಗಳ್ಗೆ ತಿರ್ದಿಸ[೭]ಲಿ ವೇಳ್ಕುಂ ॥ ೨೮

ಎಲೆ ತಮ್ಮ ಕೇಳು ಧರ್ಮಜನುದಕಮಂ [೮]ಗಗನ
ದುಳಲುಪಿಂಗೆ ಬಿಟ್ಟನುಜರಂ ಪಡೆದನದು ಬೇಡ
ಮಲುಹಣನ[೯]ಗಲ್ದವಸ್ಥೆಯೊಳೆಯ್ದಲಾ ಭೀರು ಮಲುಹಣಿಯ ನುಡಿಯ ಕೇಳಿ ।
ಮಲಹರ ಸ್ತೋತ್ರದಿಂ ಕೈಲಾಸಮಂ ಪುಗನೆ
ಸಲೆ ಸೌಖ್ಯರೂಪ [೧೦]ಕೇಳ್ ನೀನು ಧೈರ್ಯಂ[೧೦]ಗೆಡ[೧೧]ದೆ
ನಿಲೆ[೧೧] ಸೈರಿಸೆನಲಯ್ಯ ಮುನಿವನಲ್ಲೆನೆ ಮಂತ್ರಲಕ್ಷಗಗ್ರಜನೆಂದನು ॥ ೨೯

---

೧ ಣ ಮಾರುತಗಳಿಂ ಮಿಗೆ (ಅ.ಇ) ೨ ಯಿಂವಜಿ (ಅ.ಇ.ಉ) ೩ ನಾವಂ (ಅ.ಇ) ೪ ನ (ಅ.ಇ.ಈ.ಉ.ಓ) ೫ ವುತಿರೆ (ಅ.ಇ) ೬ ವತಿಮೋಹದಿಂದ (ಅ.ಇ) ೭ ಸಬೇಹುದು (ಅ.ಇ) ೮ ಬಯಲಿನು (ಅ.ಇ) ೯ ನವಳನಗಲ್ದವಸ್ಥೆಯೊಳಗೆಯ್ದಿ ಭೀರು (ಉ), ನೆನಿಪ್ಪವಂ ತಾನಲ್ಲಿ ನಿಮಿಷಕ್ಕೆ (ಅ.ಇ) ೧೦ ಕೇಳ್ವೈ ಧೈರ್ಯ (ಉ), ಕೇಳಿನ್ನು ಧೈರ್ಯಂ (ಗ), ೧೧ ದವೊಲು (ಅ.ಇ). ದೆ ನೀಂ ನಿಲು (ಉ)

ಪಿತನ ಕಾಲ್ಗಳಱಿಯನೇ ಚಂಡೇಶ್ವರಂ ತನ್ನ
ಸತಿಯ ಪೊಡೆಯಂ ಸೀಳನೇ ಚೋಳನಂಗನೆಯ
ನತಿಕೋಪದಿಂ [1]ಕೈಗಳ[2]ರಿಯನೇ ಕಲಿಕಂಬನಯ್ಯನ ಕೊರಲ್ದಱಿಯನೆ।
ಸುತಗೊಲ್ಲಳಂ ನಿಂಬಿ ಮಗನ ತಲೆಯೊಡೆಯಳೇ
ಸಿತಕಿರಣಜೂಟನಸಿತಗ್ರೀವನಭಯಕರ
ಯುತ ಜಗತ್ಸಾಕ್ಷಿಹರಿನೇತ್ರಾಂಘ್ರಿಯಭವನಣುಗ[2]ರ್ಗುಂಟೆ ತನ್ನವರ್ಗಳು॥ ೩೦

ಅದು ಕಾರಣಂ ವಿಚಾರಂ ಬೇಹುದೆನಲಣ್ಣ
ಯಿದ[3]ಱಿತೊಳೆಂ[3] ಸಂದೇಹಮೇ ಶಿವಂ ಯಕ್ಷ ರೂ
ಪದಿನಿಟ್ಟ ಹುಲ್ಲನಜಹರಿಸುರಪಮುಖ್ಯರೇಂ ತಮ್ಮ ಯುಕ್ತಿಯ ಬಲ್ಮೆಯಿಂ।
ಅದನೆಯ್ದೆ ತೊಲಗಿಸಿದುದಿಲ್ಲವಾ ವ್ಯಾಘ್ರಚ
ರ್ಮದಳವಿಯದ್ಗಂಗಾಧರಂ ಯಮಧ್ವಂಸಿ ಮಾ
[4]ಡಿದ ಬಾಧೆ[5] ತಪ್ಪಿತಿಯಲ್ತೆ ತಾಪತ್ರಯಂ ಪೊರ್ದ[6]ದೆಂದುಂ [7]ಭಕ್ತರಂ॥ ೩೧

ಎಂದು ನಿಶ್ಚೈಸಿ ಕೇಳಣ್ಣ ವೈಹಾಳಿ ಬೇ
ಡೆಂದೊಡಾಂ ನಿಲ್ಲೆಂ ಭವಿಷ್ಯತ್ಪದಂಗಳಾ
ವಂದಂಗಳಪ್ಪವೆಂಬುದನಱಿಯಬಾರದಾ ಕಂದರ್ಪಹರನೆ ಬಲ್ಲಂ।
**ಇಂದು ನಿನ್ನಿಂದಾದ ತಪ್ಪದೆನ್ನದು** ಕೇಳು
ಸಂದೆಗಂ ಬೇಡವೇಳೆಂದೊಡಂಬಡಿಸಿರ್ವ
ರೊಂದು ಚಿತ್ತದೊಳು ಗಂಭೀರಭೇರಿಗಳೊದಱಲೆಂದಲ್ಲಿ ನಿರವಿಸಿದರು॥ ೩೨



---

೧ ಕಯ್ಯನ [ಅ.ಇ.ಉ] ೨ ಗೆ ತನ್ನವರ್ಗಳುಂಟೆ [ಉ] ೩ ಕಿನ್ನು [ಅ.ಇ.ಓ]
೪ ಪಾದದ [ಅ.ಉ.ಓ] ೫ ಬೋಧೆ [ಈ.ಗ] ೬ ವೆಂದುಂ [ಅ] ೭ ದದ [ಅ.ಇ]

## ೮. ಆರು ನೀನೆಲೆ ತಾಯೆ?

ಆ ಸಮಯದೊಳು ಕಾಳಹಸ್ತಿ ಬಳಿಕಾ ವಾರ
ಣಾಸಿಮಯವೆನಿಸುವಾನೆಯ ಪೌಜಿನಿಂ ಪರ್ವ
ತಾಸಮೀಚೀನ [೧]ಧಾನುಷ್ಕೋಟಿಂ ರೌದ್ರದ ಪದಾತಿಬಲದೇಳ್ಗೆಯಿಂದ ||
ಭಾಸುರದ [೨]ಚಕ್ರಿ ಗಾಂಧರ್ವವರರಣುಗರ ವಿ
ಲಾಸದಾ ರಥಹಯಂಗಳ ಚಾತುರಂಗಬಲ
ವೀಶಭಕ್ತರ ಪೆಂಪಿನಿಂ ಭಾಪು! ಕೂಡಿತ್ತು ಭೂಮಿ ಬೆಸಲಾದಂದದಿಂ || ೧

ತಡಿಯೆಂಬ ಕರೆಯಿಂದಲೆವೆದೆರೆಯಿಂದಲು
ಗ್ಗಡದ ಝುಲ್ಲರಿಫೇನದಿಂದಲುರಗೆಜ್ಜೆ [೩]ಕಾ
ಲ್ಗಡೆಯ[೩] [೪]ಬೊಳಬ್ಬುಳಿಕೆ ಮೊರಹುಗಳಿಂದಲಲಗುಮೀನಿಂದೆ ಹಲ್ಲಣವೆನಿಪ್ಪ |
ಹಡಗಿನಿಂ ಕೀರಣದ ನವರತ್ನದೇಳ್ಗೆಯಿಂ
ಕಡಲೆಂಬ ಸಂಜೋಗದಮಲಸೈಂಧವಗ[೫]ಳಂ
ಪಿಡಿದರಿಕ್ಕೆಲದಲ್ಲಿ ಸಾಣೆಗ[೬]ಳು[೭] ಸಿಂಗರಿಸಿ ಪೊಱಮಟ್ಟರಾ ಕುವರರು || ೨

ಸೋಮಸೂರ್ಯರ ವೀಥಿಯಲ್ಲಿ ಬರುತಿರೆ ಸಾರ್ವ
ಭೌಮನಣುಗರು ಮುತ್ತುರನ್ನಗಳ ದಿವ್ಯಪ್ರ
ಭಾಮಯ[೭]ಡೆ ನೆಲಸಿ[೮] ನೋಳ್ಪ ವನಿತೆಯರ ಹೃದ್ವದನಕುವಲಯದಕ್ಷಿನಳಿನಾಳಿ ||
ಶ್ರೀಮನ್ಮಹಾನೇತ್ರವೆನಿಸುವ ಚಕೋರಲತತಿಲ
ರಾಮಣೀಯಕ ಮಿಥುನ ಕುಚಕೋಕಗಳ್ ನಲಿಯೆ
ಮಾಮಯ್ಮರೆ ಭಾಪಿರುಳು ಪಗಲೊಂದುಗೂಡಿದಂತಿರ್ದುದಾ ಸಮಯದಲ್ಲಿ || ೩

---

೧ ಧನುಕೋಟಿಗಳ [ಅ.ಇ.ಉ.ಓ], ಧನುಃಕೋಟಿ [ಗ]   ೨ ಚಕ್ರ [ಆ.ಇ]   ೩ ಕಾಲ್ಕಡಹ [ಅ.ಇ.ಓ]   ೪ ದೊ [ಆ]   ೫ ಳಿಂ [ಆ.ಗ]   ೬ ರು [ಆ]   ೭ ಗಳಿಂ [ಅ.ಇ.ಗ]   ೮ ಗಳು [ಅ.ಇ]

ಸೌರೆಂಭೆ[೧]ದಿಂ ನಡೆದು[೧] ಭೂರತೀಶ್ವರರೂಪ
ರಾ ರಮಾಕರಪುರದ್ವಾರಮಂ [೨]ತಳರ್ದು*[೨] ಗಂ
ಭೀರ ವಾದ್ಯಂಗಳ ಮಹಾರವಂಗಳಿಳ್ ಪೊಣ್ಮ[೩]ಲೋರಂತೆ ನಡೆದು ಬಂದು।
ಸಾರತರ ವೈಹಾಳಿಯಾ ರಮ್ಯ ಸುಸ್ಥಲವ
ಸೇರಲಿಕ್ಕೆಲದಲ್ಲಿ ಪೌರಜನವೀಕ್ಷಿಸೆ ಕು
ಮಾರಕರ ಬಲದ [೪]ವಿಸ್ತಾರ[೪] [೫]ವೆ[೫]ಸೆವುನ್ನತಿಯನಾರಯ್ಯ ಬಣ್ಣಿಸುವರು ॥ ೪

ತರಣಿ ಲೋಕಾಲೋಕ ಪರ್ವತಾಗ್ರವನಿಂತು
ತಿರುಗುವಂ ತದ್ವಂಶಭವರಾವೆನುತ್ತ ಬಿ
ತ್ತರಿಸಂತೆ ಜಲಧಿಪರಿವೃತಧರಾಮಂಡಲಾಧೀಶತೆಯ ತೋಱುವಂತೆ।
ಹರನ ಕೈಲಾಸಮಂ ಪೊಕ್ಕಲ್ಲಿ ಮೆಱೆವ ಶಂ
ಕರನ ಬಲಗೊಂಬಂತೆ [೬]ತೇ[೬]ಜಿಗಳು ತಿಱಿಂದು
ತಿರುಗೆ[೭]ವೇಡೆ[೭]ಯವನಿಲಕ್ಕೆಸೆದಿ[೮]ರ್ದರಾ ಕುಮಾರರು ಲೋಕಕ[೮]ಧೀರರು ॥ ೫

[೯]ಗಮ್ಮನಿಕ್ಕೆಲದಲ್ಲಿ[೯] ಸೇನೆ ಪೌಜಿಟ್ಟಣ್ಣ
ತಮ್ಮಂದಿರಿದಿರಾ[೧೦]ಗೆ[೧೦] ಖೋಯೆಂದು ಸಕಲ ವಾ
ದ್ಯಂ ಮೊಳಗೆ ಬೊಬ್ಬಿಡುತ ರಥರಥಕೆ ಕರಿಕರಿಗೆ ಹಯಹಯಕೆ ಭಟಭಟರ್ಗೆ।
ತಮ್ಮೊಳಗೆ ತಾವು ಪೆರ್ಗಾಳೆಗದ ಮಾಳ್ಕೆಯಿಂ
ದ[೧೧]ಮ್ಮಮ್ಮ[೧೧] ಪೊಣರ್ದ*ರಿಳೆ [೧೨]ಕಮಠ ಫಣಿರಾಜಾಳಿ[೧೨]
ಬಿಮ್ಮ[೧೩]ಗೆಟ್ಟೆಳುಕೆ[೧೩] ಮೆಱೆದುದು ಭಾಪು! ಚತುರವೈಹಾಳಿ ಹರ್ಷದ
ಛಡಾಳಿ! ॥ ೬

---

೧ ದೊಡವೆರಸಿ (ಅ.ಇ.ಓ) ೨ ಪೊರಟು (ಅ), ಪೊಱಮಟು (ಇ). ಪೊಱಮಟ್ಟು (ಓ)
೩ ಳಾರ್ಭಟಿಸ (ಅ.ಇ) ೪ ಸಿಂಗಾರ (ಅ.ಇ) ೫ ದೆ (ಈ) ೬ ವಾ (ಅ.[illegible].ಉ.ಗ)
೭ ಬೇಡೆ [ಅ.ಈ], ವೆಂಡೆ [ಗ] ೮ ಕ್ಕುತಿ [ಅ.ಇ] ೯ ಇಮೆಯ್ಯೊಳಾ ಸಕಲ (ಅ.ಇ)
೧೦ ಗಿ (ಅ.ಇ.ಅ.ಉ.ಗ) ೧೧ ಮಮ (ಈ) ೧೨ ಗಜಫಣಿಪತುರಗಗಳ್ (ಅ.ಇ), ಗಜ ಫಣಿಪಕಮಠಗಳ್ ಎಂದು'ಅ' ಪ್ರತಿಯಲ್ಲಿ ತಿದ್ದಿದೆ. ಈ ಪಾಠ 'ಉ', 'ಓ' ಗಳಲ್ಲಿವೆ.
೧೩ ಗೆಡಲಲ್ಲಿ(ಅ.ಈ.ಉ.ಗ)

ಕಡುಪಿನಿಂ ವೇಡೆಯುಂದೆ ಬೀದಿಯಿಂ ತೀವ್ರದು
ಗ್ಗಡದ ಬಹುಗಮನದಿಂ ಲಂಘಿಸುತೆ ಬಳಸುತ್ತೆ
೨ಬಿಡದೆ ಸರಿಸುತ್ತೆ೨ ಬಲುಚಾರಿವರಿಕವುತ್ತೆಯೋಡುತ್ತೆ೩ ಹರಿಣ೪ಗಳ
ವಾಯುಜವಾಜಿ೫ |
ಒಡನೆಸುಗೆಯಂಬ ಮೀಱುವ ದಿಟ್ಟಗಳ ಮನದ
ನಿಡುವೇಗಮಂ ಜಱಿಯುತಿರ್ಪ ತುರಗಂಗಳಂ
ಪೊಡೆ೬ವೀಶ೬ನಣುಗರೇಱುತ್ತೆ ವೈಹಾಳಿಯುತ್ಸಾಹಮಂ ಕಳೆದರಾಗ ॥ ೭

ತಿರುಗಿದರು ವೈಭವದೊಳಾ ಕುಮಾರರ್ಕಳಾ
ಶರಣತತಿ ನೋಡಿ ಹಾರೈಸಿ ಮಱುಘು ಭಾಪಿವರ
ತುರಂಗಗಳಾಮಂದರಾದ್ರಿಯಂ ಮೆಟ್ಟಿ ಕನಕಾಚಲಕ್ಕಡರಿ ಬಳಿಕ |
ಹರನ ರಾಜತಗಿರಿಯ ಪೊಕ್ಕು ಶಾಂಭವಲೋಕ
ದುರುಗಣಾಡಂಬರದೊ೭ಳಿಂತಿವರನೀಡಾಡ
ದಿ೮ರವೆಂದು ಪೊಗಳೆ ಚೋದ್ಯಂಗಳಿಂ ನೋಡುತಿರೆ ಬಂದು ಪುರಮಂ ಪೊಕ್ಕ

ಲೋಕನೇತ್ರನ ಕುಲೋದ್ಭವ ಕುಮಾರರ್ಕಳಂ
ಕೋಕಕುಚೆಯರು ಕನಕಹರ್ಮ್ಯಂಗಳೆಡೆಯೊಳಾ
ಲೋಕಿಪರ್ ಕೆಲರು ಜಾಲಕದೆಡೆಗಳೊಳ್ಕೆಲರು ಸಾಲಭಂಜಿಕೆಗಳೆಡೆಯ |
ಜೋಕೆಯೊಳ್ಕೆಲರುಳಿದ ಮಱಿಗಳೊಳ್ಕೆಲಕೆಲರ
ನೇಕಪ್ರಕಾರದಿಂ ನೋಡುತಿರ್ಪೆಡೆಯೊಳಾ
ನಾಕಾಧಿಪನ ಸಿರಿಯ ಜಱಿದುದಂದವರ ವಾಹಿನಿ ಸಕಲಜನಮೋಹಿನಿ ॥ ೯

ಗಂಗಾಧರನ ಭಕ್ತೆ ತಿರುಕೊಳವಿನಾಚಿಯೆಂ
ಬಂಗನೆ ಪವಿತ್ರಜಲಘಟವನುಱಿ ಪೊತ್ತು೯ ಪೆಱ
ಪಿಂಗದಾ ಪಂಚವರ್ಷದ ಕುಮಾರಂಬೆರಸಿ ಮುನ್ನ ತಾಂ ನೀರಡಕುವ |

---

೧ ದ [ಅ.ಆ.ಇ] ೨ ಬಿಡೆ ಸರಿಸದಿಂದೋಡಿ [ಅ.ಆ.ಇ.ಈ.ಗ] ೩ ದಾಡಿಸುತ [ಅ.ಆ.ಇ.ಈ.ಗ] ೪—[ಅ.ಆ.ಇ.ಈ.ಉ.ಗ] ೫ ಗಳ ಬಳಿಕ [ಅ.ಆ.ಇ.ಈ.ಗ] ೬ ಪಾಲಕ [ಅ.ಈ.ಉ.ಗ] ೭ ಳೀಡಾಡದಿವು ಸುಮ್ಮನಿ [ಅ], ೮ ಇವರುಗಳನೀಡಾಡದಿ [ಅ.ಇ.ಓ] ೯ ಪೊತ್ತೊಡನೆ [ಅ.ಇ.], ಶಿರಪೊತ್ತು [ಉ.ಓ]

ಲಿಂಗವಂತರ ಮನೆಯ ಪೊಕ್ಕು ಹರವಿಯನಿಳುಪ
ಲಂಗಣದೊಳಿರ್ದ ಮಗನಾ ರಾಜವೀಥಿಯೊಳು
೧ಮುಂಗುಡಿ೧ಯೊಳೊದಗಿ ೨ವಾದ್ಯಂಗಳಿಂ ಬರ್ಪ ಸೇನೆಯ೨ ನೋಡ
ಪೋಱಮಟ್ಟನು ॥ ೧೦

ನಡುಬೀದಿಗೈದಿ ಬಾಲಕನೀಕ್ಷಿಸಲ್ಲಿ ಪೆ
ರ್ಬಡೆ ಕವಿಯೆ ಬೆಱಗುವಟ್ಟಿರಲು ದೊರೆಪೌಜು ಬಂ
ದೊಡನೊದಗಲ್ಲಿಟ್ಟಣಿಪ ಜನದ ತಡೆಗಾಲ್ಗಳಿಂದಾ ಸುತಂ ಪೊಡೆಗೆಡೆಯಲು।
ಕಡುತವಕದಿಂ ಬರ್ಪ ಮಂತ್ರಲಕ್ಷ್ಮಂ ಕಂಡು
ನಿಡುದನಿಯೊಳೊದಱಿ ತೇಜಿಯ ದಾಂಟಿಸಿದನಾಹ
ತೊಡರರಭವನ ಶರಣರಾ ಚತುರ್ವಿಧಪದಕ್ಕೆಂಬಂದದಿಂ ತಪ್ಪುತೆ ॥ ೧೧

ನೋಡಿ ಕೈಯೂಱಿ ಬಾಲಕನೇಳುತಿರ್ಪಲ್ಲಿ
[illegible] ಬಂದೊದಗಿತ್ತು ಮಿತವಚನನಶ್ವಮುಱಿ
೩ಜೋಡಿ೩ಸುತ್ತಾಹ ದಾಂಟಿದುಳಿದದೇ೪ ಸಿಕ್ಕಿದಂ ಹರ ಮಹಾದೇವಯೆಂದು।
ಆಡೆ ಸರ್ವರು ಖುರಂ ತನಯನ ಕೊರಲ್ದಾಗ
ಲೀಡಾಡಿದೊಲ್ ಪಱಿದು ಪುಟನೆಗೆಯೆ ದೊರೆಯಿಟ್ಟ
ಗಾಡಿಮುಹ ತಾರಹಾರಂ ಕಿಳ್ತುಗಲ್ ಧರೆಗೆ ಬಿರ್ದುದು ಶಿರಶ್ಚಂದ್ರಮಂ ॥ ೧೨

ಕಂಡು ಹರಹರ ಮಹಾದೇವಯೆಂ೫ದಲ್ಲಿ೫ ಭೂ
ಮಂಡಲಾಧಿಪನ ಕುವರರು ಮಕುಟವರ್ಧನರು
ತಂಡಸಹಿತಕ್ಕಟ ಇದಾರೊ ಕಲಿಗಣವರಂ ಖಂಡೆಯದೊಳಂದು ೬ಪೊಡೆದಾ೬।
೭ತುಂಡವೇ೭ನಲಿದೆ ಶಿವನ ಭಕ್ತವಧೆಲಯಾದುದಿದ೮
ಖಂಡಪರಶುವೆ ಒಲ್ಲನೇನಾಯ್ತು ಫಡಫಡಾ
ಗಂಡರಾರ್ವಲ್ತೇ೯ ಮೀಱಿದೊಡೆ ಕೈಲಾಸಮಂ ಸೂಱೆಯಂ ಕೊಂಬೆವೆನುತೆ ॥ ೧೩

೧ ಮುಂಗಡೆ (ಉ) ೨ ವಾದ್ಯಗಳೊದರೆ ಬಹು ಸೇನೆಯಂ (ಅ.ಇ) ೩ ಝಾಡಿ(ಅ.ಇ)
೪ ದದದೆ (ಅ.ಇ.) ೫ ದಾಗ((ಅ.ಇ) ೬ ಪೊಯ್ವಾ (ಅ.ಇ) ೭ ತುಂಡೊಯೆ (ಉ.ಓ)
೮ ಯುಪ್ಪುದಿದ (ಅ.ಇ) ೯ ಲ್ತು (ಅ.ಇ)

[1]ಶೂರರಾಧ್ಯತಿ[2]ಕಿರಣಸಂಗದಿಂ ನಿಜಹೃದಯ
ವಾರಿಜವನಲರಿಸುತೆ ನಡೆದು ರಾಜಾಲಯ
ದ್ವಾರದೊಳು ನಿಂದು ನಿಶ್ಚೈಸಿ ಸರ್ವರ ಯಥಾಕ್ರಮದಿಂದ [3]ಬೀಳ್ಕೊಡುತ್ತಾ[3] ।
ವಾರುವಂಗಳನಿಳಿದು ಚೋಳಭೂವಿಾಶನ ಕು
ಮಾರ[4]ರರಮನೆಯ[4]ಳ ಪೊಕ್ಕಿರ[5]ಲಿತ್ತಲತ್ತಲಾ
ಪೌರಜನವಾ ರುಂಡ[6]ವುುಂಡ[6]ನುಂ ಕಂಡು [7]ಕಡು[7]ಮು[8]ಗಿಲ
ನುಡಿವುತ್ತಿರ್ದರು ॥ ೧೪ ॥

ಅಂದು ಭಕ್ತನ ಬಡಿಮ ಮಾರುಡಿಗೇ[9]ಯ್[9]ನಾಚಿ
ತಂದೆ[10]ಯಿಂ ನೀ[10]ಗಿ[10]ಂ ಬತ್ತಲೆಗ ಸವಣರ್ಕೆಟ್ಟ
ರೊಂದಲನ್ಯಾಯ[11]ನೆಲುನಾಡಚೋಳಂ[12]ಬಿಜ್ಜಳಂ[12]ಬಳಿಕಲುದಯ[13]ಭೂಪಂ ।
ಮುಂದುಗೆಟ್ಟಳಿದರಂತಲ್ತ್[14]ವರ್ಮ್ಮ[14] ಭೂವಿಾಶ
ನಿಂದುಧರಭಜಕನಿಂ[15]ತೀ[15] ಶಿವದ್ರೋಹವೈ
ತಂದುದಿದ ಕೇಳಲೇ[16]ಗೇ[16]ಯ್ವನೋ ಶಿವಶಿವ[16] ಮಹಾದೇವಯೆನುತಿರ್ದರು ॥ ೧೫

ಈ ವಿಧದೊಳಖಿಳಜನವಳಲುತಿರಲಿತ್ತಲಿ
ನ್ನೇವೇಳ್ವೆನತ್ತಲವರಮ್ಮನಿರ್ದಂಗಣವ
ಠಾವಿನೊಳು ಸುತನ ಕಾಣದೆ ಹೆದ[17]ರಿ ನಾಲ್ದೆಸೆಗಳಂ ನೋಡಿ ಹಮ್ಮೈಸುತಾ ।
ಜೀವನವನುಳಿದ ಘಟಸಹಿತ ಪೊಱಮಟ್ಟು ಶೋ
ಕಾವಸ್ಥೆಯಿಂದೆ ಪೆಸರಂ ಪಿಡಿದು ಶಂಕರಾ
ಯಾವೆಡೆಗೆ ಪೋದೆ ಮಗನೇ ಮಗನೆ[18]ಯೆನುತೆ[18] ಪರಿದಾಡಿ ಕರೆವುತ್ತಿರ್ದಳು॥೧೬

ನಾರಿ ಕಂಗೆಟ್ಟು ಬಾಯ್ವಿಡುತಿರ್ದಳಿವಳಾ ಕು
ಮಾರಕನ ತಾಯಲ್ಲದಿರಳಿದಂ [19]ಕಾಣುತಾ[19]
ವಾರುಮಕುಟಾ ಜೀವಮುಂ ಕೊಂಡು ಬದುಕಬಹುದೇ ಶಿವಂ ಬಲ್ಲನೆನುತೆ ।

---

೧ ಸೂರ (ಅ.ಆ.ಇ.ಈ.ಓ.ಗ) ೨ ತ (ಅ.ಇ.ಉ.ಓ) ೩ ಬೀಳುಕೊಟ್ಟು (ಅಇ.) ೪ ರು ಮನೆಯ (ಇ) ೫ ಲತ್ತಲಿತ್ತಲೀ (ಅ.ಇ) ೬— (ಅ) ೭—(ಅ) ೮ + ತಮ್ಮೊಳಗೆ (ಅ) ೯ ಯಂ (ಈ.ಗ) ೧೦ ಯಂ...(ಅ.ಈ.), ಗಳಿನೀಗ(ಉ.ಓ) ೧೧ ವೆಲ (ಅ), ಪೆಲೆ (ಈ.ಉ.ಓ). ೧೨—(ಅ) ೧೩ ಭೂಪಾಲನಿಂದಂ (ಅ) ೧೪ ನ್ದು (ಅ.ಇ.ಉ), ೧೫ ದೀ(ಆ.ಈ.ಗ.) ೧೬ ಯ್ವನಾವನೊ ಶಿವ (ಅ.ಇ), ದಪನೊ ...(ಉ) ೧೭ ಯೆಂದು(ಅ.ಇ) ೧೮ ಕೇಳ್ದು।ನಾವಾರುವಕಟಾ (ಅ.ಇ)

ಪೌರಜನವಿಂತೆಂದುದೆಲೆಯಮ್ಮ ನೀನದೇಂ
ಕಾರಣಂ ಪಂಬಲಿಪೆಯೆನಲೆನ್ನ ಕಂದನಿಂ
ತೀರಾಜದಳದೆಡೆಗೆ ಬಂದನಾತನನಜಸಿ ಕಾಣೆನಯ್ಯೋ ಎಂದಳು ॥ ೧೭

ಮುಂದುಗೆಟ್ಟೆಳಲುವಾಕೆಗೆ ಕೆಲಂಬರು ಪೇಳ್ದ
ರಿಂದೀಗಳರಸುಗುದುರೆಯ ಪದಖುರಾಗ್ರಹತಿ
ಯಿಂದೊರ್ವ ಸುತನಳಿದನದೆ ನೆರವಿಯುನೆ ಕೇಳಿ ಹಾ! ಮಹಾದೇವ ಎನ್ನಾ।
ಕಂದನಂ ಕಲ್ಪಕುಜದ್ವಂದ್ವನಂ ವಿಮಲಗುಣ
ವೃಂದನಂ ಸಾಕ್ಷಾತ ನಂದನನನವಿಚಾರ
ದಿಂದಾವ ಕೊಂದನೋ ಎಂದು ಪರಿದಾಜನಂ ನಿಂದಲ್ಲಿಗೆಳ್ತಂದಳು ॥ ೧೮

ಮುತ್ತಿರ್ದ ಜನವ [೧]ಬಗಿದೊಳಪೊಕ್ಕು ಪರಿವುತಿಹಾ
ನೆತ್ತರಂ ರುಂಡಮಂ ಮುಂಡಮಂ ಕಂಡು ಹಾ!
ಮತ್ತನುಜ! ಹಾ ಕಂದ! ಹಾ ಮುದ್ದು ಮಗನೆ! ಹಾ! ಹಾ! ಕೆಟ್ಟೆನೆಂದೊಜಲುತೆ।
ಎತ್ತಿಕೊಂಡಾತಲೆಯನೆರ್ದೆ*ಯ ಗುಂಡಿಗೆಯೊಳವು
ದೊರ್*ತ್ತಿ [೨]ಶಿವದೋ[೩]ಯೆಂದು ತನುವ[೪]ನಿಳೆಗೀ[೪]ಡಾಡಿ
ಮತ್ತೆದ್ದು ಬಿದ್ದು ಹೊರಳುತ್ತ ದುಃಖದ ಕಡಲನೀಸಾಡುವಂತಿರ್ದಳು ॥ ೧೯

ಎಲೆ ಮಗನೆ ನಿನ್ನಯ ವಿಲೋಚನಂ ಕಂದಿಡುವೆ
ಸಲೆ ಶಶಿಯ ಪೋಲ್ವ ಮುಖವೆಯ್ದೆ ಕೊರಗಿತ್ತೆ ಮಂ
ಗಲಸೌಮ್ಯವಜಿತುದೆ ಗುರುಕೃಪೆಯದೇನಾಯ್ತು ಸಕಲಕಾವ್ಯಂಗಳೊಳಗೆ।
ಸುಲಭಶೌರಿಗಳು ಪುತ್ರ[೪]ಳನೆ[೪] ಮೋಹತಮಜವೆಂಬ[೫]
ರೊಲವಿನಿಂದೀ ಭೂಮಿಯಿರವು ಸಾಕೇ ತುರಗ
ದಲಘುಚರಣಕ್ಕೆ ಬಲಿಯಾದೆಲಾ ಗ್ರಹಬಲಂ ತಪ್ಪಿತಕಟಾಯೆಂದಳು ॥ ೨೦

ಚೀಜ[೬] ಬಿದ್ದೊಜಲಿ ಪಿಂದಕ್ಕಳಿದ ತನ್ನ ಸುತ
ರಾಜುಂಡ ತಾಣದೊಳಗಾರುಂಡಮಂ ಬೈತು
ನೀಜನೇ! ಸುಕುಮಾರನೇ! [೬]ಚೆಲ್ವಕಂದ![೬] ಹಾ! ಹಾ! [೭]ಕೆಟ್ಟೆನೆಂದೊಜಲುತ[೭]।

---

೧ ಸುಜತಿ ಬಗೆದೊಳಪೊಗುತ್ತಲಾ (ಅ.ಈ.ಉ.ಓ.ಗ) ೨ ಶಿವದಾ [ಅ.ಉ.ಓ] ೩ ನೆಲಕೀ [ಅ.ಇ.] ೪ ನ [ಅ.ಅ.] ೫ ಗೆಂಬ [ಅ.ಅ.ಇ.ಈ.ಗ] ೬ ಕಂದ ಮಗನೆ (ಅ.ಇ) ೭ ಯೆಂದು ಪಂಬಲಿಸುತ [ಅ.ಇ]

ಸೀಱುತಳವಳಿವುತ್ತ ಸರ್ವರ್ಗೆ ಕರುಣಮಂ
ತೋಱುತರಮನೆಯ [೧]ಬಾಗಿಲ್ಗಾಗಿ ನಡೆದು ನೆಱೆ
ಗಾಱಾಗಿ[೧] ಸತ್ಯೇಂದ್ರಚೋಳನರನಾಥ [೨]ಶಿವದೋ[೨] ಎಂದು ಮೊಱೆ
ಯಿಟ್ಟಳು || ೨೧

ಈ ಪರಿಯ ದುಃಖವಾರ್ಧಿಯ ಮೊಱೆಯ [೩]ಕರ್ಣಧಾ[೩]
ರಾಪೂರ್ಣವಪ್ಪಂತೆ ಕೇಳಿ ಶಿವಶಿವಯೆನುತ
ಭೂಪಾಲನಿದು ಶಿವನ ಭಕ್ತರ್ಗೆ ಬಂದ [೪]ವ್ಯಥೆ[೪]ಯಪ್ಪುದೆಂದಱಿದು ನೊಂದು |
ಕಾಪಾಲಿಯೇ ಬಲ್ಲನಿಂತಿದಱ ಬಗೆಯ ನಾ
ವೇ ಪರೀಕ್ಷಿಸಬೇಹುದೆಂದಧಿಕರೋದನಾ
ಲಾಪವೆಲ್ಲಿಯದೆಂಬ ಮಾತ್ರಕ್ಕೆ ಬಂದು ದೌವಾರಿಕಂ ಕೈ ಮುಗಿದನು || ೨೨

ಜೀಯ ಬಿನ್ನಪವರಿದ ತಲೆಯ ಪಿಡಿದೊರ್ವಬಳೆ
ಕಾಯಜವಿನಾಶನಂ ನೆನೆದು ಮೊಱೆಯಿಟ್ಟೊಱಲಿ
ಬಾಯಳಿವುತೈದಳೆ ದಯಾಭರಿತಯೆಂದು ನೃಪನಾಣತಿಯೊಳಾ ಸೇವಕಂ |
ಆ ಯುವತಿಯಂ ಸಭಾಮಂಟ[೫]ಪಂಬೊ[೫]ಗಿಸಲಾ
ರಾಯನಿದಿರೊಳಗೆ ಕಂದನ ತಲೆಯ ತಂದಿಟ್ಟು
ಹಾಯೆಂದು ಬಿದ್ದೊಱಲುವಾಕೆಯಂ ಕರುಣದಿಂ ಬೆಸಗೊಂಡನಾ ಭೂಪನು || ೨೩

ಆರು ನೀನೆಲೆ ತಾಯೆ ಪಱಿದಿರ್ದ ತಲೆಯಾತ
ನಾರು ಚೆಲ್ವಣುಗನಂ ಕೊಂದ ದುಷ್ಕೃತಕರ್ಮಿ
ಯಾರು ಶಿವ ಶಿವ ಪೇಳ್ವುದೆನಲೆದ್ದು ಭೂ[೬]ಪಂಗೆ[೬] ಕರಕಮಲಮಂ ಮುಗಿವುತಾ |
ನಾರಿ ತೊಡ[೭]ರಿ[೭]ದ ಕೋಟಿದುಃಖದಿಂ ನುಡಿದ ನುಡಿ
ಕೂರಂಬಿನಂದದಿಂ ಹೃದಯಮಂ ತಟ್ಟುಗಿಯ್ಯು
ಲಾ ರಾಯನಾಲಿಸುತ್ತಿರೆ ಸಭಾಜನವೆಯ್ದೆ ಮಱುಗಲಾಯುಕ್ತ[೮]ನೆಂ[೮]ದಳು | ೨೪

---

೧ ಬಾಗಿಲ ಪೊಕ್ಕು ನಡೆದು ಕಡುವೇಗದಿ (ಅ.ಇ) ಶಿವಧಾ (ಅ.ಇ) ೩ ಕರ್ಣದಾ (ಅ), ಕರ್ಣಾದಾ (ಈ). ೪ ವಧೆ (ಅ.ಈ.ಉ) ೫ ಪವವು (ಅ.ಇ) ೬ ಭುಜಗೆ (ಅ.ಇ.) ೭ ಗಿ (ಅ.ಇ.ಈ.ಉ,ಓ) ೮ ಳೆಂ (ಉ)

ದೇವ ನಿಮ್ಮಯ ಪಿರಿಯ ಪಟ್ಟಣದ ಸಕಲವಣಿ
ಜಾವಳಿಗಳೊಳಗಾವ ಮಾರ್ತಂಡನಾಮಿಯಹ
ಶೈವಸಂಪನ್ನನಾದಾ ಸೆಟ್ಟಿಯಖಿಳ ಸಂಪತ್ತಿನಿಂ ಶಿವಭಕ್ತರ |
ಸೇವೆಯೇ ಪ್ರಾಣವಾಗಿಹನು ತತ್ಸತಿಯಾನು
ಜೀವಿಸುತ ಗಂಡುಮಕ್ಕಳನಱುವರಂ ಪಡೆದೆ
ನಾವಿಶೇಷದ ಭಾಗ್ಯ ಭೂಚಕ್ರವರ್ತನೆಯ ಸಿರಿಯೆನಲು ಸುಖಮಿರ್ದೆನು || ೨೫

ಎನ್ನ ಪತಿ ಮಾರ್ತಂಡವಣಿಜಾತನೊರ್ಮೆ ಸಂ
ಪನ್ನವಹ ಚೈತ್ರದೊಳ್ ವಸ್ತುಗಳ ತನಗುಳ್ಳ
ಪೊನ್ನೆಲ್ಲಮಂ ತುಂಬಿ ಜಲಮಾರ್ಗದೊಳ್ ಪೋಪ ಕಾಲದೊಳ್ಪಡಗೊಡೆಯಲು |
ಮುನ್ನೀರೊಳಸ್ತಮಯವಾದನಾರ್ಜಿಸಿದ ಸಿರಿ
ತನ್ನಯ ತವರ್ಮನೆಯ ಪೊಗುವಂದದಿಂ ಮುಳುಗ
ಲಿನ್ನೆಮ್ಮ ದೌರ್ಭಾಗ್ಯದಗ್ಗಳದ ದುಃಖಮಂ ಚಿತ್ತೈಸು ಚೋಳಭೂಪ || ೨೬

ಲೋಕಕ್ಕೆ ಕಣ್ಣಾಗಿ ೧ಬಾಳ್ವೆಮ್ಮ ಮಿತ್ರನಾ೧
ನಾಕಸ್ಥನಾದನೆಂದಾಪ್ತರಳಲುತಿರ್ದ
ರಾ ಕುಮಾರಕರಱುವರಂ ನೋಡಿ ಜೀವವಿಡಿದಿರಲು ಪತಿಯಳಿವಂದಿನ |
ಆ ಕಾಲಕೊದವಿರ್ದ ಮೂಱುತಿಂಗಳ ಗರ್ಭ
ನೂಕಿತ್ತು ಬಳಿಕಧಿಕ ದಾರಿದ್ರ್ಯವಡಸಿತ್ತು
ಭೂಕಾಂತ ಕೇಳೈಯ್ಯ ಮೇಲೆ ಬಱಸಿಡಿಲಂತೆ ಬರ್ಪೆನ್ನ ಬಹುದುಃಖಮಂ || ೨೭

ಆಱು ಮಕ್ಕಳುಗಳೆಲ್ಲಂ ಮಡಿದರಯ್ಯ ಕೇ
ಳಾಱುತಿಂಗಳ ದಿನಕೆಯೊಱಲಿ ಬಾಯ್ವಿಡುತಿರ್ದೊ
ಡಾಱುವೊಗನ್ನಯ್ಯನೆನ್ನಯ ಕನಸಿನೊಳ್ ಬಂದು ತಿರುಕೊಳವಿನಾಚಿ ಕೇಳು |
ನೀಱನಹ ಸುಕುಮಾರನುದಯಿಪಂ ನಿನಗವಂ
ತೋ೨ಱು೨ಪಂ೨ ಮುಕ್ತಿಯಂ ಚಿಂತಿಸದಿರೆನಲು ನಲ
ವೇಱಿ ಬೆಸಲಾದೆನೀಪುತ್ರನಂ ನಿರ್ಮಲಚರಿತ್ರನಂ ಶುಭಗಾತ್ರನಂ || ೨೮

---

೧ ಬಾಳ್ವನೆಮ್ಮಯ ಮಿತ್ರ (ಉ) ೨ ಱುದಪ (ಅ), ಱುದಪಂ(ಈ)' ರುವಂ (ಉ).

ಕಡಲ ಮಧ್ಯದೊಳಾಣ್ಮನಳಿದ ಚಿಂತೆಯ ಧನಂ
ಗೆಡಲು ದಾರಿದ್ರ್ಯವಾದಳಲನಾ ಸುತರಾಜಿ
ಮಡಿದ ಬೇಗೆಯ೧ನು೧ ಮಱಿ೨ಸಿ೨ದನಾಗಿ ಶಂಕರನೆನಿಪ್ಪ ನಾಮವ೩ನೆ೩ ಕೊಟ್ಟು ।
ಕೊಡನೀರ ಪೊತ್ತು ಪೊರೆವವಳು ನಿನ್ನಯ ಕುವರ
ರಡರಿ ಬಿನದಿಪ ತುರಂಗದ ಕಾಲ್ಗೆ ಬಲಿಯಾಗಿ
ಪಡೆದೆನೇ ಮುದ್ದುಮಗನಂ ೪ಶಿವಾ ಎಂದೊಱಲುತಿರಲು೪ ಭೂಭುಜನೆಂದನು || ೨೯

ಮನುಚೋಳನರಿಸನೆ ರಥಾಂಗದಿಂ ಪಶು೫ವಧೆ೫ಯ
ತನಯನಂ ಕರವೂರಚೋಳನಿಭ೬ವಿಱಿ೬ದ೬ ಭ
ಕ್ತನಿಗೆ ತಲೆಗೊಡನೆ ಪಗಲ್ಚೋ*ಳನೀಯನೆ ಜಡದಲೆಗೆ ೭ತನ್ನ ಮು೭ಡಿದಲೆಯನು |
ಘನ ಭಕ್ತವಾತ್ಸಲ್ಯ ಭಕ್ತಾಂಗ ಸದ್ಭಕ್ತ
ಜನ ಶಿರೋರತ್ನವಣುಗನ ಮರಣವಕಟ! ಸು
ಮ್ಮನೆ ಪೋಗದಬಲೆಲ ಕೇ೮ಳೆಂ೮ದಾಗಲರಸಂ ಕುಮಾರರಂ ಬರವೇಳ್ದನು|| ೩೦



೧—(ಅ.ಆ.ಇ.ಉ.ಓ.ಗ) ೨+ಯಿಸಿ (ಅ.ಆ.ಇ.ಉ.ಓ.ಗ) ೩ ನು (ಆ.ಇ. ೪ ಶಿವಶಿವಾಯೆಂದೊಱಲೆ (ಉ), ಶಿವಶಿವಾಯೆಂದುವಱಲೆ ೫ ವ್ಯಥೆ (ಅ·ಇ) ೬ ವರಿದ (ಉ) ೭ ತನ್ನ(ಅ) ೮ ಪೇಳೆಂ (ಈ.ಗ)

## ೯. ಹೋ ಹೋ! ಶವಕನೋತಕಾ?

ನೈಜ ೧ ಕರಂವೀರದೆ ಕರೋಟಿಮಾಲಾಧರನ
ಪೂಜೆಯಂ ಮಾಡಿ ಪೊಱಮಟ್ಟು ಕುವರರು ನಡೆದು
ರಾಜಸಭೆಯಂ ಪೊಕ್ಕು ಕರಕಮಲಮಂ ಮುಗಿಯೆ ನೃಪನ ಹೃದಯದೊಳುಗ್ರದ
ಬೀಜವಗೆದೋಱುತಿರಲೇನಿರ್ಪೆ ೨ದುಷ್ಕೀರ್ತಿ೨
ಮೂಜಗವ ಪರ್ಬುವಂತೀ ಜವ್ವನದ ಸಿರಿಯ
ತೇಜದಿಂ ಶಿವಭಕ್ತನಂ ಕೊಂದಿರೆಂದು ಘುಡುಘುಡಿಸಿ ಬಳಿಕಿಂತೆಂದನು॥ ೧

ಚಿಲುಪಾಲಿನೊಳ್ ಬಿಸಂ ತವರಾಜನೊಳ್ ಕೈಪೆ
ಸುಲಲಿತ ಸುಮುತ್ತಿನೊಳು ಭಿನ್ನ ೩ವೊಪ್ಪುವಿ೪ ಗುಣಾ
ವಲಿಯಲ್ಲಿ ಲೋಭಳವೆಸದಿಹಳ ಸತ್ಯದೊಳಗನೃತವರೆವಿರಿದ ನಱುಗಂಪಿನ।
ಅಲರಿನೊಳು ಪುಳು ಶಿವಾಚಾರದೊಳು ದುರ್ನೀತಿ
ನೆಲಸಿದಂತೊಗೆದಿರ್ಪೆ ಮತ್ಕುಲದೊಳೆಂದರಸ
ನಲೆಯೆ ಮಣಿಮುಕುಟವಮ ಹೃದಯಕೋಪಾಗ್ನಿ ತಲೆದೋಱಿತೆನಲಿಂತೆಂದನು॥ ೨

ಚಾರು ಶಶಿಧರಭಕ್ತಪದನಖಂ ಪೋಪಲ್ಲಿ
ವಾರಿಜಭವಾಂಡಕೋಟಾಕೋಟಿ ಮಡಿವುದು ತು
ಷಾರಕಣಕೋಟಿಯಂಶಕೆ ಸಾಟಿಯಲ್ತು ಗಡ ನಿಮ್ಮಳಿವು ತನ್ಮರಣದ।
ಓರಗೆಯೆನಲ್ಕೆ ನರಕಂ ಪೋಗಿ೫ದಿಂದೀ೫ ಕು
ಮಾರಕನ ತುರುಗಖುರಹತಿಯಿಂದ ಕೊಂದಾತ
ನಾರೆಂಬ ಮಾತ್ರಕ್ಕೆ ಮಿತವಚನನಕ್ಕಱಿಂದುಸ್ಸುಸೊಡನಿಂತೆಂದನು॥ ೩

ಜೀಯ ನಾವಿರ್ವರುಂ ವೈಹಾಳಿಯಂ ಪೋಗಿ
ರಾಯರಾವುತರೊಡನೆ ಬರ್ಪೆಡೆಯೊಳೀಕ್ಷಿಸು
ತ್ತೀಯಣುಗನೆಡಪಿ ಬಿರ್ದೊಡೆ ದಾಂಟಿತನುಜನಶ್ವಂ ಮತ್ತುರಂಗಖುರದ।

---

೧ ಕರು (ಅ) ೨ಸತ್ಕೀರ್ತಿ (ಅ) ೩ ವುತ್ತಮ (ಅ.ಇ) ೪ ವೊಪ್ಪುವ (ಅ.ಇ);
೫ ಲಿಂದೀ (ಅ.ಆ.ಇ.ಉ.ಗ)

ಗಾಯದಿಂ ಮಡಿದನಂದಜಿ೧ ಬಂದು೨ದೆನಗಿಂದ೩
ಪಾಯವೆನ್ನಯ ತಲೆಯನರಿವುದೇ ಧರ್ಮವೆಂ
ದಾಯತಿಕೆಯಿಂ ಪ್ರಮಾಣಂದಪ್ಪದಾಡಿದಂ ಮಿತವಚನನಾ ಭೂಪಗೆ|| ೪

ಆವೊಡೀಪಳಿಗೆ ಮಿತವಚನನುತ್ತಮು ಶಿರ
ಚ್ಛೇದನಂ ಮಾಡಬೇಕೆಂದರಸ ನುಡಿಯಲಾ
ಹ್ಲಾದದಿಂ ಮಂತ್ರಲಕ್ಷಂ ತನ್ನ ಕರಕಮಲಮಂ ಮುಗಿದು ಬಿನ್ನವಿಸಿಸಂ|
ಆದರಿಸು ಬೊಪ್ಪಯ್ಯ ಯೆನಗೆಯಣ್ಣಂಗೆ ಸಂ
ಪಾದನೆಗಳುಂಟನೃತವೆನ್ನ ಜಿಹ್ವೆಗೆ ಪೊರ್ದೆ
ಭೂದೇವಿ೩ಯಂ೩ ೪ಬಿಟ್ಟಗಮ್ಮಿ್ರಯೆ೪ ನಾಂ ಭೋಗಿಯೆಂದು ಫಣಿಪತ್ತಿ.
ಮುಳಿಯನೆ||೫

ಭೂಪ ಚಿತ್ತೈಸಯ್ಯ ತಾಪಸರು ದಾರುವನ
ದಾ ಪವಿತ್ರಸ್ಥಲದೊಳೋಪ ತಮ್ಮಾಗಮಾ
ಲಾಪದಿಂ ತಿಳದಖಿಳಪಾಪಕ್ಕೆ ಪುಸಿಯೊಂದನೇ ಪರೀಕ್ಷಿಸಿ ತೂಗಲು|
ಆ ಪಾತಕಂಗಳಂ ತಾಂ ಪಳಿದುದನೃತವೆನ
ಲೇಪರಿಯ ತಪ್ಪವೆಂ ಹಾ! ಪರೇತಾಧಿಪ೫ತು
ಲಾ೫ಪಾದಪಾಲಂಬನಾಪಘನನಪ್ಪೆನೇ ಕಾಪಾಲಿಯೇ ಬಲ್ಲನು|| ೬

ಇಂದು ವೈಹಾಳಿಯಂ ಪೋಪಲ್ಲಿಯಣ್ಣ ನಿ
ನ್ನಿಂದ ಬಂದಪರಾಧವೆನ್ನದೆಂದಾಡಿದೆಂ
ಬಂದಹಿತವಾದ ತಪ್ಪೆನ್ನದಿದು ನಿಶ್ಚಯಂ ಶಿವ೬ಭಕ್ತಿ೬ಶರಧಿಯಪ್ಪ|
ಕಂದ ಶಂಕರನ ಶಿರಕ್ಕೆನ್ನ೭ರಿದ ತಲೆರನ್ನ೭
ದಿಂದ ಸತ್ಕರಿಸಬೇಕಯ್ಯ ಬೊಪ್ಪಯ್ಯ ನೀಂ
ಸಂದೆಗಂ ಮಾಡಲುನುಚಿತವೆನ್ನ ಮಸ್ತಕವ ಪಜ೮ದು ಪಳಿಗೀ೮ಯೆಂದನು೮|| ೭

---

೧ ವರಿ [ಅ] ೨ ದೆಂನಿಂದ [ಅ] ೩ಯೆಂ [ಅ] ೪ ಬಿಟ್ಟುಗಂಮಿಯೆ [ಉ], ಬಿಟ್ಟ ಗಮೀ೦ಯೆ [ಗ]. ೫ ಕುಲಾ [ಅ.ಇ], ಮಹಾ[ಅ], ಮಲಾ [ಈ.ಗ], ಮಾಲಾ [ಉ]. ೬ ಭಕ್ತ [ಅ.ಆ.ಇ.ಈ.ಉ.ಗ] ೭ ದಲೆಯ ರನ್ನ [ಅ] ೮ ಯೆನುತ್ತೆ [ಅ]' ಯೆನುತಾ [ಈ.ಉ.ಗ].

ಎಂದು ಕುವರಂ ಹರಣದಾಸೆಯಂ ಬಿಟ್ಟು ಧೃತಿ
ಯಿಂದಾಡೆ ಮನದೊಳಗೆ ಪರಿಣಮಿಸಿ ತಪ್ಪಿವಗೆ
ಬಂದುದಂ ತಿಳಿದು ಸತ್ಯೇಂದ್ರನುಜಿತಿ ತನ್ನ ಜೀವಸ್ವರೂಪದ ಮಂತ್ರಿಯು।
ಅಂದುಗ್ರದಿಂ ನೋಡುತಿವನ ತಲೆಯಂ ಪೊಡೆದು
ತಂದು ಪಳಿಗೀಯೆನೆ ಹಸಾದವೆನುತರಮನೆಯೊ
ಳಿಂದುಧರ ಪೂಜೆಯಂ ಮಾಡೆಂದು ಸುಕುಮಾರನಂ ಕಳುಪುತಾ ಸಚಿವನು ॥ ೮

ಕಳುಪಿ ಸುಕುಮಾರನಂ ಪತಿಮೋಹಿ ಸನ್ಮಂತ್ರಿ
ಗಳಗಳನೆ ನಡೆದು ತನ್ನಾಲಯಂಬೊಕ್ಕು ನಿ
ರ್ಮಳ ರಾಜಪುತ್ರನೇ ಕಟ್ಟೊಡೆಯನವನ ತಲೆಯರಿವುದಕೆ ಮುನ್ನಂ[1]ತಾನೆಂ।
ಅಳಿವೆನೆಂದೆನುತ ಸತ್ಯೇಂದ್ರನ ಮದೇಭ ನಿ
ರ್ಮಳ ಭಸಿತಗಾತ್ರನಲಗಂ ಪಿಡಿಯೊಳಳವಡಿಸಿ
ಥಳಥಳಿಸಿ ತನ್ನ ಕಂಠಕೆ ಹೂಣಿಸುತ್ತ ಶಿವಶಿವ ಕೊಱಿಯಲನುಗೈದನು ॥ ೯

ಬಿಡೆ ಚೋಳರಾಯನ ಶಿರಃಪ್ರಧಾನಂ ಶಿಖಿಯ
ಪಿಡಿದನೆರಡಿಲ್ಲದಿಹ ಪತಿಮೋಹಿಯೆಂಬಂತೆ
ಜಡಿದು [2]ಪೂಣಿಸಿ[2] ಖಡ್ಗದೊಳು ಘರಿಘರಿಘರಿಲನರಿದ[3]ನಾ[3] ಮಸ್ತಕವನು।
ಒಡೆಯನಾಜ್ಞೆಯ ಮೀಱಿದಾಣ್ಮನಣುಗನ ತಲೆಯ
ಕಡಿಯಲಾಱದೆ ಸತ್ಯಮಂ ಕು[4]ಜಿ[4]ತು ತನ್ನ ತಾಂ
ಮಡಿದನೈ ಮಝು ಭಾಪೆನುತ್ತ ಕೀರ್ತಿಸಿ ಮಱುಗುತಿರ್ದರೆಲ್ಲಾ ಸುಜನರು ॥ ೧೦

ಎಂದು ಸರ್ವರು ಉಮರುಗುಳತಿರಲಿತ್ತಲಿತ್ತಲೈ
ತಂದು ಚೋಳನ ಕುಮಾರಂ ಭಸಿತ ರುದ್ರಾಕ್ಷಿ
ಯಿಂದಲಂಕರಿಸಿ ಕಾಪಾಲಿಯಂ ಶೂಲಿಯಂ ದಕ್ಷಯಜ್ಞಾಪಹರನಂ।
ಹೆಂದದುತ್ಸಾಹದಿಂ ತಲ್ಲಿಂಗಮಂ ನೋಡಿ
ಕುಂದದಿಪ್ಪಷ್ಟವಿಧ ಪೂಜೆಯಂ ಮಾಡಿಯಾ
ನಂದದಿಂದೊಡವೆರಸಿ ಕೊಂಡಾಡಿದಂ ಮಂತ್ರಲಕ್ಷ [5]ಶಂಕರ ಪ್ರಪಕ್ಷ್ಯಂ[5] ॥ ೧೧

---

೧ ನಾನೆ [ಅ.ಆ.ಇ.ಈ.ಉ.ಗ]   ೨ ಪೂಣಿಸಿದ[3] [ಅ,ಆ.ಇ.ಉ.ಗ]   ೩ ನಿಜ [ಉ]
೪ ಪೊಗಳು [ಅ]   ೫ ಶಂಕರನ ಪ್ರಪಕ್ಷಂ [ಈ]

ಮಾದೇವನಂ ಕುವರನರ್ಚಿಸುತ ೧ಸನ್ನದ್ಧ೧
ನಾದ ಕಾಲದೊಳಿತ್ತಲರಸುಗುವರನ ಶಿರ
ಚ್ಛೇದನಂಗೆಯ್ಯಲಾಣತಿಯಿತ್ತ ವಾರ್ತೆಯಂ ಕೇಳ್ದು ಪರಿತಂದಮ್ಮನ।
ಪಾದಕ್ಕೆ ನಮಿಸಲಡಿಗಡಿಗೆ ಬರ ಸೆಳೆದ೨ಪ್ಪಿ೨
ಮೋದದಿಂ ಮೊಗನೋಡಿ ನುಡಿದನೆನ್ನಯ ಕೊರಲ್
೩ಕೊಯ್ದ್ದ೩ಡೆಯೊಳೆಯ್ದುವೆಡೆಯೊಳಗಮೃತವತಿ ತಾಯೆ ನಿನ್ನ ನಾನೇಂ
ಮಱಿವೆನೇ॥ ೧೨

ಹಿಂದಣುಗರಿಲ್ಲದಾಯಸವಟ್ಟು ಗುರುಕರುಣ
ದಿಂದೆನ್ನ ಪೆತ್ತು ಬಾಲ್ಯದ ಮುದ್ದು ನಱುಹರೆಯ
ದಿಂದೆಸೆವ ಸಿರಿಯ ನಡೆ ನೋಡಿ ದಣ್ಣನೆ ದಣಿವ ಕಾಲಮೊಳು ನುಡಿದಪ್ಪಿಗೆ।
ತಂದೆ ತಾನೇ ಕೊರಲ್ಗೊಯಿಸಿದಪನೆಂದು ನೀಂ
ನೊಂದೊಡೀ ಧರ್ಮವತಿ ಪಿತೃಪತಿಮಹೋಗ್ರನಿಂ
ಬೆಂದಂದಮಪ್ಪುದದಱಿಂ ಮಱುಗಬೇಡವೆಲೆ ತಾಯೆ ಚಿತ್ತೈಸೆಂದನು॥ ೧೩

ನುಡಿದ ಕುವರನ ತೆಗೆದು ತಕ್ಕೈಸಿ ಕೇಳೆನ್ನ
ಕಡವರವೆ ಚಿಂತೆಯೆನಗೇಕೆಯೆನ್ನಾಣ್ಮನು
ಗ್ಗಡದ ೪ಸತ್ಯವಳ ಕುಱಿತು ಭಕ್ತಂಗೆ ನಿನ್ನ ತಲೆಗೊಡುವೆಡೆಯೊಳೆನ್ನ ಚಿತ್ತಂ।
ಪಡೆದ ಕಂದ೫ನನಾ೫ಪ್ತರೊಡನೆ ತವರೂರ ತಾ
ಯೆಡೆಗಟ್ಟುವಂದವೈ ಪೆತ್ತವ್ವೆ ಪಾರ್ವತಿಯು
ತೊಡೆಯೇಱಿ ಮುದ್ದುಗೊಡು ಪೋಗೆಂದು ಬೀಳ್ಕೊಡು೬ವ ಮಾತೆಯೇಂ೬
ಕೃತ೭ಕೃತ್ಯಳೋ೭॥ ೧೪

ಮನಶುದ್ಧ೮ವಹ ನಿಂಬಿ೮ಯಕ್ಕನಂ ಹಾಸದಾ
ನನದ ಬಲ್ಲಯ್ಯಂಗಳರಸಿಯಂ ದೇಶ ದೇ
ಶನಿಕಾಯದೊಳ್ ವಿನುತ ಚೀಲಾಳನಮ್ಮನಂ ವನಿತೆಯ೯ಣ್ಣಲದೇವಿಯಂ।

---

೧ ಸಂನರ್ದ [ಅ.ಆ.ಇ.ಉ.ಗ], ಸನ್ನಾರ್ದ [ಈ] ೨ ಪ್ಪಿ (ಅ.ಈ.ಗ) ೩ ಕೊಯ್ಯೊ [ಅ.ಇ.ಈ. ೪ ಭಾಷೆಯ [ಆ] ೫ ರಾ [ಅ], ನರಾ [ಇ]. ೬ ವಮ್ಮನೇಂ [ಅ.ಇ. ೭ ಣ್ಯಳೋ [ಅ] ೮ ದಾ ನೆಂಬಿ [ಆ], ದಾ ಸಂಬಿ೭ [ಉ], ದಾ ನಿಂಬಿ [ಗ]

ತೆನೆವುತಿವರಾದಿಲಿಂಗಾರ್ಚನಾಶಕ್ತಿಯಿಂ।
ತೆನುಜರಳಿವಂ ಲೆಕ್ಕಿಸದ ಮಾಳ್ಕೆಯೇ ಮಂತ್ರ
ತೆನುತಮೃತವತಿಯೆ ಬೀಳ್ಕೊಟ್ಟಳಂದಾ ಕುಮಾರನ ಮೋಹನಾಕಾರನಾ ||　೧೫

ಸುತನಿಂತು ವಧ್ಯಸನ್ನದ್ಧನಾಗುತ್ತ ನಿಜ
ಬತಗೆಱಗಲಿವನ ತಲೆಯರಿವುವಕೆ ಮಂತ್ರಿಗಾ
ಖತಿಯಿತ್ತೆನೇಗೆಯ್ದನೆನೆ ಜೀಯ ನಿಮ್ಮಾಜ್ಞೆಯಂ ಮೀಱದೀ ಕುವರನ।
ಹತಿಸದೀಶ್ವರ ಪೂಜೆಗೆಯ್ದು ಬಹುದೆಂದು ಕಳು
ಫ್ರತ ಶೀಘ್ರಗತಿಯೊಳಾಲಯಕ್ಕೈದಿ ಕಂಧರ
ಕೃತಿ ಮುಳಿದು ನಿಜಮಸ್ತಕಂದಱಿದುಕೊಂಡಳಿದನವನೆಂದರಾ ಸಭ್ಯರು ||　೧೬

ಎಂದೊಡದಕೇನು ನಾವಿರ್ದಪೆವೆನುತ್ತಲ್ಲಿ
ಮುಂದಿರ್ದ ಸಂದಾಯಿಯೆಂಬ ಲೆಂಕನ ಮುಖವ
ನುಂದಹಾಸದಿ ನೋಡಿ ನೀನೀಗ ಮಂತ್ರಲಕ್ಷನ ಶಿರೋಬ್ಜವನು ಪಱಿದು।
ತಂದು ಶಂಕರನ ತಲೆಗೀವುದೈ ಪಳಿಯನಾ
ನಂದದಿಂದೆನೆ ಹಸಾದಂ ಜೀಯಯೆಂದು ನೃಪ
ನಂದನನ ತೋಳ್ಪಿಡಿದು ಜಡಿದು ಖಂಡೆಯದೊಡನೆ ನಡೆದನಾ ಹಾ
ಭೃತ್ಯನು ||　೧೭

ಪೇಳೆ ನರಮೃಗರಾಜಚರ್ಮಾಂಬರನ ಭಕ್ತ
ಚೋಳನಣುಗನ ತಲೆಯ ಹೊಡೆಯಲ್ಕೆ ಬೀದಿಯೊಳ್
ತೋಳ ಪಿಡಿದೊಯ್ವಾಗಳಜನ ಸಂಬಂಧ ಲಿಖಿತಪ್ರಮಾಣಿನ ಜೀವಿಯೇ।
ಆಲೋಚನದಿನಣ್ಣನಿಂ ಬಂದ ತಪ್ಪೆ ವೈ
ಹಾಳಿಯೊಳಗೆನ್ನದೆಂದಾಡಲಿಂತಾಯ್ತೆಂದು
ಗೋಳಿಟ್ಟು ಪುರಜನಂ ಪರಿಜನಂ ಶಿವಶಿವಾಯೆಂದು ಮಱುಗುತ್ತಿರ್ದರು ||　೧೮

ಬಱಿದೆ ಸೈಂಧವನೃಪಂ ಒರಲೇಕೆ ಸಭೆಯೊಳಿಳೆ
ಯೆಱತಿಯುಗಾಣ್ಕೆಗೆ ತುರಂಗಗಳೇಕೆ ವಸುಧೇಶ
ನೆಱಕದಿಂ ಕುವರರ್ಗೆ ಕುಡಲೇಕೆ ರಾಗದಿಂ ವೈಹಾಳಿಮೋಗಿ ಸೊಬಗ।

೧ ಸಹಿತ (ಅ.ಇ)　೨ ನಿಜ (ಅ.ಇ)

ಮೆಱೆವ ಕೋಟಲೆಯೇಕೆ ಜವ್ವನಿಗನಶ್ವದಿಂ
ಕಿಱುಗೂಸು ಮುಡಿಯುಂಲೇಕಾ ಬಸವರಾಜನೇ
ಯುಱುವನಿದಱಾದಿಯಂ ಕುವರಗಿಂತಾಯ್ತೆಂದು ಮಱುಗಿದರು ಸುಜನರ್ಕಳು ॥ ೧೮

ಐಸಱಿಂ ನಡೆದು ಬಹಿರುದ್ಯಾನದೊತ್ತಿನೊಳ
ಗಾಸುತಂ ತತ್ಪುರುಷಮೂರ್ತಿಯಂ ನೋಡಿ ಪ
ದ್ಮಾಸನದೊಳಾ ಪರಬ್ರಹ್ಮಮಂ ನೆನೆದು ಕುಳ್ಳಿರಲು ಸಂದಾಯಿ ಸಾರ್ದು ।
ಓಸರಿಸಿ ಕರವನವನಿಯೊಳುರ್ದಿ ೨ಖಂಡೆಯವ
ನಾಸುರದಿ೨ ಜಡಿದು ಹೆಡತಲೆಗೆ ಮೋಹಿಸುತ್ತಿತ್ತಿ
೩ಯಾಸುಭಟನಾರ್ದು೩ ಸುಕುಮಾರಂಗೆ ಬಿನ್ನೈಸುತಿರ್ದನೇಂ ಬಣ್ಣಿಸುವೆನು ॥ ೨೦

ದೇವ ಚಿತ್ತೈಸಯ್ಯ ಪರಮ ಪಂಚಾಕ್ಷರಿಯ
ನೀವು ಮಱೆಯದಿರಟ್ಟಿಯಿಂ ಪಱಿದು ತಲೆ ಬೀಳು
ವಾವೇಳೆಯವಧಾನವೇ ಲೇಹುದದುಳ ದೋಷಕರಿಪಂಚವದನವೆನಲು ।
ಆ ವಚನಮಂ ಕೇಳ್ದು ನಸುನಗುತಲೆಲವೊ ಕೇ
ಳ್ವೆ ವರ್ಣಪಂಚಕದ ಮಂತ್ರಮಂ ಮಱೆದಾದೊ
ಡೀ ವೇಳೆಯಾವು ನುಡಿವವರಲ್ಲವೆನೆ ಜೀಯ ನುಡಿಯದಿರಲೇಕೆಂದನು ॥ ೨೧

ಶ್ರೀಮಂತ್ರಿಯೆನ್ನ ಪಿತನಾಜ್ಞೆಯಂ ಮನ್ನಿಸದೆ
ತಾ ಮುಡಿದನಯ್ಯನಾಣತಿ ನಿನ್ನ ಲೆಂಕತನ
ವಾವಾಳ್ಕೆಯುಪ್ಪುದೆಂದುಚ್ಚರಿಸೆನೆನೆ ಜೀಯ ಹಾನಿಯೇಕಪ್ಪುದೆನ್ನ ।
ಸ್ವಾಮಿಯ ನಿರೂಪಕ್ಕೆ ಯೆನ್ನ ಭೃತ್ಯತೆಗೆಂದ
ನೀ ಮಂತ್ರವಖಿಳಮೂಲಸ್ತಂಭವಿಂತಿದಱ
ಸಾಮರ್ಥ್ಯದಿಂ ಖಡ್ಗಪುಟನೆಗೆವುದಲ್ಲದೊಡೆ ಪೂಮಾಲೆಯಪ್ಪುದೆಂದಾ ॥ ೨೨

ಆದೊಡೆಲೆ ಜೀಯುಯೆನ್ನೊಡೆಯನಾಜ್ಞೆಗೆ ಹಾನಿ
ಯಾದೊಡೇನೆನ್ನ ಭೃತ್ಯತೆ ಕೆಟ್ಟಡೇನಯ್ಯ
ಮಾದೇವನಂ ನೆನೆಯುವಕಟ ! ೫ಱುಗಾಯ೫ದಿಂ ನೀನಳಿಯಲೇಕೆಂದೆನೆ೫ ।

೧ ಲೇತಕೆ (ಅ.ಇ.ಉ) ೨ ಖಡ್ಗವ ನಿಲಾಸದಿ (ಅ.ಇ) ಯಾಸುರದೊಳಾಲ್ದು
(ಅ.ಇ.ಉ.ಗ) ೪ ಸರ್ಪವಧಾನ ಬೇಕದು (ಅ.ಇ) ೫ ದೊಳು ನೀನಳಿಯಲಹುದೆ
ಯೆನಲು (ಅ.ಇ)

ಗಾದೆ ಬೇಡಂತಾಗೆ ಮಂತ್ರಲಕ್ಷಕನಾಮು
ವಾದುದಂ ಕೈಯೊಡನೆ ತೋರ್ಪೆನೆನಗೊಂದರಿದೆ
ಭೇದವೇ ಹೊಯ್ದು ನೋಡೆನ್ನ ಸಾಮರ್ಥ್ಯಮಂ ಎಂದನಾ ಸಂದಾಯಿಯು॥ ೨೩

ಅದೆಯುದೆ ಮಹಾದೇವ! ಹೊಯ್ವನಾ ಹೊಯ್ದನ
ಗ್ಗದ ಚೆಲ್ವ ಕುವರನಂ ತಲೆ ಬಿದ್ದುದಯ್ಯಯ್ಯ
ಮದನಾರಿ ಕೈಯ ಪಿಡಿಪಿಡಿ ನಿನ್ನರೂಪುದೋ ಜಿಂದಗಜೆಯಾಗಸದೊಳು।
ಒದಜಿ **ಹೋ ಹೋ! ತವಕವೇತಕೌ** ಮುಂದೆ ಕಾ
ರ್ಯದ ನಿಸ್ಸೆಯುಂಟೆ ಬಲಿಯೆಂದು ಮಣಿಮಯ ವಿಮಾ
ನದೊಳಭವನಿರ್ದು ಸಂತೈಸೆ ಸಂದಾಯಿ ಖಡ್ಗವ ಜಡಿದು ಬೊಬ್ಬಿರಿವುತಾ॥ ೨೪

ಹರಹರ ಮಹಾದೇವ! ಹೊಡೆಯೆ ಕಂಧರವುರಿದು
ಶಿರವಂಬರಕ್ಕೆ ಪುಟನೆಗೆಯೆ ಕುಂಡಲಿಯ ಸಿರಿ
ಯುರಗನ ಫಣಾಮಣಿಪ್ರಭೆಯೊ ಹೃದ್ದೀಪಪ್ರಕಾಶವೋ ಎನಲಟ್ಟಿಯಿಂ।
ಸ್ಫುರಿಸೆ ರಕ್ತದ ಧಾರೆ ಪೊಣ್ಮೆ ಭೃತ್ಯಂ ವಾಮ
ಕರವನೊಡ್ಡಿದಡಲ್ಲಿ ಮಂಡಿಸುತೆ ಮಸ್ತಕಂ
ಭರದಿಂ ನಮಃಶಿವಾಯೆಂದು ಪಂಚಾಕ್ಷರಿಯನಡಿಗಡಿಗೆ ಬಿಡದೊದರಿತು॥ ೨೫

ಅರರೆ! ಹೊಡೆದೂರ್ಧ್ವಕೆಟ್ಟಾಯುಧಂ ಶಿವಪುರಕೆ
ಕರವಾಳಿನುತ್ತಲಾಗಸಲಕೆದ್ದು ಕೂಡೆ ಶಂ
ಕರನ ಪಳಿಗೆಂದಿಳಿದ ಮಸ್ತಕವನೆಡಗೈಯೊಳಾಂತು ದಕ್ಷಿಣ ಕರದೊಳು।
ಸ್ಫುರಿಪ ಖಂಡೆಯವಾಂತು ಪಂಚಾಕ್ಷರಿಯನೊದರು
ವರಿದ ತಲೆಯಂ ಕಂಡು ಪುರಜನಂ ಪರಿಜನಂ
ಶರಣೆಂದು ಮರುಗಿ ಕೀರ್ತಿಸುತಿರಲು ಸಂದಾಯಿ ನೃಪಸಭೆಗೆ ನಡೆತಂದನು॥ ೨೬

---

೧—(ಅ.ಇ.ಉ) ೨ ಬೇಗ ಪೊಡೆಪೊಡೆಯೆಂದನು (ಅ.ಇ.ಉ) ೩ ನಿಸ್ಫುರುಂಟೆ (ಅ.ಆ.ಇ.ಈ.ಉ.ಗ) ೪ ದಸು (ಅ.ಈ.ಗ) ೫ ಕಂದಂ ಹರಿದು (ಅ), ಕಂದರ ಹಱಿದು(ಅ.ಉ.ಗ.), ಕಂದರ ಹರಿದು (ಅ.ಇ) ೬ ತ (ಈ.ಉ.ಗ), ಪ (ಅ) ೭ ಖಡ್ಗ (ಅ.ಇ) ೮ ನುತ್ತಾಗಸ (ಅ), ನಲ್ಕಾಗಸ (ಉ). ೯ ನೃಪ ಸಭೆಗೆ ಬಂದನಾಹಾ ಭೃತ್ಯನು (ಈ.ಗ) ರಾಜಬೀದಿಯೊಳು ಬಂದನಾ ಭೃತ್ಯನು (ಉ)

# ೧೦. ಅಮ್ಮ ನಿನಗಾರ್ ಬದುಕಬೇಕು?

ಕರದೊಳ್ ನಮಶ್ಶಿವಾಯೆಂಬ ತಲೆಗಾಣುತಿರ್ದ*
ಬಿರಿದು [೧]ವಾದಿಗಳು ತಲ್ಲಣಿಸೆ [೨]ಭಾಪುರೆ ಭಾಪಿ
ದರಿದೆಂದು [೨]ಪುರಜನಂ ಪೊಗಳೆ [೩]ಹರಹರವು[೩]ಘೋ ಚಾಂಗು ಬೊಲ್ಲಿನೆ ಶರಣರು |
ಗಿರಿಜೆ ಗಣನಿಕರದಿಂ ಸುರದುಂದುಭಿ[೪]ಯು[೪] ಮೊಳಗ
ಲರಲ ಸರಿವಳೆಗಱೆಯಲುಜ್ಜುಗಿಸುವಮರರಿಂ
ಪರಮೇಶನಾಗಸದೊಳೀಕ್ಷಿಸುತ್ತಿರೆ ಸಭೆಗೆ ಬಂದನಾಹಾ ಭೃತ್ಯನು ॥ ೧

ಬಾಳುದಲೆ ಸಹಿತ ನಡೆತಂದು ಭೃತ್ಯಂ ಶಿರವ
ಚೋಳರಾಯನ ಬಲದಕೈಗೆ ಕುಡೆ ಸಂಸಾರ
ತೂಳದವಶಿಖಿಯೆನಿಪ ಕೇಶವಂ ಪಿಡಿದೆಡದ ಕರದೊಳಳವಡಿಸಿಕೊಂಡು |
ಕೇಳು ಸಂದಾಯಿ ಪಂಚಾಕ್ಷರಿಯೊಳಿವನಸುವ
ಮೇಳಸಿದ ನೀನವಱಿತೂಳಿಟ್ಟ ಮನದಿಂದ ಪಱಿ
ದೇಳುತ್ತ ಮಂತ್ರಲಕ್ಷನ ಮಸ್ತಕಂ ಜಪಿಸು[೫]ತಿದೆ[೫] ಪೊಡೆದ ಬಗೆವೇಳೆನೆ ॥ ೨

ಮೂದಲೆಯ ಮಾತಾದುದಿನ್ನೇನು [೬]ದೇವ ನೀ
ನಾದರಿಪುದೆನುತ ಕುವರನ[೬] ಕರೆದುಕೊಂಡು ತಾಂ
ಹೋದುದನವಂ ಕುಳಿತುದಂ ತನ್ನ ನುಡಿಯುನಾತ[೭]ನ ಮಾರ್ನುಡಿಯ ನಿಶ್ಚಯಾ[೭]|
ಭೇದಮಂ ತೋಱಿ ಸಂದಾಯಿ ಜೊಬ್ಬಿಡೆ ಸಭೆ ಮ
ಹಾದೇವಯೆನಲಾರ್ದು ತನ್ನ [೮]ತಲೆಯಂ ಹೊಡೆದು
ನಾದಿಸುತ ತನ್ನೆಡದ[೮] ಕೈಯೊಳಾನಲ್[೯] ಶಿರಂ ಪಂಚಾಕ್ಷರಿಯ
[೧೦]ನೊದಱಿತು[೧೦] ॥ ೩

೧ + ಪರ (ಆ.ಈ.ಉ.ಗ) ೨ ಭಾಪು ಭಾಪುರೆಯೆಂದು (ಆ.ಗ), ಭಾಪು ಭಾಪರಿದೆಂದು (ಈ) ೩ ಜಯಜಯತು (ಅ.ಇ) ೪ ಯು (ಅ.ಇ.ಉ.) ೫ ತಿರೆ (ಈ) ೬ ಚಿತ್ರೈಪು। ದೈ ದೇವಯೆನುತಾತನಂ (ಅ), ಚಿತ್ರೈಪು। ದೈ ದೇವಯೆನುತ ಕುವರನ (ಇ) ೭ ನಾಡಿಡೆ ನಿರ್ಣಯಾ (ಅ) ೮ ತಲೆಯಂ ತಾನೆ ಪೊಯ್ದುಡದ (ಅ.ಇ), ತಲೆಯಂ ಪೊಡೆದನದು ನಾದಿಸಲು ತನ್ನೆಡದ (ಉ) ೯ ಲ್ದು (ಅ.ಇ.ಈ.ಗ) ೧೦ ಘೋಷದಿಂದೊದಱಿತು (ಅ.ಇ)

ಕೆಡುಚೆಲ್ವ ಕುವರರನಂ ೧ಕೊಲಲಾಱದಾ ಮಂತ್ರಿ
ಮುಡಿದನ್ತೆ ಸಲೆಯರಸನಾಜ್ಞೆಯಂ ೨ಮೀಱಿದಂ೨
ನೊಡೆಯನ ನಿರೂಪದಿಂದಣುಗನಂ ತಲೆಯರಿದು ತನ್ನ ಶಿರಮಂ ಭೃತ್ಯನು।
ಪೊಡೆದುಕೊಂಡನು ಭಾಪೆನುತ್ತ ಸಭೆ ಕೊಂಡಾಡೆ
ನಡೆದಟ್ಟೆ ಮಸ್ತಕವ ನೃಪನ ಬಲಗೈಗೆ ಕೊ
ಟ್ಟೆಡೆಯೊಳಾವೇಶದಿಂ ಘೋಷದಿಂದುಚ್ಚರಿಸಿತಮಮ! ಪಂಚಾಕ್ಷರಿಯನು ॥ ೪

ನೋಡಿ ಕಲಿಭೃತ್ಯಶಿರಮಂ ಗಣೇಶ್ವರರ ಕೊ
ಡಾಡುವ ಕುಮಾರಮಸ್ತಕಮಂ ಮಹೇಶ್ವರಂ
ಗಾಡಿಯಿಂ ನುಡಿದನಂಗನೆ ನಿನ್ನ ಮಗನ ತಲೆಯೊಂದಕೆರಡೆಂದಿರಿಸಲು।
ರೂಢಿಸಿದ ಕಲಿಗಣೇಶ್ವರನಂದು ದೀಕ್ಷೆಯಂ
ಮಾಡಿ ಶಂಕರಗೊರೆದ ಕರ್ಣಮಂತ್ರಂಗಳಿಳೋಳಿ
ನಾಡೆ ಶಿವನೂರ ಸೂಱೆಯಕೊಳುವ ಸೂಚನೆಗಳೆನಲೆಸೆದುವಿಕ್ಕೆಲದೊಳು ॥ ೫

ಎರಡು ತಲೆ ನುಡಿವ ಮಂತ್ರಾಮೃತದಿಳನಲ್ಲಿಳ ಶಂ
ಕರನ ತಲೆಗಸು ಬಂದು ಪಂಚಾಕ್ಷರಿಯನೊದಱೆ
ಯರಸುತನವೇ ಚೋಳ ಎನ್ನವನ ತಲೆಗೆಣೆಯಲ್ತೆ ನಿನ್ನ ಮಗನ ರುಂಡ
ವರ ಭೃತ್ಯನೇ ನಿನಗೆ ಸಂದಾಯಿ ಮನ್ಮಹೇ
ಶ್ವರನವನ ತಲೆಗೆ ಪಳಿಯೆನ್ನ ತಲೆಯೆಂದರಿದು
ತಿರುಕೊಳವಿನಾಚಿ ಮಡಗಿದರೆ ಮುತ್ತಲೆಯೊಡನೆಯೊದಱಿತ್ತು ಶಿವಮಂತ್ರವಾ ॥ ೬

ಆ ನಾರಿ ಭಕ್ತಂಗೆ ತಲೆಗೊಡಲು ಬೋಧೆಯಿದು
ತಾನೆನಗೆ ೫ತಲೆ೫ಯಿೂವೆನೆಂದು ತರಿಸಲ್ಕಾ ಪ್ರ
ಧಾನಿಯ ಶಿರಕ್ಕೆಯಸು ೯ಬಂದು೯ ನಾಲ್ದೆಸೆಗೆ ಕಳಸಂ ನಾಲ್ಕು ತಲೆ ನಡುವಣ।
ಜ್ಞಾನಿ ಶಂಕರನ ತಲೆ ಗುರುಕಳಶವೆನ್ನ ತಲೆ
೭ಯಿೂ೭ ನವ್ಯಕಳಶಲಕ್ಕೆಲ ಕಾಣ್ಕೆಯೆಂದಾ ಚೋಳ
ಭೂನಾಥನರಿದಿರಿಸಿದಂ ಮಂತ್ರದುಚ್ಚರಣೆ ಸಹಿತ ನಿಜಮಸ್ತಕವನು ॥ ೭

---

೧ ಕೊಲ್ಲಲಾಱದೆ (ಅ.ಇ)　೨ ಮೀಱಿದೇಂ (ಈ), ಮನ್ನಿಸದೆ (ಉ)　ಳಿನೆ (ಅ)
೪ ನಾಗ (ಅ.ಇ)　೫ ಪಳಿ (ಅ.ಇ)　೬ ಪೊದವೆ (ಅ.ಇ)　೭ ಯೋ (ಅ.ಇ.ಗ)　೮—(ಅ.ಇ)
೯ ದಹೋ (ಅ.ಇ)

ಆಱು ತಲೆಗಳ ಕಂಡು ಮಿತವಚನನಕ್ಕಟಾ
ನೀಱನಂ ಕೊಂದವಂ ನಾಂ ಮಂತ್ರಲಕ್ಷಂಗೆ
ದೂಱು ಬಯಲಿಂಗಾಯ್ತು ಲೋಕಕ್ಕೆ ೧ಅತಿಂಹಿತವನಪ್ಪ ಸತ್ಯೇಂದ್ರನಣುಗಂ।
ಬೇಱುಳಿಯೆ೨ನಿನಿಬರ್ಗೆ೨ ಎನ್ನ ಹರಣವನಿಂದು
ಮಾಱುವೆನೆನುತ್ತ ತನ್ನಯ ೩ಕೊರಲ೩ನರಿದು ನಲ
ವೇಱಿ ಪಂಚಾಕ್ಷರಿಯ ಘನಘೋಷಸಹಿತ ನಿಜಮಸ್ತಕವ ತಂದಿರಿಸಿದಾ ॥ ೮

ಹರನೊಡನೆ ಶಂಕರನ ಮನವೊಂದುತಲೆ ಮಂತ್ರಿ
ವರನ ಸುಮಹೀಶನಿತ್ತಲೆ ಮಂತ್ರಲಕ್ಷನೀ
ಶ್ವರನ ಕೈಲಾಸಮಂ ಮುತ್ತಲೇ ಸಂದಾಯಿ ನಿಱುತನಾಗುತಲೆ ಶಿವನಾ।
ತಿರುಕೊಳವಿನಾಚಿಯೈದುತಲೆ ಸತ್ಯದ ಸುಖವ
ನರಸನುಱೆ ಒಯಸಿ ಬಾಯಾಱುತಲೆ ಮಿತವಚನ
ನುರು ಚಿದಂಬುಧಿಯಲ್ಲಿ ಮುಳುಗುತೇಳುತಲೆ ನಿಶ್ಚೈಸಿ ತಲೆಗಳ ಕೊಟ್ಟರು ॥ ೯

ರಾಣಿಯಂತಃಪುರದೊಳಿರ್ದು ಕೇಳ್ದಳು ಪಳಿಗೆ
ಗೋಣನರಿಪವರೆನಿಬರೆನೆ ತಾಯೆ ಚಿತ್ತೈಸು
ಮೇಣು ಶಂಕರಗೆ ನಿನ್ನಣುಗನವರಮ್ಮಂಗೆ ಸಂದಾಯಿ ಪತಿವೋಹಿಗೆ।
ಕ್ಷೋಣೀಶ್ವರನ ಪಱಿದ ತಲೆ ಸಮದೊಳಿರ್ದಪುವು
ಕಾಣೆವಾ ಮಿತವಚನಮಸ್ತಕಕ್ಕೆಣೆಯನೆಂ
ದೇಣನಯನೆಯರು ಶಶಿಮುಖದಮೃತವತಿಗೆ ಬಿನ್ನವಿಸಲು ೪ಯಥಾಸ್ಥಿತಿಯನುಳ ॥೧೦

ಏಳು ತಲೆಗಳ ಬಗೆಯ ಕೇಳುತಲೆ ನಡೆತರು
ತ್ತೇಳು ತಲೆಗಳ ಕಾಣುತಾಳುತಲೆ ಸಂತಸದೊ
ಳೇಳು ತಲೆಗಳು ಕುಳಿರ್ಕೊಳುತಲೆ ಬರ್ದಿನಿಂಪೇಳುತಲೆ ಚಿತ್ಕಾಂತಿಯ।
ಆಳುತಲೆ ಮೆಱೆವುತಿರಲೇಳುತಲೆ ಮಂತ್ರಮಂ
ಪೇಳುತಲೆ ಬೋಧಿಸುತ್ತೇಳು ತಲೆ ರಾಜಿಸಲು
ಬಾಳುತಲೆಯೆನಲೊಪ್ಪುವೇಳು ತಲೆಗಳ ಗುಣವನೀಳುತಲೆ ಸತಿ ೫ನಿಂವಳು೫ ॥ ೧೧

---

೧ ಪತಿ(ಅ.ಆ.ಇ.ಉ.ಓ.ಗ) ೨ ನಿವದಿರಿಗೆ (ಅ.ಇ) ೩ ತಲೆಯ (ಅ.ಈ.ಗ)
೪ ಯಥಾಕ್ರಮವನು(ಅ.ಇ) ೫ ಯೆಂದಳು (ಉ)

ಲೋಕವಱಿವಂತೆ ಸತ್ಯೇಂದ್ರಚೋಳನ ರಾಣಿ
ಯಿಾಕೆ ಮಿತವಚನನ ಶಿರಕ್ಕೆ ಪಳಿಗೊಡದಿರ್ದ
ಳೇಕೆನ್ನರೇ ಶರಣರೆಂದು ನಿಶ್ಚೈಸಿ ಖಡ್ಗವ ಪಿಡಿದು ಜಡಿದು [೧]ನಿಂದು[೧] ।
ಶ್ರೀಕಂಠನೊಡನೆ ಚಂಡಿಕೆ ಭೂಪನುನ್ನತಿಯ
ನೇಕಾಂತವಂ ಮಾಡಲೆಳಸಿದಳೊ ಮುಕ್ತಿಯ ಮ
ಹಾ ಕವಾಟದ ಬೀಯಗದ ಕಯ್ಯೊ ಎನಲಮೃತವತಿ ಕೊರಲ್ಗಮರಿಸುತ್ತಾ ॥ ೧೨

ವೀರದ ಪಗಲ್ಚೋಳ ಭೂರಮಣ ನಿಜಲಿಂಗ
[೨]ಧೀರ[೨] ಚಿಕ್ಕಯ್ಯ ಸುಕುಮಾರ ಚೀಲಾಳ ಗಂ
ಭೀರದಪ್ಪಣ್ಣಂಗಳಾ ರಾಮತಂದೆ ಜಂಬೂರ ಮಾಕಾಳದೇವಂ ।
ಸಾರ ಗೋವಿಂದ ಭಟ್ಟಾರಕರ ಶಿವಕ್ಷೀರ
ಧಾರಾಭಿಷೇಕದಾಚಾರ ಬಂಕಣ್ಣಗ
ಳಾರಮ್ಯವಹ ಪಾದಸಾರಸಂಗಳ ನೆನವುತಾ ರಾಣಿ ಶಿವನ ಭಜಿಸಿ ॥ ೧೩

ಪಱಿದಿರ್ದ ಕಂಠಸರವಂ ಪಡೆವ ಗುಣಿ ಕೊರ
ಲ್ಗೊಱೆಯುತಿರೆ ಕ್ರೈವಿಡಿಷಿಮುಕ ಕೆಂಜೆಡೆಯ ಪೆಱೆಸಿಯ ಬಾಂ
ದೊಱೆದಲೆಯ ಸರ್ಪಕುಂಡಲದ ಪಣೆಗಣ್ಣ ಪೊಸಬಿಸಗೊರಲ ಪಂಚಮುಖದ।
ಮೆಱೆವರ್ಧದೇಹದಗಜೆಯ ಗಜಾಜಿನವಸನ
ದುಱುವ ದಶಭುಜದ[೩]ಡಿಯ ಪುಲಿದೊವಲ ತೊಡವಿನೊ
ಳ್ಳೆಱಕದಾಯುಧದ ಕಾಲ್ಗಣ್ಣ ನಂದಿಯುನೇಱಿದಭವಂ ಪ್ರಸನ್ನನಾದಂ ॥ ೧೪

ಕೋಟಿಕಾಮರ [೪]ಗೆಲ್ವ[೪] ಶಂಭು ಮುಕ್ತ್ಯಂಗನೆಯ
ಬೇಟದವರಿಗೆ ಕುಸುಮಶರಗಳಂ ಕಱಿಸಿನಂತೆ
ಮೀಟಪ್ಪ ಶರಣರಿವದಿರು ಫಲಂಗಳ ಬಗೆಸರಲ್ಲ ಪುಷ್ಪಂಗಳಿಪ್ಪ ।
ಕೋಟಲೆಗಳೇಕೆ ಕೈಲಾಸನೊಳಗೆಂದು ಗಣ
ಕೂಟಂಗಳೆಯ್ದೆ ಚೆಲ್ಲಿದರೊ ಪೇಳೆನಲು ಶಶಿ
ಜೂಟಪ್ರಸನ್ನಕಾಲದೊಳು ಸುರದುಂದುಭಿಗಳೊದಱೆ ಪೂಮಳೆಗಱೆ[೫]ದುವು[೫] ॥ ೧೫

---

೧ ಬಳಿಕಾ (ಅ.ಇ) ೨ ಧರ (ಅ) ೩ ದ (ಅ.ಇ) ೪ ಪಳಿವ (ಅ.ಇ.) ೫ ದರು (ಅ)

ಶ್ರೀ ನಂದಿನಾಥ ಭೃಂಗಿರಿಟಿ ವೀರೇಶ್ವರ ಮ
ಹಾನಂದಮುಖ್ಯ ಸತ್ಪ್ರಮಥರಿಂದಧಿಕ ರು
ದ್ರಾನೀಕದಿಂ ಪುರಾತನವರ್ಗದಿಂ ಸಿದ್ಧಸಾಧ್ಯರ ವಿಲಾಸದಿಂದಾ।
ತಾನೊಪ್ಪುತಿರ್ಪ ಸರ್ವೇಶ್ವರಂ ಸದ್ಭಕ್ತ
ಮಾನಿನಿಗೆ ಧರ್ಮಸಾಲೋಕ್ಯಾದಿಗಳೊಳಿಷ್ಟ
ಮೇನನಾದೊಡೆ ಕೊಡುವ ಕಾರುಣ್ಯದೇಳ್ಗೆಯಿಂ ಸವಿ೧ನುಡಿಯೊ೧ಳಿಂತೆಂದನು ॥ ೧೬

ಸತಿ ಕೇಳು ನಾವಿನಿಬರೊಳಗೊರ್ವನಸುವಿಗಾ
ಣತಿಯಿತ್ತೆವಮ್ಮ ನಿನಗಾರ್ ಬದುಕಬೇಕೆನಲು
ಪತಿಪುತ್ರಮುಖ್ಯರಳಿದಿರ್ದುದಂ ಲೆಕ್ಕಿಸದೆ ತಿರುಕೊಳವಿನಾಚಿಯಾತ್ಮ।
ಸುತ ಶಂಕರಂಗೆ ಹರಣವನೀಯೆ ದೇವ ನಮ
ಗತಿಶಯದ ಸುಖವಲಾ ಭಕ್ತಸಂತೋಷದು
ನ್ನತಿ ನಿಮ್ಮನಲ್ಲದೆಳಸೆವು ನಮಗೆ ಭೋಗಮೋಕ್ಷಗಳ ನಿಮ್ಮಡಿಯೆ ಸಾಕ್ಷಿ॥ ೧೭

ಎಂದ ವನಿತೆಯ ನುಡಿಗೆ ಪರಿಣಮಿಸಿ ಮೊದಲಾತ
ನಿಂದಿನಿಬರಳಿಯಬೇಕಾಯ್ತುವಂ ಬರ್ಪ*ಕೆ ಮೇ
ಣ್ಪಿಂದೇಳ್ವರಿವರೆಣಿಸು ನೀನಬಲೆಯೆನಲು ಶಂಕರನ ತಲೆಮೊದಲುಗೊಂಡು।
ಒಂದೆರಡು ಮೂಱು ನಾಲ್ಕೈದಾಱು ಕೂಡಲೇ
ಳೆಂದ ಮಾತ್ರದೊಳೇಳಲುಜ್ಜುಗಿಸೆ ಬಳಿಕ ಭೋ
ರೆಂದುಲಿವ ದೇವವಾದ್ಯಂ ಶರಣತತಿ ಜಯಜಯಧ್ವಾನಗಳ್ ಮೆಱೆದುವು॥ ೧೮

ಅಲ್ಲಲ್ಲಿ ೨ಬಿರ್ದಟ್ಟಿಗಳು ನೋಡೆ೧ ತಮತಮಗೆ
ಯುಲ್ಲಾಸದಿಂ ಬಂದು ತಲೆಗಳಂ ಕೈಯೆರಡ
ಱಲ್ಲಿ ಪಿಡಿದೆತ್ತಿ ನಿಜದೇಹದೇವಾಲಯದ ಹೃದಯಾಬ್ಜಪೀಠದೊಳಗೆ।
ಸಲ್ಲಲಿತ ಸತ್ಪ್ರಾಣಲಿಂಗಮಂ ಬೈತು ಸ
ತ್ಫುಲ್ಲದ ಶಿರಃಕಮಲಕೋಹಳೆಯಮರ್ಚಿದಂ
ತೆಲ್ಲರು ಮಹಾಮಸ್ತಕಂಬಡೆಯೆ ಗಣತತಿಯುಘೇಯೆಂದು ಕೀರ್ತಿಸಿದರು॥ ೧೯

೧ ನಯದೊ (ಅ.ಇ) ೨ ಬಿರ್ದಿದ್ದ ಮುಂಡಗಳು (ಅ.ಇ)

ಧರೆಗೆಸೆವ ಶಂಕರಂ ಸುಗುಣವಾರಿಧಿ ಮಂತ್ರಿ
ಯುರುದೋಷವನವಹ್ನಿ ಮಂತ್ರಲಕ್ಷ್ಮಂ ಭುವಿಯ
ಹರಣ ಸಂದಾಯಿ ಚಿದ್ವ್ಯೋಮ ಸತ್ಯೇಂದ್ರಚೋಳಂ ಚಂದ್ರವದನೆಯಪ್ಪಾ।
ತಿರುಕೊಳವಿನಾಚಿ ರವಿಕುಲದೀಪ ಮಿತವಚನ
೧ಪರಮಾತ್ಮವಂಮೃತವತಿಯುರು ಕೂಡಿ ಸಾಷ್ಟಾಂಗ
ವೆರಸಿ ದಂಡಪ್ರಣಾಮುವ ಮಾಡಿ ಕೀರ್ತಿಸುತ್ತಿದ್ದರು ಮಹಾದೇವನಾ॥ ೨೦

ಜಯಜಯ ಗಿರೀಶ ಜಯಜಯ ಕೃಷ್ಣಗಳತೇಜ
ಜಯ ರುದ್ರದೋರ್ದಂಡ ಜಯ ಸುಚಿದ್ಘನಪಿಂಡ
ಜಯಜಯ ಜಗದ್ಗುರುವೆ ಜಯಜಯಪರಾತ್ಪರವೆ ಜಯ೨ಸರ್ವಭವನೆ೨ ಶಿವನೆ।
ಜಯ ಮೃಡ ಮಹಾರಕ್ಷ ಜಯ ಹರ ಲಲಾಟಾಕ್ಷ
ಜಯ ಶಕ್ತಿನಿಜರೂಪ ದೇಶಿಕಾಲಾಪ
ಜಯ ಪಂಚಕೃತ್ಯಸಂಸ್ತುತ್ಯಯೆಂದಂ ಚೋಳರಾಯ ನೈರ್ಮಲ್ಯಕಾಯ॥ ೨೧

ಅನಿತಕ್ಕೆ ನವರತ್ನಖಚಿತ ಪುಷ್ಪಕವೆಂಟು
ಕನಕಮಯ ಕೋಟಿಸೂರ್ಯಪ್ರಕಾಶಂಗಳಿಂ
ಘನಮಾರ್ಗದಿಂ೩ದಿಳಿದು ಬಂದೊ೩ಡವಱಿ೪ೊಳಗೆಯೋರೊರ್ವರಂ ಕುಳ್ಳಿರಿಸುತೆ।
ವಿನುತ ದಿಕ್ಪಾಲಕರ ಮಣಿಮುಕುಟಗಳೊ ಕದ್ರು
ವಿನ ಮಕ್ಕಳಷ್ಟಕುಲ೪ಭೋಗಿ೪ಗಳ ತಲೆರನ್ನ
ವೆನಲುಚಿತ೫ವಲ್ಲೆಂಬ ಬೆಳಗಿಂದುಘೇ೫ ಎನಲು ನೆಗೆದುವಾಗಸವಟ್ಟೆಗೆ॥ ೨೨

ದೇವದುಂದುಭಿ ಮೊಳಗೆ ಗಿರಿಜೆಯು ಪಯೋಧರಂ
ತಾವೊಡನೆ ತೊರೆಯೆ ತದಪಾಂಗದೊಳ್ ಮಿಂಚೆ ಕುಸು
ಮಾವಳಿಯ ವೃಷ್ಟಿಗಳ್ ಕಱಿ೬ಯೆ ಮುನ್ನೆಲ್ಲರರಿದೆನೆ ಬೆಳೆದ ಫಲದೊಟ್ಟಿಲ।
ಶೀವಿ೬ಮಣಿರಥ೬ದೊಳಗವಶ್ಯದಿಂದಾರಂಭ
ದಾವಿಭುವೆನಿಪ್ಪ ಶಿವನಾಲಯಕೆ ಕೊಂಡೊಯ್ವ
ಭಾವದಿಂ ಸರ್ವಲೋಕಂ ನಮಿಸೆ ಪುಷ್ಪಕಂ ಬಂದುವಾ ಕೈಲಾಸಕೆ॥ ೨೩

---

೧ ಪರಮಾತ್ಮಯು (ಅ.ಇ). ಪರಮಾತ್ಮೆಯು(ಆ.ಈ.ಉ.ಒ.ಓ.ಗ) ೨ ಸಾರ್ವಭೌಮ(ಅ.ಇ)
೩ ಬಂದು ನಿಂದ (ಅ.ಇ) ೪ ಸಾಗ (ಅ.ಇ) ೫ ವಲ್ಲಂಬರವ ಬೆಳಗೆವುಘೇ (ಆ.ಗ)
೬ ಯಣಿಯುರ (ಅ)

ಬಂದು ನಂದೀಶ್ವರನ ಬಾಗಿಲೊಳು ಧರ್ಮವತಿ
ಯಿಂದಲೇಳ್ತಂದವರು ಪುಷ್ಪಕಂಗಳನಿಳಿದು
ಮುಂದೆಯ್ದಿ ಸಿಂಹಾಸನಾಸೀನನಾದ ಸರ್ವೇಶ್ವರನ ಸಭೆಯ ಪೊಕ್ಕು ।
ನಿಂದೆಂಟು ನಿಷ್ಠುರಂ ತೆಗೆದು ಬಿಗಿಯಪ್ಪುತಾ
ನಂದಿಸುತ ನಂದೀಶ ಭೃಂಗಿರಿಟಿ ವೀರಗಣ
ವೃಂದಕ್ಕೆ ಅಮರಗುಂಡದ ಮಲ್ಲಿಕಾರ್ಜುನಂ ತೋಱಿ ಪೊಗಳುತಿರ್ದನು ॥ ೨೪

ಶಿತಿಕಂಠಭಕ್ತ ಶಂಕರನಶ್ವದಿಂ ಮಡಿದ
ಕತದಿಂದ ಸಂದಾಯಿ ಪತಿಮೋಹಿ ಮಿತಿವಚನ
ರತಿನಿಷ್ಠೆಯಿಂ ಮಡಿಯೆ ಪಳಿಗೆ ಪಳಿಯಾ ಮಂತ್ರಲಕ್ಷ ತಿರುಕೊಳವಿನಾಚಿ ।
ನುತಚೋಳರರಿದ ತಲೆ ಪಂಚಾಕ್ಷರಿಯನೊದಱಿ
ಮೃತವಾಗುವಮೃತವತಿಗೊಲಿದು ಬೇಡೆಸಲಾಪ್ತ
ತತಿಯುಳಿದು ನನ್ನವನ ಬಯಸಿದಳ್ ನೋಡಿವರ ಗಣನಿಕರವೆಂದನಭವಾ ॥ ೧೫

ನೋಡಯ್ಯ ನಂದೀಶ ಧರ್ಮವತಿಯಾಣ್ಮನಂ
ನೋಡು ಭೃಂಗೀಶ ಪತಿಮೋಹಿಯಂ ವೀರೇಶ
ನೋಡು ಸಂದಾಯಿಯಂ ಮಿತವಚನನಂ ಮಂತ್ರಲಕ್ಷನಂ ಶಂಕರನನು ।
ನೋಡಿ ಗಣಪಸ್ಕಂದರುಪಮನ್ಯುಗಳು ನೀವು
ನೋಡಿ ತಿರುಕೊಳವಿನಾಚಿಯಮೃತವತಿಯ ಕೊಂ
ಡಾಡಿರೇ ಗಂಗೆ ಗೌರಿಯರೆಂದು ತೋಱಿ ವೈಭವದಿಂದ ಶಿವನೊಪ್ಪಿದಂ ॥ ೨೬

ಬಾಣಗುಣವಾರ್ಧಿವಿಧು ಸಂದ ಶಕವರ್ಷದಿಂ[೨]
[೩]ಮೇಣಮಲಶವತ್ಸರಂ ಶ್ರೀಮುಖಂ ಕಾರ್ತಿಕ ಧು
ರೀಣವಹ ಶುದ್ಧ ಸಪ್ತಮಿ ಶುಕ್ರವಾರವಾ ಶ್ರವಣನಕ್ಷತ್ರದಲ್ಲಿ ।
[೪]ಜಾಣಿನಂ ನಾಗಲಿಂಗಯ್ಯಗಳ ಸುತ ಶಿವ
ಪ್ರಾಣಿ ಗಂಗಪ್ಪನಣುಗಂಳ ಚೇರಮಾಂಕಗ
ಕ್ಷೀಣವೆನೆ ಮಲ್ಲಣಾರ್ಯಂ ನಿರೂಪಿಸಿದನೀ ಭಾವಚಿಂತಾರತ್ನಮಂ ॥ ೨೭

---

೧ ನ (ಅ.ಇ.ಉ) ೨ ದೊಳ್ (ಅ) ೩ ಮೇಣು ಸಂ (ಅ.ಇ) ೪ ಜಾಣನಾ ನಾಗ ಲಿಂಗಾಹ್ವಯನ ಸುತ ಶಿವ। ಪ್ರಾಣಿ ಲಿಂಗಪ್ಪನಾತ್ಮಜ (ಅ.ಈ.ಉ.ಓ.ಗ)

ಶ್ರೀಮುಖಾಬ್ದದೊಳಿದು ಸಮಾಪ್ತಿಯಾಯಿತ್ತಿದಂ
ಪ್ರೇಮದಿಂದೋದಿದೊಡೆ ಭಾವಂಮುಂ[೧] ಪ್ರಾಜ್ಞರ ಮ
ಹಾಮನಸ್ಸಿಂಗೀವ ಧಾತುಲಕ್ಷಣಗಳುಂಟೀಶ್ವರಂ ಬಹುಧಾನ್ಯ[೨]ದ[೨] ।
ಸಾಮಗ್ರ ಧನ ರಾಜ್ಯ[೩]ವೈಭವಂಗಳ ಜನ[೩]
[೪]ಸ್ತೋಮಕ್ಕೆ[೪] ತಾಂ ಶತಾಯುರ್ವೈಪ್ರುರುಷವಚ
ಪ್ರಾಮಾಣ್ಯದಾಯುವಂ ಭಕ್ತಿಯಂ ಮುಕ್ತಿಯಂ ಕೊಡುವನಗಜಾರಮಣನು ॥ ೨೮

ಶರಣರ ಕೃಪಾಮೃತದ ವರುಷದೊಳಗಿಳೆಯಲ್ಲಿ
ಸುರಭಿಗಳ್ ಕಱೆಯಲಿ ಶಿವಪ್ರಸಾದೇಚ್ಛಕರ
ಕರುಣದೆ ಸುಭಿಕ್ಷಂಗಳಾಗಲಿ ಸಮಸ್ತಜನವಖಿಳ ಸುಖದಿಂ ಬಾಳಲಿ ।
ವರ ನೃಪರು ಧರ್ಮ ಶಿವಭಕ್ತಿಯಿಂದಾಳಲು
ರ್ವರೆಯಲ್ಲಿ ಭಾವಚಿಂತಾರತ್ನವಿನಚಂದ್ರ
ರಿರುವತನಕೆಲ್ಲಾ ಮಹೇಶ್ವರರು ಲಾಲಿಸಲಿ ಪಾಲಿಸಲಿ ಕೊಂಡಾಡಲಿ ॥ ೨೯

ಇದು ಸಕಲ ಭಕ್ತಪದಪಂಕೇಜರೇಣುವ
ಸ್ತದ ಮಲ್ಲಣಾರ್ಯನಾ ಚೇರಮಾಂಕಂಗೆ[೫]ಬೆಸ
ಸಿದ ಭಕ್ತ[೫]ಸತ್ಯೇಂದ್ರಚೋಳಕೃತಿ ಭಾವಚಿಂತಾರತ್ನವಮಳ ಕರ್ಣ ।
ಹೃದಯ ಮಸ್ತಕ ವದನ ಸರ್ವಾಂಗಸೌಖ್ಯಕಾ
ಸ್ಪದವಖಿಳ [೬]ಸುಜನರ್ಗೆ[೬] ಪಂಚಾಕ್ಷರಿಯ ಮಹ
ತ್ವದ ಬೋಧೆಯೆಂದೊಡೋದಿದ ಕೇಳಿದರಿಗಿಷ್ಟ ಸಿದ್ಧಿ ಸರ್ವರಿಗಪ್ಪುದು ॥ ೩೦



---

೧ ಮುಂ (ಅ.ಇ), ನಂ (ಈ) ೨ ವಾ (ಅ.ಆ.ಇ) ೩ ದಾದಿ ವೈಭವಗಳಂ (ಅ.ಇ)
೪ ಮಹಿಮರಿಗೆ (ಅ.ಇ) ೫ ಪೇಳಿದ ಭಕ್ತ (ಅ ಇ.ಗ), ಬೆಸಸಿದ ಕಾವ್ಯ (ಒ.ಓ)
೬ ಸಜ್ಜನರ್ (ಅ), ಸಜ್ಜನರ್ಗೆ (ಈ), ಭಕ್ತರ್ಗೆ (ಗ)

# ಅನುಬಂಧ

## ಭಾವಚಿಂತಾರತ್ನ ಸಂಗ್ರಹದಲ್ಲಿ ಬಿಟ್ಟಿರುವ ಪದ್ಯಗಳು

☞ ಮುಂದಿರುವ ಪದ್ಯಸಂಖ್ಯೆಯು ಸಂಗ್ರಹದಲ್ಲಿನ ಆಯಾ ಸಂಖ್ಯೆಯ ಹಿಂದೆ ಬರುವ ಪದ್ಯ ಅಥವಾ ಪದ್ಯಗಳನ್ನು ಸೂಚಿಸುವುದು. ಉದಾಹರಣೆಗೆ ಪಲ್ಲವಿಯ ಮುಂದಿರುವ ೧-೧ ಎಂಬುದರಲ್ಲಿ ಮೊದಲನೆಯ ಸಂಖ್ಯೆ ಸಂಗ್ರಹದ (೧) ಸಂಧಿಯನ್ನೂ ಎರಡನೆಯ ಸಂಖ್ಯೆ ಆ ಸಂಧಿಯ ಯಾವ ಪದ್ಯದ (೧) ಹಿಂದೆ ಈ ಪದ್ಯವಿದೆ ಎಂಬುದನ್ನು ಸೂಚಿಸುತ್ತದೆ. ಮೂಲದಲ್ಲಿರುವಂತೆ ಪದ್ಯಗಳೂ ಸಂಧಿಗಳೂ ಇಲ್ಲಿ ಕ್ರಮವಾಗಿವೆ.

### ಒಂದನೆಯ ಸಂಧಿ

ಪಲ್ಲವಿ|| ಶ್ರೀ ವಿಮಲಗುಹನವುರಗುಂಡಮಲ್ಲೇಶ್ವರನ
ಸೇವಾ ನಿಮಿತ್ತದಿಂದಿಳೆಯೊಳೊಗೆದಾ ಪ್ರಣವ
ಜೀವಪಂಚಾಕ್ಷರಿಯ ಬಿತ್ತರಿಸಿದಂ ಕುಲಚ್ಚಾಱಿಯಗಾನಂದದಿಂದೆ || ೧-೧

ಥಗ್ರತ್ಯಧೀಶೋಷನೋಗ್ರದಾಂತಿಷ್ಟದೇಂ
ದುಗ್ರಹಪ ಜವಗಸಖದೃಗ್ರಮೇಶೇಕ್ಷಣ ಪ
ರಿಗ್ರಹಿತ ಪಜ್ಜನ್ಮರುಗ್ರುದ್ರಭರ್ಗ ಬಹುದಿಗ್ರಮಣ ಪವಸುನಾಟ್ಯಾ|
ವ್ಯಾಗ್ರೋದನಾಪಹೋದಗ್ರಮ್ಯುತುಂಡ ಸ
ಮ್ಯಗ್ರುಗ್ವಿಶೇಷಜಿತ ವಿಗ್ರಹಾಷ್ಟಿವ್ರಜ
ಪ್ರಗ್ರಚಿತ ವರಚಿತ್ಸಮಗ್ರ ಜಯತಮರಗುಂಡಾಗ್ರೋದವಸಿತ ಸರ್ವಾ†|| ೧-೧

ನೆಟ್ಟನಾ ಧರ್ಮಾರ್ಥ ಕಾಮಮೋಕ್ಷಂಗಳಂ
ಮೆಟ್ಟಿ ಹರಿಯಜರಿಂದ್ರ ಪದವನೊದೆದಾವಗಂ
ನಿಟ್ಟವಧಿ ವಿಧಿಗಳ ಶಿರೋಮಧ್ಯದೊಳ್ನಿಂದು ಬಿನದಿಸುತ್ತಿಳ್ಪಱಿಂದೆ||
ಪಟ್ಟಿರ್ಪ ನಾಲ್ಕುಮೂಱಿರಡಡಿಗಳಿಂದಲಳ
ವಟ್ಟ ನಂದೀಶ ಭೃಂಗೀಶ ವೀರೇಶರೆ
ಬ್ಬಟ್ಟುಗೀ೧ಕೃತಿಯ ನವರಸದ ವಿಘ್ನವಂಮತಿಯ ಕೊಟ್ಟು ರಕ್ಷಿಪುದಳ್ತಿಯಿಂ ||೧-೪

---

೧ ಕೃತಿಗೆ ಬಹ ನವರಸದ ನಿರ್ವಿಘ್ನ (ಓ),...—ನವರಸದಲ್ಲಿ (ಅ)

† ಅ.ಆ. ಮೊದಲಾದ ಎಲ್ಲ ಪ್ರತಿಗಳಲ್ಲಿಯೂ ಈ ಪದ್ಯವಿದೆ.

ಹರಿಯನಭವಂಗೆ ವಂದನೆಗೆಯಿಸಿ ಶಿಖಿಯನಂ
ಬರದಲ್ಲಿ ಕಟ್ಟೆಯೂರ್ಧ್ವಾಕ್ಷಿಗಳ ಪಡೆವ ನಿ
ಷ್ಠುರ ೧ವಕ್ರ ಮಂದ ತೀವ್ರದ೧ ದುರ್ಗುಣಗಳ ವೈಷ್ಣವ ವಿಪ್ರ ಜೈನರೆಂಬಾ ||
ವರ ವಾತ ಪಿತ್ತ ದುಶ್ಲೇಷ್ಮಮಂ ಕೆಡಿಸಿ ಶಂ
ಕರಲೆಂಕ ಮಂಚಣ್ಣ ಶ್ರೀಪತೀಶ್ವರದೇವ
೨ಗುರು೨ ಮಲ್ಲಿಕಾರ್ಜುನ೩ನಂ೩ ಪಂಡಿತತ್ರಯವಾದರೆಮ್ಮಭವರೋಗಗಳಿಗೆ||

ಧರೆಯ ರಕ್ಷಿಸೆ ವೃದ್ಧೆ ಸುಗ್ಗಲೆಯೊಳುದಿಸಿ ಸಿರಿ
ಗಿರಿಯ ಲಿಂಗಂಗಳಂ ಸೊನ್ನಲಿಗೆಯೊಳು ನಿಲಿಸಿ
ಕರುಣದಿಂ ಗಂಧರ್ವರಂ ಸಲಹಿ ವಿಷದಿವ್ಯಗಳ ಗೆಲಿವಧೋದ್ವೈತ್ಯೆಯಾ ||
ಪೊರೆದು ಖರ್ಪರನ ಗೆಲಿದಿಱಿದು ಸಿಡಿಲಂ ತೆಗೆದು
ನರಕಿಗಳನಿತ್ಯಾದಿ ಬಹು ಮಹಿಮೆಯಂ ತಳೆದ
ಗುರುಸಿದ್ಧರಾಮ ನವರಸಸಿದ್ಧ ನೀ೪ನೆಮ್ಮ೪ ಕೃತಿಗೆ ಕೊಡು ನಿರ್ವಿಘ್ನಮಂ||

ಕಾಮಿತಾರ್ಥಾಮೃತರಸಾದಿ ಲಕ್ಷಣ ಸೌಮ್ಯ
ರಾಮಣೀಯಕ ಪದಾಲಂಕಾರಗಳ್ಗೆ ನಿಜ
ಸೀಮೆಯೆನಿಸುವ ಸ್ವೈಪನೀ ಕೃತಿಗೆ ಕೊಡುವ ಚಿಂತಾರತ್ನಮೆನಿಪ ಪುಣ್ಯ|
ನಾಮನಂ ಸದ್ಗುಣಸ್ತೋಮನಂ ಬುಧ ಸಾರ್ವ
ಭೌಮನಂ ಸಜ್ಜನಪ್ರೇಮನಂ ಶೀಲ ವಿ
ಶ್ರಾಮನಂ ಪಾಲ್ಕುಱಿಕೆ ಸೋಮನಂ ಹೃತ್ಕುಮುದಧಾಮದೊಳ್ ಮಿಗೆ ಜ಼ಾನಿಪೆಂ ||

ಪರಮಸುಖವಾಸನಂ ವರ ಕಾಳಿದಾಸನಂ
ಕರದಾನಿ ಜಾಣನಂ ಶರಣನಹ ಬಾಣನಂ
ನಿರುಪಮ ವಿಚಾರನಂ ಗರುವ ಮಾಯೂರನಂ ಪದ್ಮರಸನಂ ಸುರಸನಂ
ಹರಿಹರ ಕವೀಶನಂ ಗುರುಭಕ್ತಿಕೋಶನಂ
ಹರನ ಕಣ್ಕೈವ್ಯೆಗಳಾಗಿ ತನುಮನವಿತ್ತ
ಪರಿಣತರ ನೆನೆದು ಕೃತಿವೇಳಲಿನಗೈಪೊಗಂ ನಿರ್ವಿಘ್ನತೆಯನೀಯನೆ ||

---

೧ ತೀವ್ರ ಮಂದವ (ಅ) ೨ ನುರು(ಈ.ಗ), ರುಮ(ಅ) ೩ ನ ಸು (ಅ)
೪ ಗೆಂಮ್ಮ (ಅ.ಆ.ಇ ಈ.ಗ) ನಮ್ಮ (ಬ)

ಸೀನಾರು ಗೂಳೂರ ಶಾಂತದೇವರ ಕೀರ್ತಿ
ಮಾನಿನಿ ೧ಯದೇಂ೧ಬಂದೆಯಾನಥೋಧರೆ೨ಗಿಳಿಯು೨
ತಾ ನಾಲಗೆಗಳೆರತನಳ್ಳ ಜೀವಪೊರ್ದಿ ಮಂಡಲಾಗ್ರದ ಗೋತ್ರದಾ|
ಸ್ಥಾನಮಂ ಸಾರ್ದಗ್ನಿಮುಖರ ಗೇಹಂಬೊಕ್ಕೊ
ಡಾ ಸೈಜ ವಚನಾಭಯಪ್ರದಂ ಸ್ಮೇರಾಂಬು
ಜಾನನಂ ನೂಂಕೆ ಶಾಂತಿಯನುಳ್ಳ ನಿನ್ನೆಡೆಗೆ ಬಂದೆ ಕೇಳೆಲೆ ಚಂದ್ರಮಾ ||

ಶರಣಹೃತ್ಕುಮುದಹಿಮಕಿರಣ ಕಾತ್ಯಾಯಿನೀ
ಹರಣ ಶುಭಕರಗಣಾವರಣ ನಿರುಪಮ ಕೃಪಾ
ಭರಣ ಹರಿಯಜನವಿನುತಚರಣನಂ ಮನ ಭಾವ ಕರಣದೊಳ್ಪುದಿಡಾವಗಂ|
ಕರವಲರ್ಚಿಸುತೊಡವೆರೆದ ನೋಟದ ಪರಾ
ತ್ಪರದರ್ಥದರ್ಥಿಗಳ ಪೊರೆದ ವರಗುಮ್ಮಳಾ
ಪುರದ ಶಾಂತೇಶಗುರುವರದನಡಿವಳಿದು ನಾನೊರೆದ ಕೃತಿ ಮೆಱೆವುದರಿದೆ||೧–೫

ಭೂನುತವೃಷಾಧಿಪನ ಸದ್ಭಾಗ್ಯವೀ ವರ್ತ
ಮಾನಪೊಳ್ ಷಟ್ಸ್ಥಲಾಂಗವ ತಳೆದು ದಶದಿಗ್ವಿ
ತಾನದೊಳ್ ಸತ್ಕೀರ್ತಿಯಾಂತಿಂದ್ರಿಯಾದಿ ವಾಯುಪ್ರಾಣಿಯಲ್ಲದನಘ|
ಧ್ಯಾನಮಂ ೩ಸಂತತ ವಿಮಾನಮಂ೩ ಶರಣ ಸಂ
ತಾನಮಂ ಶಂಕರಸ್ಥಾನಮಂ ದಿವ್ಯ ಸ
ನ್ಮಾನಮಂ ಚಿಕ್ಕಬಸವಾಂಕ೪ನಮಲಕ್ರಿಯಾ೪ಜ್ಞಾನಮಂ ಪೊಗಳಲಳವೆ || ೧-೭

ಅನುವು ಚಂದ್ರನ ಕಂಡು ವಾರ್ಧಿ ವೈವೆರ್ಚುಗುಂ
ಹಿಮಕಾಂತ ಕರಗುಗುಮದೇಕೆ ಗಾಂಭೀರ್ಯ ಹ್ಯ
ದ್ವಿಮಲಂಗಳ೫ಪ್ಪುದಱ೫ಸಂತೆನ್ನ೫ ಕಬ್ಬದಿಂದಲ್ತೆ ಸಜ್ಜನರಿಗಕ್ಕಂ|
ಕುಮತಿ ದುರ್ಜನರು ಪರಿಣಮಿಸದಿರಲೇನಾಯ್ತು
ಕಮಲಾರಿ ಪೂರ್ಣತೆಯೊಳೊಗೆಯೆ ಕಾಣುತ್ತೆ೬ಕ
ರ್ದಮ ಜಲದ೬ಪೆಂಚೆ೭ಕಗ್ಗಲ್ಲುಗಳ್ಪೆರ್ಚಿ ಕರಗದೊಡೆ ಶಶಿಗದು ಹಾನಿಯೇ||

---

೧ ಯಿದೇಂ [ಇ.ಒ.ಗ] ೨ ಗೆಯ್ದಿ [ಅ.ಒ.ಓ] ೩ ಸಂತತಾಮಾನಮಂ [ಅ.ಆ.ಇ.ಈ.ಉ.ಒ.ಓ.ಗ] ೪ ನ ಲಸತ್ಕ್ರಿಯಾ [ಆ.ಈ.ಉ], ನ ಲಸತ್ಕೀರ್ತಿಯಾ [ಇ.ಒ.ಓ], ನಂ ಸತ್ಕ್ರಿಯಾ [ಗ] ೫ ಪ್ಪುದರಿವಂತೆನ್ನ [ಒ], ಪ್ಪುವದರಂತೆಂನ [ಈ] ಪ್ಪುದದರಂತೆಂನ್ನ [ಗ] ೬ ಕರ್ದಮದ ಜಲ [ಅ] ೭ ಪೆಂಚೆ [ಈ]

ಕ್ಷಳ ಱಳ ಕುಳಾಕ್ಷರ ಸಮಾಸ ತದ್ಧಿತ ಸಂಧಿ
ಗಳುಮಪಭ್ರಂಶಾವ್ಯಯಾಖ್ಯಾತ ಭೇದಗಳ
ತಿಳಿದು ಯತಿಭಂಗಾರ್ಥಶೂನ್ಯ ಪುನರುಕ್ತ್ಯರ್ಥನೇಮಂನ್ನೆರಸಂಮುಖ್ಯವಾ।
ಕಳೆದಲಂಕಾರ ಚಿತ್ರಾರ್ಥ ರಸಭಾವವೆ
ಗ್ಗಳಿಸೆ ತಿದ್ದುವುದು ಶಿವಭಕ್ತರಹ ^೧ಕವಿಗಳುಂ
ಖಳ^೨ದುರ್ಜನವ್ರಾತ ಘೂಕರವಿಗಳು ಶಿವನ ಕಿವಿವಾಂಯ್ಗೆ ನೆಱೆ ಸವಿಗಳೂ॥
ರಸಜೀವ ಸೂತ್ರಾರ್ಥ ನಿರ್ದೋಷ ನೆಲೆಯಾದ
ಪೊಸರನ್ನಮಂ ಚಿನ್ನಬೇಗಡಂಗಳೆದು ಸೇ
ರಿಸೆ ಹಾರಕಲ್ಲಿ ಛಿದ್ರಂಗಂಡೆವೆಂಬೊಲಿಂತೀ ಕಾವ್ಯರತ್ನದಲ್ಲಿ।
ಒಸೆದು ಮಾಡುವ ಲಕ್ಷಣೋಕ್ತಿಯಱಿಯದೆ ಕುಜನ
ವಿಸರವಿರದೊಳ್ದು ತಪ್ಪಂ ಕಂಡವೆಂದು ಗ
ರ್ವಿಸುವರೇಕದೆ ಗುಣಕೆ ಕಾರಣಂ ಹೃದಯಭೂಷಣವೆಂದು ನೆಱೆ ನಂಬದೆ॥೧-೧೦
೩ಪಸುರ್ವ*ರಲ್ಗಳ ಭಾಗ್ಯ೩ವೆನಿಪ ಸುರತರುಗಳಿಂ
ಶಶಿಕಾಂತದಱೆಗಳಿಂ ಕೆಂಗದಿರ್ಗ*ಳಂ ಕಱೆವ
ಮಿಸುಪ ಚಿಂತಾರತ್ನಶಿಖರಿಗಳ ಬಿಣ್ಪಿನಿಂ ಕನಕಪಂಕಜ ಸರಸಿಯ।
ವಿಸರದಿಂ ಕರ್ನೆಯ್ದಿಲಿಂ ಮೆಱೆವ ಡೊಣೆಗಳಿಂ
ದೆಸೆದತ್ತು ಪಂಚವರ್ಣಮೆ ರಸನೆಯಾದ ತಾ
ಪಸಳಜನಾಖಿಲರಳ ಸುಖರಸದಾಲವಾಲವಾಹಾ ಭಾಪು ರಜತಶೈಲಾ॥
ಪೂವಿಲ್ಲ ಗಡ ತನಗೆ ಕುಸುಮಶರನೆಂಬ ಪೆಸ
ರಾವ ಕಾರಣ೫ವಾದುದಱಳಿಯೆರ್ದೆ*ಯನಾಗಿ ಲೋ
ಕಾವಳಿಯ ಗೆಲ್ದ ಬಗೆಯೆಂತು ಪೆಣ್ಮಕ್ಕಳಂ ಕೊಂಮು ಕೂಗಿಡುವ ತನಗೆ।
ಕಾವನೆಂದೆಂಬ ಪೆಸರೇಂ ಮೆಯ್ಯಱಿಯ ಬಾರ
ದಾ ವಿಗಡನವಿಚಾರದಿಂ ೬ಭಂಗಬಟ್ಟವಂ೬
ಗಾವಳ್ಕಿವೆಂದು ಮಾರನ ಜಱೆದು ತಪವಿರ್ದರಲ್ಲಿ ವರ ಸನ್ಮುನಿಗಳು॥ ೨-೪

---

೧ ನೀರಸ [ಇ.ಈ,ಗ], ನೀರಸಸ[ಅ.ಉ,ಒ.ಓ] ೨ ಕವಿಗಳುತ್ತಮ[ಅ.ಇ], ...ತ್ತಮರು [ಈ.ಉ.ಒ.ಓ], ಕವಿಗಳು ಖಳರು [ಗ] ೩ ಪಸುರ್ವರಲಿನಧಿವೈವ [ಅ.ಇ], ಶಶಿಗಲ್ಲಳೀಳ್ಗೆ ಯಿಂ [ಅ.ಈ. ಉ.ಒ.ಓ ಗ] ೪ ಜನಾಖೇಲ [ಅ.ಈ.ಉ.ಒ]. ಜನಕೆಲ್ಲ [ಓ], ಜನಾಶ್ಶೈಲ[ಗ] ೫ ಬಂದುದು [ಅ.ಇ.] ೬ ಲಜ್ಜೆಗೆಟ್ಟವಂ [ಅ.ಈ.ಉ.ಒ.ಓ.ಗ].

ವೇದಪುರುಷರ ಮಂತ್ರದೇವತೆಗಳತಿ ಪುಣ್ಯ
ನಾದಮೂರ್ತಿಗಳ ಲಿಂಗೇಂದ್ರಿಯರ ಸಂತತಂ
ಸಾದರ ಗುಣಾಂಕಿತರ ಷಟ್ಸ್ಥಲಬ್ರಹ್ಮಿಗಳ ಪಾವನಗೃಹಂಗಳಿಂದೆ।
ಶ್ರೀದಿವ್ಯರತ್ನದುಪ್ಪರಿಗೆ ಧವಳಾರಗಳ
ಬೀದಿಗಳ ಚೆಲ್ವಿನಿಂದೆಸೆವ ಪುರಮಧ್ಯದೊಳ್
ಮಾದೇವನರಮನೆ ಬೆಡಂಗಾಗಿ ಮೆಱೆ[೩]ದುದದಱೊಪ್ಪವನದೇಂ ವರ್ಣಿಪೆಂ॥

ನಾಲ್ವಂಕ[೧]ದರ ಬೇದಗಳ್[೧] ನೆಲಂ ಜೊನ್ನ ವೈ
ಗಲ್ವೊದಕೆ [೨]ಜಗಲಿ[೨] ಮೂಱಾಱು ರನ್ನಂಗಳ್ಕೆ
ಕಿಲ್ವೆಟ್ಟ ನಣ[೩]ಗಿಗೆಡದೊಡಲನಿತ್ತಲ್ಲಿ ಮಂಡಿಸಿದ ಶಂಕರನಕ್ಕ್ತಿಯಿಂ।
ಸೊಲ್ವೆಣ್ಣ ನಾಣ್ಮನಮರ್ದು*ಣಿಯರೆಱೆಯಂ ಕರ್ವು
ವಿಲ್ವೊತ್ತನಯ್ಯ ಮೊದಲಾದ ಸಗ್ಗಿಗರೆಯ್ದೆ
ಸಾಲ್ವಿಡಿದು ನಿಂದೋಲಗಂ[೩]ಪಳಚ್ಚನೆ[೩]ಮೆಱೆದ[೩]ದಯ್ಯಯ್ಯ ಸೈಪದೆಂತೊ॥ ೨-೫

ಶಶಿಯಿಂದೆ ಮೆಱೆವ ತುಂಬುರು ನಾರದರ್ಕ್ಕಳಿಂ
ದೆಸವ ಶಕ್ತಿತ್ರಯಗಳಿಂದೆ ವೇದಂಗಳಿಂ
ಮಿಸುಪ ಸನಕಾದಿ ಯೋಗೀಶರಿಂ ಷಡ್ಗುಣದ ಸಿರಿಗಳಿಂ ಮಾತೃಕೆಯರಿಂ।
ವಸುಗಳಿಂ ಬ್ರಹ್ಮರಿಂದಧಿಕ ವಿಶ್ವೇದೇವ
ವಿಸರದಿಂ ರುದ್ರರಿಂ ರವಿಗಳಿಂ ಶರಣ ತೇ
ರಸರಡಿಯನೋಲೈಸುತಿರ್ಪ ಮನುವರ್ಗದಿಂದಭವನೋಲಗವೆಸೆದುದು॥

ಶೂಲಿಯಿದಿರೊಳ್ನಿಲದೆ ಕೆಲಸಾರು ಮಾಧವ ಕ
ಪಾಲಿಯ ಸಭಾಂತರದೊಳುಲಿಯದಿರು ಕಮಲಭವ
ಕಾಲಕಂಧರನ ಮುಂಬಿನೊಳುಡುಗಿ ಗರ್ವಗಳನಿಂದ್ರಾದಿಸುರರು ರುಂಡ।
ಮಾಲಿಯಾಸ್ಥಾನದೊಳ್ ಭಯುಳವುಳಿಯದಿರಿಯಸುರ
ಜಾಲವೆಂದಾಜ್ಞೆಗೆಯ್ದೆಸೆದರಾ ನಂದಿ ಮಾ
ಕಾಲರುಜಱ ಕರವೇತ್ರ[೪]ಲೀಲ[೪]ರೆವ್ಮೊಡೆಯನ ವಿಶಾಲ ದೊಡ್ಡೋಲಗದೊಳು ೨-೬

೧ ಧರಭೇದಗಳ [ಉ.ಒ] ...ಬೇದಗಳ [ಓ] ...ಭೇದಗಳ್ [ಅ.ಈ.ಗ] ೨ ಜವಲಿ [ಅ.ಆ.ಈ.ಉ.ಒ.ಓ.ಗ], ಜವತಿ [ಇ] ೩ ಪಳಂಚನೆ [ಅ.ಇ.ಈ.ಉ.ಒ.ಓ.ಗ] ೪ ವಳಿ[ಆ]
೫ ಧಾರ [ಆ.ಓ]

ಕಡುಲೋಭವೆಡೆಗೊಂಡು ಗತಿಗೆಟ್ಟು ಶ್ರುತಿಯಿಲ್ಲ
ದಡಸಿಯಣಲೊಳ್ಪಿಸಮನೀ ದೋಷಮಂ ಕಳೆಯೆ
ಮೃಡನ ಕರ್ಣದ್ವಯದ ಮೂಲಂಗಳಂ ಸಾರ್ದು ಸಲೆತೊಟ್ಟು ಸವೆಯದಿರ್ಪ।
ಹೆಡೆಗೆ ರನ್ನಂಬಡೆದು ಭುಜ ಪರಾಕ್ರಮದಿಂದೆ
ನಡೆದು ವಿವರಿಗಳಾಗಿಯಮರ್ದ*ನುಂಬವರಿಗಿ
ಮ್ಮಡಿ ಜಿಹ್ವೆಯೆನಿಸಿಯಶ್ವತಕಂಬಲರು ಶಿವನ ಹಾಡಿ ಹರಸುತ್ತಿರ್ದರು॥ ೨-೭

೧ಪೆಱೆದಲೆಯ೧ನಾಳ್ಗಳಗ್ಗದ ೨ಬಗ್ಗೊ೨ ಸಿರಿವೆಣ್ಣ
ನೆಱೆ ತಳೆದ ಬಿಸಜಗಳೊ ೩ತುೞಿಲ್ತ*ಯುತಿಹರ೩ ಕಣ್
ಪಱಮೆಗಳಿಗುಣಿಸೀವ ಪೊಂದಾವರೆಗಳೊ ಮೇಣ್ ಜತಿಕುವರಳರಸುವೆನಿಸುವ೪ಳ।
ಮಱ೪ಯಂಚೆವಿಂಡಾಡುವಲರ್ವ*ನ೫ವೊ ಪೇಳೆನಲ್೫
ಮೆಱೆವ ಪೃಥ್ವಿಯ ಮಹತ್ತಿನ ಪಾದಪದ್ಮಂಗ
ಳುಱೆ ಬಿಡದೆ ನೆಲಸುಗೆನ್ನೆರ್ದೆ*೬ಗೊಳನೊಳೊಳ್ಜಾನ ನಱುಗಂಪನುಱೆ೬
ಬೀಱುತೆ॥ †೧೦-೩೩

## ಎರಡನೆಯ ಸಂಧಿ

ಪಲ್ಲವಿ॥ ಪಾವನಚರಿತ್ರನುತ್ತಮ ಕಲ್ಪವೃಕ್ಷನೀ
ಭೂವಿನುತ ಸತ್ಯೇಂದ್ರಚೋಳ ಧರಣೀಶ್ವರಂ
ದೇವದೇವನ ಚರಣಸೇವೆಯಿಂ ಸುಖದಿಂದೆ ರಾಜ್ಯವಾಳುತ್ತಿರ್ದನು॥

ನೇವಣದ ಫಣಿಯ ಪೆಡೆವರಲ್ಗ*೭ಳೊಳ್ ೭ಮಾರ್ಪೊಳೆವ
ಸಾವಿರ ನಿಜಾಂಗದಬಲೆಯರ೭ ಸವತಿಯರಂಮ
ದೇವ ನಿಮ್ಮಂಪೊಯ್ವಬಗೆಯಲವು ೮ಕರನೆತ್ತಲಾಗಿ ಇವರಿಂದಲೆನ್ನಳ।
ಈ ವಿಧಿಗೆ ೯ವಲ್ಲಭಂ ತಂದನೆನುತರ್ಂ ಮುಳಿಯೆ
೧೦ಪಾವ೧೦ ತೆಗೆದಾ ರಸಾತಳಕಿಟ್ಟು ಪೋದರಾ
ಭಾವಕಿಯರೆಂದಗಜೆಯಂ ತಿಳಿಪಿದನುರಗುಂಡದ ಮಲ್ಲಿನಾಥ ಶರಣು॥ ೩-೧

---

೧ ಕಱೆಗೊರಲ (ಅ.ಇ) ೨ ಬಗ್ಗ (ಅ.ಆ.ಇ.ಈ.ಉ.ಒ.ಗ) ಬೋಗ್ಗೊ(ಓ) ೩ ನಮಿತಜನದ(ಅ.ಈ.ಒ.ಓ.ಗ) ೪ ರೆಸೆವ ಜೀವಾ (ಅ.ಇ) ೫ ವೆನಲ್ಕೆ ವಿಗೆ (ಅ.ಇ) ೬ ಯಗೊಳವೊಳು ಜಾನನಱುಗಂಪಮಂ (ಉ.ಒ.ಓ.) ೭ +ಪೊಳೆವ ವನಿತಾವಳಿ ಸಹಸ್ರವಂ ಕಂಡು (ಅ.ಈ.ಉ.ಒ.ಓ.ಗ) ೮ ಕರವೆತ್ತಿ ಕಾಣುತಿವರಿಂದಮೆನ್ನಾ (ಈ.ಉ.ಒ.ಓ),ಕರವೆತ್ತ...(ಗ) ೯ ಯರಸ ತಂದಪನೆಂದು (ಅ.ಇ.) ೧೦ ಪೆರ್ವಾವ (ಅ.ಇ)

†ಪ್ರತಿ ಸಂಧಿಯ ಕಡೆಯಲ್ಲಿ ಸಂಗ್ರಹದ ೧೦—೩೩ನೆಯ ಪದ್ಯವಿದೆ.

ನರಕಬಂಧಂಗಳೆಂಬುವು ಕೊಳುಗುಳಂಗಳೊಳು
ಪರಿಕಿಸಲಿಕಿಟ್ಟಯೇಂಜಿನ ಮಾತು ಭೂಜಂಕರಿ
ತುರಗಂಗಳೊಳು ದೇಹಿ ನಾಸ್ತಿ ೨ಶಬ್ದಗಳು ವನಿತಾಜನದ ಮಧ್ಯದಲ್ಲಿ।
ಅರಿಯೆಂಬ ನುಡಿ ಕೆಯ್ಗಳೊಳು ನುಡಿದು ತಪ್ಪುವುದು
ಗರುಡಿಯೊಳಗಱ ಮೊಱಗಳೆಂಬ ನುಡಿ ನಾಡೆ ಭೂ
ಧರ ಕುಲಂಗಳೊಳಿದಿರುದಲೆವಾತು ಕನ್ನಡಿಯೊಳಲ್ಲದಾ ನಾಡೊಳಿಲ್ಲಾ॥ ೩-೪
ನಡೆ ಮಂದವಾಯ್ತು ನಡುವಡಸಿತ್ತು ಬಡತನಂ
ನುಡಿ ಮೆಲ್ಲನಾಯ್ತು ಕಳಮೆಯು ಮಡಿಗಳಂ ಕಾವ
ಮಡದಿಯರ್ಗೆಂದು ೩ಮುತ್ತಿದವು೩ತಲೆಯಂ ತುಂಬಿ ಕೋಕಂಗಳೆರ್ದೆ*
ಅಡಿಗೆ ತೊಡಕಾದವಂಚೆಗಳಿಳದೇಳ ಕಾಲವೆನು [ಯೆಡರ್ದ*ವು
ತೊಡನೆ ಗಿಳಿವಿಂಡು ಗರ್ದೆಯ ಸೂಱಗೊಳೆ ಕಿತ್ತು ।
ಪಿಡಿದು ಕರಕಂಜದಿಂ೫ದಲರೆ೫ನೆಯ್ದಿಲ್ಗಳವನಿಡುವರಾ ಶಶಿಮುಖಿಯರು॥
ಕಲ್ಲೆರ್ದೆ*ಯ ಕರಗದಂಗನೆಯರೆವ್ಮ್ರಂ ಬಗೆವ
ರಲ್ಲೆಂದು ಪಥಿಕರ ಮೊಗಂ ಕಂದಿ ಬಾಯ್ಬತ್ತಿ
ಮೆಲ್ಲನಾಗಲ್ ನಡೆಗಳುಸಿರ ಬಿಡುತಿರಲೆಣಿಸುತಾ ಸತಿಯರವರ ಕರೆದು।
ಇಲ್ಲಿಗೆಯ್ತಪ್ಪನ್ನೆಗಂ ನಿಮ್ಮ೬ಕುಱತು೬ ಕೈ
ಯಲ್ಲಿ ಜೀವನವ ೭ಪಿಡಿದಿ೭ರ್ದೆವೆನಲಳ್ಕುತವ
ರೆಲ್ಲಬಾಯ್ಬಿಡಲವ್ಮೃತವೆಱವಚ್ಚರಿಯರೆನಿಸಿ ಮೆಱದರಱವಟಿಗೆಗಳೊಳು॥
ಅರೆವ ಚಂದನಕೆ ನಱುಸುಯ್ಗಂಪಿಗೆಱಪಳಿಗ
ಳುರವಣೆಗೆ ಸತಿ ರನ್ನದೊಡದೋಳನೆತ್ತುತಿರೆ
ಸುರಚಾಪವೆನಿಸಿಲ ತ್ತದಲ್ತು ನೆಗಪಿದ ಕರವಲ ಬಳಸೆ ಪಿಂಛಾತಪತ್ರವಂ।
ಸ್ಮರಗೇ ಪಿಡಿವಂತಾಯ್ತುದಲ್ತು ನೀಲದೊಳು ಶಂ
ಬರವೈರಿ ಸಂಗ್ರಹಣಮಂ ೧೦ಮಾಡಿ ಪಿಡಿಸಿದನೊ೧೦
ಗರುಡಿಯೊಳ್ ತರುಣಿಯನದಲ್ತು ಕಾಮನ ಕರಾಗ್ರದ ಚಕ್ರವೆನಿಸಿತರರೆ॥ ೩-೭

---

೧ ರೆಂಬುದು ಮಹೀಜ; ೨ ಶಬ್ದಂಗಳಜಲಾ (ಅ.ಈ.ಉ.ಒ.ಓ ಗ) ೩ ಪತ್ತಿದವು (ಅ.ಇ) ೪ ಂದೆ (ಈ) ೫ ದವಲ (ಅ), ದಲವ (ಈ) ೬ ಕೂರ್ತು; ೭ ನಾಂತಿ ೮ ತೆತ್ತಿದ ಕರಂ ೯ ವತಸುಗೆ।ಇರದೆ (ಅ.ಈ.ಉ.ಒ.ಓ.ಗ) ೧೦ ಮಾಡಿಸಿದನೊ ಪೇಳ್ (ಅ.ಉ.ಒ.ಓ.ಗ)

ಉರಗೇಂದ್ರನಿಳೆಯ ಬಗಿದೆದ್ದು ತಚ್ಛೋಳಭೂ
ವರನ ಬಲಗೊಳಲಾದುದೋ ೧ಪರಿಖೆಯೆನೆ ಫಣಿಪ೧
ನುರು ಸುದರ್ಶನದೆ ವಿಮಲಾಂಗ ಸದ್ವೃತ್ತದೆ ಸಮುನ್ನತಮದಾಯ್ತಿಂಬಿನಂ।
ಕರಮೆಸೆದುದಾ ಪಳಿಕುಗೋಂಟೆ ೨ಮುಗಿಲ್ಗಿ*ಚ್ಚನೊಡ೨
ವೆರೆದ ಕೆಂಗದಿರ್ವ*ಣಿಯ ಪೆಡೆ ಪಲವಱಿಂ ಸುತ್ತು
ವರೆ ನೋಳ್ಪನಹಿಪನೆನೆ ರನ್ನದೆನೆಗಳೆನೆಸೆದುದಾ ಪಟ್ಟಣಂ ಭಾವಿಸೆ॥ ೨-೮

ಚರಣದೊಳು ಹೃದಯದೊಳು ಕೈ ಬಾಯ್ಗಳಲ್ಲಿ ಸೌಂ
ದರ ದೇಹವಲ್ಲಿ ಮಜು೩ಜೆವಣಿಯಂ ಸುಗುಣಮಯ೩
೪ಪರಮ ಚಿಂತಾಮಣಿಯು೪ ಸುರತರುವನಮೃತಮಂ ಸೌಭಾಗ್ಯಮಂ+ಪಡೆವುತ।
ಶರಣೆಂದ ರಿಪುಗಳ್ಗೆ ಮಿತ್ರರ್ಗೆ ಯಾಚಕರ್ಗೆ
ಪರಮಾನುಭಾವರ್ಗೆ ಸಾರ್ದರ್ಗೆ ಸತ್ಯೇಂದ್ರ
ನಿರದೀಯೆ ನಾಣ್ಚಿ ಭಾಂಡಿಕದೇಹಿಯಾಗಿ ಸಗ್ಗಂ ಬೊಕ್ಕನಾ ಸುರಪನು॥

ಲಾಳನಂ ಬರ್ಬರನ ಗೌಳನಂ ವೈರಿ ಪಾಂ
ಚಾಳನಂ ಗೆಲ್ವ ಕರವಾಳನಂ ಭಸ್ಮಮಯ
ಭಾಳನಂ ೫ತತ್ಸ೫ದೋದ್ಧೂಳನಂ ರಂಜಿಸುವ ಕಾಳನಂ೬ಗೆಲ್ವ೬ ವಿಧೃತ।
ವ್ಯಾಳನಂ ನಮಿತ ಸುರಜಾಳನಂ ಹಸ್ತ ಕಂ
ಕಾಳನಂ ಕೊರ್ಬಿರ್ದ ಕೋಳನಂ ಕೊಂದ ಸೊ
ಡ್ಡಾಳನಂ ಭಜಿಪ ಭೂಪಾಳನಂ ಸತ್ಯೇಂದ್ರಚೋಳನಂ ಪೊಗಳಲಳವೆ॥ ೨-೯

ಒಂದು ಚಂದ್ರನ ಮಾಡಿ ಮೊದಲದು ಕಳಂಕಾದು
ದೆಂದಂಬರಕ್ಕಿಟ್ಟು ಮತ್ತೆರಡ ೭ರಚಿಸಿ೭ ರಾ
ಕೇಂದುವಿ೮ನೊಳಾ೮ ಷೋಡಶಾಂಶ೯ಮಂ ಶಿವರ್ಗೀತ್ತು ಸಪ್ತಕಲೆಯಂ ದೇಹಕೆ।
ತಂದಿ೧೦ಟ್ಟು ಮಿಕ್ಕೆಂಟ೧೦ಂ ಪಣೆಗಿಟ್ಟು ಮೂಜಿನೆಯ
ಚಂದಿರನ ಮೊಗದೊಳೊಡರಿಚಿದನೋ ಕಶ್ಯಪನ
ತಂಪೆಯಲ್ಲದೊಡೆ ಸತ್ಯೇಂದ್ರನಂಗನೆಗಮೃತವತಿಯೆಂಬ ಪೆಸರೆಸೆವುದೇ॥ ೨-೧೦

---

೧ ಪರಿಖೆಯು ಫಣಿಪ (ಆ), ಪರಿಖೆಯಾ ಫಣಿಪ(ಈ.ಉ.ಬ.ಗ), ಫಂಖಿ ತತ್ಫಣಿಪ(ಅ.ಇ.ಓ)
೨ ಮುಗಿಲಗ್ಗಿನೊಡ (ಆ.ಈ.ಉ.ಬ.ಓ.ಗ) ೩ ..., ಜೀವಣಿಯು ಗುಣಮಯಂ (ಅ.ಗ)...
ಸದ್ಗುಣ(ಅ) ೪— (ಇ) + ಮನೋಹರತೆಯಿಂದಂ...(ಇ) ೫ ಸತ್ಸ(ಈ) ೬ ಗೆಲ್ದ(ಅ.ಇ.)
೭ ಸಸಿವುತೆ (ಅ.ಇ.ಈ), ಸಸಿದು(ಆ.ಬ) ೮ ನ (ಅ.ಈ.ಬ.ಓ.ಗ) ೯ ಮನೀಶ್ವರಂಗಿ(ಆ.ಈ.ಗ)
ಮನು ಶಿವಗೆಂದಿ (ಓ) ೧೦ ದಿಡುತ್ತುಳಿದೆಂಟ (ಅ ಇ)

ಪರಮ ಸಂಭ್ರಮದಿ ಪುರವೀಥಿಯೊಳ್ ಬರ್ಪ ಧೀ
ವರನನೀಕ್ಷಿಸಿ ಮುನ್ನ ಗೇಹಮಂ ಪೊಕ್ಕ ಕು
ಕ್ಕುರಂಗೆ[೧] ಶಿವಮುದ್ರೆಯಂ ಮಾಡಿ ಕೂಡಿರೆ ಮಟ್ಟಿಗರುಜಱಿಯೆ ವೇದಂಗಳಂ||
ಒರೆಯಿಸಿದ[೨]ನದಱಿನುರು[೨] ಮುಕ್ಕಳುವಾರು ತ
ದ್ಗುರು ಕುಲೋ[೩]ದ್ಭವ[೩] ಚಿದ್ಘನಾರ್ಯರಡಿಗಂಡೆನ್ನೆ
ಹರ ಮಹಾದೇವೆಂದು ನೀಲಕಂಠನ ಭಕ್ತರೈದೆ ನಲಿವುತ್ತಿರ್ದರು|| ೩-೧೬

ಪರದೈವ ಭಜನೆಗಳನಿಂದ್ರಿಯಾರ್ಥಂ ಮಾಳ್ಪ
ನರರ್ಗೆ ಕಂಟಕವಪ್ಪುದೆಂಬುದಂ ಸೂಚಿಸುವ
ಪರಿಯೊಳಾ [೪]ಶುಕ್ಲತ್ವವಂ[೪] ಕುಱಿತು ಕೃಷ್ಣಪಕ್ಷವನೆ ಸಾರ್ದ ಕಾರಣದೊಳು||
[೫]ಅರರೆ !ದೋಷಾಕರಂ[೫] ಜಡನಾಗಿ [೬]ಬಿಯದಿ[೬]ಯೊಳ್
ಕರ ಬಳಲಿ ಮೈಯೆಲ್ಲ ಬೆಳ್ಪಾಗಿ ತನ್ನ ತಾ
ಯ್ವರಸಿ ಪೆರ್ಚುತ್ತ[೭]ಕುಂದು[೭]ವ[೭]ಚಂದ್ರನೆನಲನ್ಯದೈವ[೮]ಮಂ ನೆನೆಯಬಹುದೆ||

ಪತಿ ಹರ್ಯಜಾದ್ಯರ್ಗ[೯]ಜಾಂಡ[೯]ಕುರ್ಲ[೯]ರಕ್ಷಕಂ
ತ್ರಿತಯವಱಿವಮಲ ಯೋಗಿಗಳ ಜ್ಞಾನಂ ಕುಱಿತು
ಸತತ ಷಟ್ತ್ರಿಂಶತ್ಪರಂ ತತ್ತ್ವಚಿದ್ಘನನೆ ನಿಷ್ಕಲನೆ ಶಿವನೆ ಕೂರ್ತು|
ನುತ ನಿರಾಕಾರ ಸಾಕಾರದ ಸದಾಶಿವಾ
ಕೃತಿಯ ತಳೆದಾತನೆ ಮಹೇಶನ್ನೆ ಪಂಚವಿಂ
ಶತಿಲೀಲೆ[೧೦]ಯಾದವನನೊರೆವೆನೆನೆ[೧೦]ಂ ರೋಮಾಂಚ ಚೋಳನಾದಂ[೧೧]

ಚೋಳನು||

---

೧ ನ (ಅ.ಈ.ಉ.ಒ.ಗ) ೨ ನದರಿನೊಳು (ಅ.ಆ.ಇ) ನದರಿನಿಂದೊರು (ಈ), ನದರಿನೊರು(ಗ). ೩ ದ್ಧರ(ಇ) ಸುಕೃತ್ಯಮಂ (ಅ.ಉ.ಒ.ಓ.ಗ.) ೫ ವರ ದೋಷಕರನಾಗಿ (ಅ.ಇ.ಓ.), ೬ ಬೀದಿ(ಇ.ಉ.ಒ.ಓ.) ೭ ವಂ (ಈ.ಒ.ಓ) ೮ ಸೇವೆಯೆ ಪಾತಕಂ (ಅ.ಈ.ಗ), ದ ಸೇವೆಯೆ ಪಾತಕಂ(ಉ.ಒ) ೯ ತತಿ (ಅ.ಇ.ಉ.ಒ ಓ) ೧೦ ಯದನೊರೆವೆನೆನಲೊಡನೆ (ಅ), ಯವನೊರೆವೆನೆನಲು (ಒ), ಯೊಂದವರನೊರೆವೆ ನೆನಲು(ಓ) ೧೧ ಕಂಚುಕಿತನಾದಂ (ಇ.ಉ.ಒ.ಓ)

ಎಲೆ ದೇವ ದೋಷಾಕರನ ಪಿಡಿಯಲದು ನಿನ್ನ
ತಲೆಗೆ ಬಂದತ್ತು ಸರ್ವರ ಸುಡುವ ಬಿಸವ ೧ತುಡು
ಕಲು೧ ನಿನ್ನ ಕಂಠೋದ್ಗತಕೆ ಬಂದುದು ನಾಡೆ ದುರ್ಲಕ್ಷ್ಯಮಪ್ಪ ಖಳರಾ।
ವಿಲಗದೂರಗಳ ಮೂಜಿಂ ನೋಡ ನಿನ್ನ ನಿ
ಶ್ಚಲ ನಯನಗಳೊಳಂಬು ಮೂಡಿದವು ಮಚ್ಚಿತ್ತ
ನಿಲಯದೊಳು ಪದುಳವಿರ೨ಲೀ ಬಾಧೆಯಿಲ್ಲ೨ ಕೇಳಮರಗುಂಡಾಧೀಶ್ವರಾ॥

೧೦–೩೩

---

## ಮೂರನೆಯ ಸಂಧಿ

ಪಲ್ಲವಿ॥ ನಾದಬಿಂದು೩ಕಳಾ೩ಗ್ರಗುರು೪ಬಂದು೫ಚೋ೪ಗೊರೆ೫
ದಾದಿದೇಶಿಕಲೀಲೆ ಪಂಚವಿಂಶತಿಯಂ ಪ್ರ
ಸಾದಮಂ ಕುಡಲಮೃತವತಿಗೆ ಸಂಭವಿಸಿತ್ತು ಮಂತ್ರಲಕ್ಷಕನ ಗರ್ಭಂ॥

ಇಂದುಶಿಲೆ ಮಂಟಪದಿ ಹೇರಂಬ ರೋದಿಸಲ್
ಕಂದ ಬಾ ಬಾ ಎನಲ್ ಗುಹ ೬ಕಣ್ಣಲುಗಿ ತಮ್ಮ
ಯೆಂದನೇ೬ ಕುಮಾರ ಚೇಷ್ಟಿಸುವುದೇನೆನಲು ಮದ್ವೃಕ್ಸಂಖ್ಯೆಗೆಯ್ದನೆನಲು।
ಉಂದುರಾಸನಚರಿತನೆಂದ ಮೇಣ್ ಶಕ್ತಿಧರ
ಗೊಂದು ತಪ್ಪುಂ೭ಟಮ್ಮ೭ ಮನ್ನಾಸವಳದನೆನೆ
ಮುಂದಸ್ಮಿತದೆ ಕುವರರಂ ವೀಕ್ಷಿಸುವ ೮ಶರ್ವಸತಿ ನೀನೆ ಪೊರೆವುದೆಮ್ಮಂ೮॥†

---

೧ ಸಾನಲು [ಆ.ಉ.ಒ.ಓ.ಗ] ೨ ಲೀಗ ಬಾಧಿಲ್ಲ(ಗ), ಲಾವ ಬಾಧಿಲ್ಲ(ಆ) ೩ ಗಳ(ಅ.ಆ.ಇ.ಉ.ಒ.ಓ), ಗಳ್ಗ (ಗ) ೪—(ಅ.ಇ,) ೫+ದು ಜಗ (ಅ.ಇ) ೬ ಕರ್ಣಲುಟಿತಮ್ಮಮೆಂದೆನೆ (ಈ.ಓ.ಗ) ೭ ಟುಮದೇಂ (ಓ.ಗ.) ೮ ಮೃಡಾಣಿ ರಕ್ಷಿಸುಗೆಮ್ಮನು (ಈ.ಒ.ಓ.ಗ) †ಈ ಪದ್ಯ ಅ,ಆ,ಇ,ಉ,ಒ ಪ್ರತಿಗಳಲ್ಲಿಲ್ಲ.

ದೇವಿ ದಾಕ್ಷಾಯಣಿಯು [೧]ಪರವಸ್ತುವಿಂ[೧] [೨]ಪಡೆವು[೨]
ಈ [೩]ವಿಭುವಿಗಿತ್ತು[೩] ಪೆಣ್ಮಣಿಗಳಂ ಕುಡೆ ಸುರರ್
ಮೂವತ್ತುಮೂಱುಕೋಟಿಗಳಳಿಯರೆನಿಸಲಿಪ್ಪತ್ತೇಳು ಸುತೆಯರರಸಂ|
ಆ ವನಿತೆಯರನನಯದಿಂದಾಳೆ ದಕ್ಷಪ್ರ
ಜಾವರಂ ಶಪಿಸಲಾ ಚಂದ್ರನರ್ಚಿಸೆ ಶಿವನು
ಮಾವಿಮಲಕಲೆಯ ಧರಿಸಿದನಲಾ ಚೋಳ ಕೇಳೆಂದನಾ ಗುರುರಾಯನು|| ೩-೧೮

ಸರ್ವಲೋಕಂಗಳಂ ವಿಲಯವೈದಿಸುತ ಹರ
ನೊರ್ವನೇ ನಿಂದು ಯೋಚಿಸಿ ತನ್ನ ಧರ್ಮವನ
ಪೂರ್ವರೂಪಂ ಮಾಡಿ ಸತ್ಪ್ರಣವ ವೇದ ಪೌರಾಣಾಗಮಾಂಗನಾಗಿ|
ಗೀರ್ವಾಣರಂ [೪]ತನ್ನ ನಾಸಿಕದ ನಿಟ್ಟುಸಿರ[೪]
ಗುರ್ವಿನಿಂದಾಡಿಸುತ್ತೆಲರ್ವ*ಟ್ಟಿಗರ್ಗ*ಚ
ತುರ್ವಿಧದ ಪುರುಷಾರ್ಥ [೫]ಫಲದ[೫]ವೃಷಭಂ[೬] ಶಂಕರಂ[೬]ಗೆ[೭] ವಾಹನವಾದನು[೭]||೩-೧೯

ಹರನಿಂದೆಯಂ [೮]ಕೇಳ್ದು ಯಜ್ಞದೊಳ್[೮] ತನುವಳಿದು
ಗಿರಿರಾಜನಂಗನೆಗೆ ಮಗಳೆನಿಸಿ ಬಳೆದು ಬಂ
ದುರು ಹಂಪೆಯಲ್ಲಿ ತಪವಿರ್ಪ ಶಿವನಂ ಭಜಿಸಲುಮೆಯಿತ್ತ ವಿಷ್ಣುಮುಖ್ಯ|
ಸುರರು ತಾರಕರ್ಗಳ್ಕಿ ಕಳುಪೆ ಬಂದೆಚ್ಚೊಡಾ
ಸ್ಮರನ ಸುಟ್ಟಿಂಗಭವನೆನಿಸಿ ತಪಿಸುವ ಶಿವೆಗೆ
ವರದನಾಗುತ್ತೂರ್ಗೆ ಕಳುಪಿ ವಿಭವದೊಳಗಜೆಯಂ ಮದುವೆಯಾದನೀಶಂ ||

ಶಿವನುಗ್ರಮೂರ್ತಿ ಘುಡುಘುಡಿಸುತ್ತೆ ವೈಕುಂಠ
ಕವಗಡಿಸಿ ನಡೆದು ವಿಷ್ವಕ್ಸೇನನಾಂತೊಡಿಱೆ
ದವನ ಶೂಲಕೆ ಸಾರ್ಚಿ ಪುಗೆ ವಿಷ್ಣು [೧೦]ಭವನನಖ[೧೦]ಮುಕುರಪದಕೆಱಗುತೆನ್ನ|

---

೧ ಶಿವನಿಂದೆ; ೨ ದೀವು; ೩ ವಲ್ಲಭಂಗೆ (ಅ.ಈ.ಉ.ಒ.ಓ.ಗ) ೪ ನಾಸಿಕೋಚ್ಛ್ವಾಸನಿಶ್ವಾಸ (ಅ.ಇ) ೫ ಪದಪ ಕಾರಣನಾದ(ಅ.ಇ) ೬ ನಭವ; ೭ ವಾಹನಂ (ಅ.ಇ) ೮ ಕೇಳಿ...(ಅ.ಇ.ಈ.ಉ.ಒ.ಓ) ಕೇಳ್ದಿದಾಗ್ನಿಯೊಳ್ (ಆ) ೯ ಬಾಧೆಗಟ್ಟಿ (ಅ.ಈ.ಉ.ಒ.ಓ.ಗ) ೧೦ ಭವನ ನಖ (ಅ.ಆ.ಇ.ಈ.ಉ.ಒ.ಓ)

ತ್ರಿವಿಧಸಪ್ತಕಜನ್ಮ ಸಾಫಲ್ಯವೆಂದು ಕಂ
ಭವ[೧]ಪಾಯ್ದು[೧] ತಲೆಯ ರುಧಿರ[೨]ವೊಗಲೆಱೆಯೆ[೨] ಪೊರೆ
ದವನ ದಿಕ್ಪಾಲಲೋಕಂ[೩]ದಿರುಗಿ ಬಂದುದೇ[೩] ಹರನ ಭಿಕ್ಷಾಟನ[೪]ಕಣಾ[೪] ‖ ೩-೨೦

ವರಸತಿಯ ಮುಡಿಗೆ ತರ್ಪಲ್ಲಿ ಯೂಥಿಕೆಯದೊಂ
ದರ[೫]ಲವನಿಯೊಳ್[೫] ಬೀಳೆ [೬]ಶಂಭುಗೆಂದುವಱಿಂದೆ[೬]
ಸುರಪುರವ[೭] ನಾಳ್ದು[೭] ರಂಭೆಯ ಬೋಧೆಯಿಂದೆ ಶುದ್ಧಸ್ಫಟಿಕಸಂಕಾಶನ !
ಚರಣಮಂ ಶ್ವೇತನರ್ಚಿಸಲವನ ಪಿಡಿಯ ಬಂ
ದುರವಣಿಪ ಕಾಲನಂ ಹೊಳೆವಾ ತ್ರಿಶೂಲದಿಂ
ಅದಿರಲದಿಟ್ಟು ಮಡಿದಾರ್ತನ್ಸುವಿತ್ತು ಬೋಧಿಸುತ್ತಿಟ್ಟದಂ ಸರ್ವೇಶನು ‖

ಸಿರಿಯೊಡೆಯಗೋಲ್ಗ[೯]ಱಿಯ ಪೆರ್ವಕ್ಕಿ[೧೦]ಗೆ[೧೦]ಲರುಣಿಗ
ಳರಸುದಿರು ಕಂಗೆಟ್ಟು ಸರಿಗೆನ್ನದಾ ಪಾವಿ
ಗಿರದಮುರ್ದ*ಗಯ್ಯನೇಸಱ್ಗಾಲಿಗಳ್ ಸಡುಗಿ ಬೀಳ ತೇರ್ ಕೆಡೆವುದೆಂದು |
ಪರಿಕಿಸದೆ ಕೋಲ್ದುದಿಯ ಕಿಚ್ಚಿಗಾ ಪೊನ್ನಸಿಂ
ಗರವೆಟ್ಟುವಿಲ್ ಕರಗುಗೆಂದಳ್ಕದದಟ ಮು
ಪ್ಪುರ[೧೧]ಮಂ ವೆಱಂ[೧೧] ಸುಟ್ಟ ಕತ, [೧೨]ಬಿರುದನ[೧೨]ಮುರಗುಂತವ
ಮಲ್ಲಿನಾಥ [೧೩]ಕೇಳ್ವೆ[೧೩] ‖

ವೃತ್ರಕುಲಭವಜಲಂಧರನಿಪ್ಪಮಂ ಪಡೆದು
ಧಾತ್ರನಿಂದವನ ಭಂಗಿಸಿ ನಡೆದು ಕಾದಿ ಮುರ
ಶತ್ರುವಂ ಪಿಡಿದು ಫಣಿಪಾಶದಿಂ ಕಟ್ಟಿ ಗಗನಕ್ಕಿಟ್ಟು ಸುರರ ಸದೆದು |
ಚಿತ್ರಮೆನೆ ಶಿವಪುರಿಗೆ ದಂಡು ಬರೆ ಹರನಗ್ನಿ
ನೇತ್ರದಿಂದುರುಪಿ ಬಲವಂ ಚಕ್ರಮಂ ಬರೆವ
ಮಾತ್ರಕಸುರನ ತಲೆಯ ಶೀಘ್ರಗತಿಯಿಂದರಿಯೆ ತಳಿದನಾ ಶಿರವನಭವಂ ‖

---

೧ ನೆ ಪಾಯಲ್ (ಅ.ಈ.ಉ.ಒ.ಓ.ಗ) ೨ ನ ಸುರಿಯಲೆಱೆಯೆ; ೩ ವ ತಿರುಗಿಸಿಯೆ ಮೆಱೆದ (ಅ.ಇ) ೪ ವಲಾ (ಆ), ವಲ್ಲೈ (ಈ.ಉ.ಒ.ಗ) ೫ ಲು ನೆಲದೊಳ್, ೬ ಶಿವಗೆಂದ ಸ್ವೈಪಿಂನಿಂ (ಅ.ಇ.ಓ) ೭ ನಾಳ್ದ(ಉ.ಒ. ನೆಯ್ದಿ(ಅ.ಇ) ೮ ದಿರಿ(ಆ.ಉ.ಒ.ಓ) ದೆರ (ಈ) ೯ ಗ (ಅ.ಇ.ಉ) ೧೦ ಯು (ಅ) ೧೧ ದ ಬೇರಂ (ಓ) ೧೨ ಬಿರದ (ಅ.ಆ.ಇ.ಈ.ಉ.ಒ.ಗ), ಬಿರಿದಿನ (ಓ) ಶರಣು(ಅ.ಇ.ಈ.ಗ)

ಮಾರವೈರಿಯ ದಕ್ಷಿಣಾಂಗದೊಳು ಜನಿಸಿ ವಿಧಿ
ಮೇರುವಗ್ರದೊಳಾಪ್ತರೊಡನಹಂಕರಿಸುತಾ
ಶೌರಿ¹ವೇದಂಗಳೊರೆಯಲ್² ವಿಾಱಿ³ ಶಿವನಿದಿರೊಳುಲಿಯೆ ಪಂಚಮಶಿರವನು।
ಭೈರವಾಕಾರದಿಂ ಪಱಿದು ಗುರು ಶಿಕ್ಷೆ ದೀ
ಕ್ಷಾರತಿಯೊಳವನ ಮಸ್ತಕವೆಡೆಗೆ ಕೈಯಿಟ್ಟ
ಿನ್ನೆ ರಾಯ³ ಕೇಳು ಸೋವಾಷ್ಟಕವನೆಂದು ಬಿತ್ತರಿಸಿದಂ ಗುರುರಾಯನು॥

ಮೃಡನ ಸಭೆಯಿಂದ ಮನ್ನಣೆವಡೆದು ಯಜ್ಞಮಂ
ತೊಡಗೆ ದಕ್ಷನ ದಧೀಚಿವ್ರತಿ ಶಪಿಸಲುನು
ಯೊಡನೆ ನಾರದನಱಿಪೆ ಪೋಗಿ ಶಿವನಿಂದೆಗೇಳ್ದೊಡಲಳಿಯೆ ಹರನಱಿಯುತೆ।
ನಡುಗಣ್ಣಿನಿಂದ⁴ ವೀರನ ಪೆತ್ತು ಕಳುಪೆ ಘುಡು
ಘುಡಿಸಿ ದ್ರೋಹಿಯ ತಲೆಯ ಹೊಡೆದಗ್ನಿಯೊಳ್⁴ಗಾರ್ದು⁴
ಕೆಡಪಿ ಕುಱಿದಲೆಯಿತ್ತನವಿಚಾರಿಯವಿಚಾರಕೇಡಾಗದೆಂತಿರ್ಪನು॥†

ಅಮರರೊಳ್ ಕಾದಿ ರಕ್ಕಸರು ಕೆಟ್ಟೋಡಲಾ
ಕ್ರಮಿಸಿ ಪಿಂದಟ್ಟೆ ಮುನಿಪತ್ನಿ ದಿವ್ಯಾದೇವಿ
ಯಮರ್ದ*ಡ್ಡವಾಯಲಾಕೆಯ ತಲೆಯನರಿಯೆ ಭೃಗು ಶಪಿಸಲದಱಿಂ ವಿಷ್ಣುವಾ।
ಕ್ರಮದೆ ಬಕ ಧೀವರ ನಿಜಾಂಗ ⁵ಶರಭತ್ವದಿಂ⁵
ದನೆ ⁶ತೀರ್ಚೆ⁶ ತಚ್ಚಿಹ್ನಮಂ ಕೂರ್ಮೆಯಿಂ ⁷ತಳೆದು⁷
ಹಿಮಸೃಷ್ಟಿಶೇಖರಂ ನರನಿಷ್ಟದಾತಪಂಚಾನನಂ ಮೆಱೆದನಂದು॥

ಕ್ಷೀರ ಶರಧಿಯೊಳು ಹರಿ ಮಲಗಿರ್ದಡಾ ವೇಳೆ
ವಾರಿಜೋದ್ಭವಲನೆಯ್ದಿ⁸ ಯುದ್ಧಮಂ ಮಾಡಲಾ
ಶೌರಿಯಜರೆಚ್ಚೆರಡು⁹ ಪಾಶುಪತಬಾಣದುರಿಯಿಂ ಜಗಂ ಬೇಯೆ ನಡುವೆ।
ಮಾರಾರಿಯುರಿಲಿಂಗವಾಗಿ ಕುಳಿರ್ವೆ*ಟ್ಟನ ಕು
ಮಾರಿಯೊಡನರ್ಧನಾರೀಶತ್ವದಿಂದೊಳಗೆ
ರಾರಾಜಿಸುತ್ತವರ ಸಲಹಿ ತಂಪಂ ಜಗಕೆ ಬೀಱಿದಂ ಚಂದ್ರಧರನು॥

---

೧ ವೇದಗಳ ನುಡಿಗಳ (ಅ.ಇ) ೨ ನಾ ರಾಜ (ಅ.ಇ) ೩ ಜ್ಞೊಳೆಯೆ (ಅ.ಈ.ಓ.ಗ) ೪ ಗಾಲ್ದು (ಅ.ಇ) † ಈ ಪದ್ಯ 'ಉ' 'ಓ' ಪ್ರತಿಗಳಲ್ಲಿಲ್ಲ. ೫ ವಶರಭಸತೆಗಳಿಂ (ಅ.ಗ), ಸರಭಸತೆಗಳಿಂ(ಈ)...ತೆಯಿಂ(ಉ) ೬ ಸದೆದು(ಅ.ಈ.ಉ,ಒ.ಓ) ೭ ತಳೆದ (ಅ.ಈ.ಉ.ಒ.ಗ) ೮ ಬಂದು(ಅ.ಇ) ೯ ರೆಸಲೆರಡು(ಅ.ಈ.ಉ.ಒ.ಗ)

ವಾರಿಜೋದ್ಭವನಾತ್ಮಸುತೆಗಳುಪೆ ಮೃಗಿಯಾಗಿ
ಸಾರಿಯೋಡುತ್ತಿರಲ್ ಹರಿಣನಾಗುತ್ತಲಾಂ,
ಭಾರತಿಯ ಬೆಂಬತ್ತಿ ರಮಿಸುವಿನಮುವಳಭವನಂ ನೆನೆಯೆ ವೇದಂಗಳು।
ಸಾರಮೇಯಂಗಳಾಗಿಯಾಘ್ರಾಣಿಸುತ್ತಡಿಯು
ಹಾರಿವಿಡಿದೈದೆ ಶಬರಾಕೃತಿಯೊಳಾ ವಿಧಿಯ
ಶಾರಿ ತಲೆ ಪಱಿಯಲೆಚ್ಚಂ ಮುನಿದಿಗೀಶನುತನೆನಿಸುವ ಕಿರಾತರುದ್ರಂ॥
ಬಂದು ಬಲಿಯಂ ಭೂಮಿಯಂ ಬೇಡಿ ಪಡೆದು ಬಳಿ
ಕೊಂದು ಕಾಲಂ ಸತ್ಯಲೋಕಕ್ಕೆ ನೀಡಲರ
ವಿಂದಭವನಿಟ್ಟ ಮಂತ್ರೋದಕಳದಿನುಳಡಿದಲ್ಲಿ ಸಿಲ್ಕಲದು ತದ್ವಿಷ್ಣುವ।
ಮುಂದಿವಾಳವ ತೀರ್ಚೆ ಬೆನ್ನೆಲುವ ಮುಱಿದವಂ
ಮುಂದಕ್ಕೆ ತಲೆವಾಗಿ ನಡೆವುದಕೆ ಹರಿ ತನ್ನ
ಹಿಂದ ನೆನೆದಿರಲೆನ್ನ ಸನ್ನಿಧಿಯೊಳೆಂದು ಕಂಕಾಳಮಂ ಪಿಡಿದನಭವಂ॥
ಕೀಲಾರಮಂ ಕಾವ ಕಾಲದೊಳು ಮಣಲಿಂ ಮ
ಹಾಲಿಂಗಮಂ ಮಾಡಿ ಲೋಲತೆಯೊಳರ್ಚಿಸುವ
ಬಾಲಚಂಡನ ತಂದೆಯಾಲೋಕಿಸುತ್ತೊದೆಯೆ ಶೂಲಿಯಂ ಬಳಿಕ ನಿಷ್ಠಂ।
ಸ್ಥೂಲಪರಶುವನಾ ಕಪಾಲಿಯಿಂ ಪಡೆದವನ
ಕಾಲ ಕೀಲರಿಯೆ ಪೊಡೆದಾಲಲಭವಂ ಮೆಚ್ಚಿ
ಕೈಲಾಸಕೊಯ್ದೊಡೆ ವಿಶಾಲಗಣತತಿಯಿರ್ಪ ಸಾಲೊಳಾ ಶರಣ ಮೆಱೆದಂ॥೩-೨೧
ಆ ಜಲಪ್ರಳಯ ಕಾಲದೊಳು ಹರ್ಯಜರತಿ
ವ್ಯಾಜದಿಂ ಪಳಚಲುದಯಿಸಿದ ಲಿಂಗದ ಮಹಾ
ತೇಜಸ್ಸು ತತ್ಸಮುದ್ರದ ವಡಬನಂತೆಸೆಯಲೆಡಬಲದೊಳಿಂದ್ರನೀಲ।
ಯೋಜಿಸಿದ ತತ್ಕನಕ ಪುಷ್ಯರಾಗಂಗಳವೊ
ಲಾ ಜನಾರ್ದನ ವಿಧಿಗಳಿರೆ ಚಕ್ರಶಂಖಗಳ
ನಾಜಲಧಿಯಾವರ್ತ ಶಬ್ದಂಗಳೆನಲಿತ್ತನಭವನಂದಾ ವಿಷ್ಣುಗೆ॥

---

೧ ದಲ್ಕೆಗಂಡೆರಳೆಯಾಗೋಡುತ್ತ [ಉ.ಬ.ಓ.] ೨ ಲ್ಕೆರಲೆಯಾಗೋಡಲಾ [ಅ.ಈ.ಗ] ೩ ತ್ವದಿಂದಾ [ಅ.ಈ.ಉ.ಬ.ಓ.ಗ] ೪ ವಸು [ಅ.ಗ], ದಲಿನು [ಓ] ೫ ಮಂದೆ [ಅ.ಆ.ಇ.ಈ.ಬ.ಓ.ಗ] ೬ ಶಂಖಂಗಳಾ [ಅ.ಈ.ಬ.ಗ]- ಶಂಖಂಗಳನಾ [ಓ].

ಮಿಸುಪ ೧ವಿದ್ಯೆಯ ಮೊಗದ ಕೈಯುಳ್ಳ ದಾನಮಯ
ರಸಿ೨ಕಗಾಚಾರ ಸಂಬಂಧದಿಂ ಗುರುವಿಗ
ರ್ಪಿಸುವ೨ ಗಣಪಂಗೊರೆವೆನೆಂದು ನಾನಾ ಶಾಸ್ತ್ರ೩ಮಂ ದೇವ೩ರಾದಿತ್ಯನು|
ಒಸೆದು ನಿರವಿಸೆ ಕೇಳ್ದನಿವನ ಪೊಡೆಯಂ ಬಳಸಿ
ಸಶಿವ೪ಪ್ರಸಾದಿ ೫ಯಹೆ೫ನೆಂಬ ಫಣಿಬಂಧ ರಾ
ಜಿಸುವ ಕುಕ್ಷಿಯ ಕುಮಾರನ ನೋಡಿ ಹರ್ಷಿಸುವನಭವನಿಲೆ ಚೋಳ ಕೇಳ್ತೈ॥

ಮನಮೊಲ್ದು ಶಿವನಗಜೆಯಂ ರಮಿಸುತಿರೆ ಸುರರು
ದನುಜಭಯ೬ಕಗ್ನಿಯಂ೬ಕಳುಪೆ ಬಂದಾ ಶಾಂಭ
ವನ ವೀರ್ಯಮಂ ಕೊಳಲು ಗರ್ಭವಾದಮರರುದ್ಗಾರಿಸಲು ಶರವಣದೊಳು|
ಅನಲಸಂಬಂಧ ಕೃತ್ತಿಕೆಯೊಳೊಗೆದಾ ಷಡಾ
ನನನ ಸಾಗಿಸಲಿಂದ್ರನಂ ಜಯಿಸೆ ಸೇನಾನಿ
ದಿನವೇಳಱೊಳ್ ತಾರಕಾರಿಯಾದಂ ಚಿತ್ರಭಾನು ಭೂಪಾದ ಕತದಿಂ॥

ಪರಶಿವನ ಧರ್ಮವೇ ವೃಷಭನಾಕಾರದಿಂ
ದೆರಡನೆಯ ಶಂಭುವೆನಿಸುವ ಬಿಣ್ಪಿನಿಂದೆ ೭ಬಂ
ಧುರ೭ ಕೃತಯುಗಂ ತ್ರೇತೆಯುಂ ದ್ವಾಪರಂ ಕಲಿಯುಗಂಗಳೊಳು ನಾಲ್ಕುಮೂಱು|
೮ಪರಿಯಾಯದೆರಡೊಂದು ಪಾದಗಳ ನಲ್ಪಿನಿಂ
ಧರಿಸಿ ಪುರುಷಾರ್ಥಂಗಳೊಳು ಮೋಕ್ಷ ಮುಖ್ಯವೊಂ
ದರಸ ಕೇಳಂತೆ ಮೆಱೆ೮ವೇಕಪಾದದ ಶಿವನಲೀಲೆಯೆಂದಾರ್ಯನೊರೆದಂ೮॥

ಗೌತಮಂ ಕ್ಷಾಮದೊಳು ಪಾರ್ವರಂ ಸಲಹೆ ಬಳಿ
ಕಾತಂಗೆ ಗೋವಧೆಯನವರು ಕಲ್ಪಿಸೆ ಪಡೆದ
ಜಾತಸಿಂ ಗಂಗೆಯಂ ಮರಳಿ ಶಪಿಸಲು ನೀಚವರ್ಣ೯ಂಗಳಾಗೆ ಖಳರು|

---

೧ ವಿದ್ಯುನ್ಮ್ರ [ಆ.ಗ] ೨ ಕಂಗೆಯಾಚಾರ ಗುರುಸಮರ್ಪಣೆಯ ಸಂಧಿಸುವ;
೩ ಮೂದೇವ [ಅ.ಈ.ಉ.ಒ.ಓ.ಗ] ೪ ಅಸಂ [ಉ.ಒ.ಓ] ೫ ಯಾ [ಆ.ಈ.ಗ]
೬ ಕಗಿದಗ್ನಿಯಂ [ಅ.ಆ.ಇ.ಈ.ಉ.ಓ] ಕಾಗಿಯಗ್ನಿಯ[ಒ]- ೭ ಬಂದುರು [ಓ]
೮ ಎರಡೊಂದು ಪಾದಮಂ ಧರಿಸಿ ಪುರುಷಾರ್ಥಗಳೊ| ಳುರು ಧರ್ಮವೇ ಮುಖ್ಯವೆಂಬ
ವೊಲರಸಕೇ| ಳ್ಮೆರೆದೇಕಪಾದದ ಶಿವನ ಲೀಲೆಯೆಂದೊರೆದ ಚಿದ್ಘನ ಶಿವಾಚಾರ್ಯರು॥
[ಉ.ಒ.ಓ.] ೯ ವನೆಯ್ದೆ[ಆ.ಈ.ಉ.ಒ.ಗ]

ಸೋತಾ ಕ್ರಿಯಾಜ್ಞಾನಿಯಕ್ಷಪಾದಂಗಭವ
ನೋತು ನಿರವಿಸೆ ನಂದಿಯೇ ಸುಖಾವಹಮೂರ್ತಿ
ನೂತನಾಚಾರ್ಯಂಗೆ ನಯನತ್ರಯಂ ಬೋಧೆಯಿಂಧೆ ರಕ್ಷಿಸಿದನವರಂ ||

ದಾರುವನದೊಳು ಭಿಕ್ಷು ೧ಶಿವಗೆ ಮುಳಿದಂದಪ
ಸ್ಮಾರಥಣಿಡಮರುಮುಖ್ಯಗಳಟ್ಟಿ ಮುನಿಗಳವ
ಮಾರಾರಿಯುಳವಡಿಸಿಕೊಂಡು ತಾಂಡವಮನೆಸಗುತ್ತ ಬಯಲಾಗಲವರು |
ಸಾರಿ ಕೀರ್ತಿಸೆ ವಟದ ಮೊದಲೊಳ್ ತ್ರಿನೇತ್ರಕೋ
ಟೀರಾದಿಯಿಂ ದಕ್ಷಿಣಾಮೂರ್ತಿ ತನ್ಮುಖಸ
ರೋರುಹಗಳಲರೆ ಪುಸ್ತಕವಿಡಿದು ನೋಡಿ ಬೋಧಿಸಿ ಪೊರೆದನಾ ೨ಯತಿಗಳಂ ||

ಪಾಲ್ಗಡಲಮುಗಳಿನಿಯನೊಡನೆ ಬೊಮ್ಮಂ ಸರಿಮಿ
ಗಿಲ್ಗೆ ಕಿನಿಸಿ ಪೋರೆ ಮಿಱುಪ ಮಿಂಚುಗಳ ಬಂ
ಬಲ್ಗಳಗ್ಗಳವಿಾನ್ಗಳಮರ್ದು*ಗ್ಗೈಯವರ ನೇಸಱ ಪಲವ ಜಗಜಗಿಸುವ |
ಬಲ್ಗಿಚ್ಚ ಪಳಿವ ಲಿಂಗಂ ಮೂಡೆ ಕಣ್ಣಿಟ್ಟು
ಕಾಲ್ಗಾಣದಾದನಾ ಕಾಳ್ಮಯ್ಯನಳ್ಕುತೆ ತು
ಳಿಲ್ಗುಂದಿ ನಾಲ್ಮೊಗಂ ತಲೆಗಂಡನೇ ಶಿವನ ಬಲ್ಗಿಣೆಯ ಪೋಲ್ಗಾವನು || ೩-೨೩

ತಿಲಕುಸುಮದಾಯ ಸಂಪಗೆಯೆಂಬ ನಿಂದೆಗಳ
ಮಲಹರನ ಭಕ್ತೆಯ ಮುಖಾಬ್ಜಮಂ ಸಾರ್ದು ಕಳೆ
ಯಲು ನಾಸಿಕಂ ಚಂದ್ರಸೂರ್ಯರೆಡಬಲದೊಳೋಲೈಸಲಾಚಾರಲಿಂಗ |
ನಿಲಯುವಾಯ್ತಿಲ್ಲಿ ಪರವಸ್ತುವಂ ಕುಱಿತೆನ್ನ
ತಲೆಯಡಿಯೊಳೆಸಗುವೆಂ ತಪವನೆನುತಂ ಮುಕ್ತಿ
ನೆಲೆಗೊಂಡವೋಲಮೃತವತಿಯ ಮೂಗುತಿಯ ಪೆರ್ಮುತ್ತು ರಾರಾಜಿಸಿದುದು ||

ಶ್ರುತಿಗಳಭವನನಱಸಿ ಬಳಲಿ ಶಿವಮಯಮಪ್ಪ
ಸತಿಯ ನಯನಂಗಳಂ ಸಾರ್ದವೈ ಸಲೆಯಲ್ಲ
ದತಿಶಯದ ಲಾವಣ್ಯರಸವ ೩ನೆಱತಿ೩ ಕಣ್ಣಿಟ್ಟು ಕರಳಗಿಳ ಕಿವಿಗೋವೆಯಲ್ಲಿ |

---

೧ ಶಿವನ ಮೇಲಂದಪ [ಅ.ಈ.ಒ.ಗ] ಮುಷಿಗಳಂ [ಅ.ಈ.ಒ.ಗ]
೨—; ೪ ಗುತ್ತ[ಅ].

ಚತುರಾಸ್ಯನೆಂಬಕ್ಕಸಾಲೆಯೆಱೆದಪನೆಂಬ
ಮತಿ ಬೇಡವೆನಲೆಸೆದುವಾ ಕರ್ಣ೧ನಯನಗಳುಂ
ಪತಿಭಕ್ತೆಗಾವಗಂ ಕಂಡು ಕೇಳ್ದರ ಸಂಗವಗಲದೆಂದಱಿಪುವಂತೆ ||
  ಗುರುತರದ ಕುಚದಿಂದೆ ಚಂಪಕದ ಕುಸುಮ ಬಂ
ಧುರ ಲಘುಶ್ವಾಸನಾಸಿಕದಿಂ ಚಕೋರನೊ
೨ಳ್ಪರಿಜಿನಕ್ಷಿಗಳಿಂದಲಾ೨ಪಾದಮಸ್ತಕಾಭರ೩ಣಗಳ ಚೆಲ್ವಿನಿಂದೆ |
ಸ್ಮರನೆಂಬ ಬಾಲಕಗೆ ಛಂದೋವಿಭೇದಮಂ
ಪರಮಕವಿಹೃದಯದಱಿಕೆಯುನಲಂಕಾರದಲಿ೪
ಪರಿಣತೆಯ ತಿಳಿಪುವಾಚಾರ್ಯಳೆನೆ ರಾಜಿಸಿದಳಾ ರಾಣಿ ಕಮಲಪಾಣಿ ||
  ಪೊಡೆಯೊಳಗೆ ಪುಗಿಸದಿಂದೆನ್ನ೫ ಪೊಱಮಡಿಸ೬ಲಾಂ೭
ಹಿಡಿತಕ್ಕೆ ಬಂದು ದಾರಿದ್ರ್ಯದಿಂದಂ ನವೆದ
ನಡುವನಾ ಶ್ರೈಸಿ೮ದೀ೯ ನಾಭಿಮಂಡಲದಿಂ ಪಯೋಧರ ಸೀಮೆಗಾಗಿ |
ನಡೆವೆನೆಂದೈತರ್ಪ ಬಾಸೆಯಂ ತಮ್ಮ ನೆಲೆ
ಯೆಡೆಗೆ ಕರೆದೈತರಲ್ ಮೋಹದಿಂದಂ ತಡೆಯ
ಲೊಡಬಟ್ಟ ಮೊಲೆಗಳಿಂದೆಸೆದಳಾ ನಾರಿ ಕಂದರ್ಪರಾಜ್ಯದ ವಿಚಾರಿ ||
  ನಳಿತೋಳಮೊದಲೆಂಬ ಬಾಹುಯುಗಮೆಂಬ ನುಡಿ
ಗಳ ನಿಂದೆಯಂ ಪೊರ್ದದಧಿಕ ಚಂಪಕಮಾಲೆ
ಗಳ ಪಾಂಗಿನಿಂದಿರ್ಪ ದೋರ್ಲತಾಯುಗಳದಿಂದಮಮ ಮನ್ಮಥವೀರನಾ |
ನಿಳಯದಗ್ಗದ ಗಂಧಸಿಂಧುರಲವಪೋಲ್ವಲ ಕೋ
ಮಳೆಯೆರ್ಂಬುದರ್ಂ ಕುಚದ್ವಯದ ನಡುಬೈತಲೆಗ
ಳೊಳು ಕಾಣಲಾದುದೆಂಬಂತೆಸೆದಳಾ ಚೆಲ್ವ ನಾರಿ ಸದ್ಗುಣವಿಚಾರಿ ||
  ಎರಲೆಗಂಗಳ ವಟಫಲಾಧರದ ಬೆಳ್ನಗೆಯ
ಪರ೧೦ಪುತ್ತುಮಿರ್ಪ ಪ್ರಕಾಶರದದೆಸೆವ೧೦ ಚಂ
ದಿರಮೊಗಕ್ಕೆಳಸುತಾ ನಾಭಿವಲ್ಮೀಕದಿಂ ಬಾಸೆ೧೧ಯೆಂಬಸಿತ೧೧ ಸರ್ಪಂ ||

---

೧ ನೇತ್ರವಾ [ಆ.ಉ.ಗ], ನಯನವಾ [ಒ.ಓ] ೨ ಳ್ಬರವಕ್ಷಿಯುಗಳದಿಂದಾ[ಅ, ...ದಕ್ಷಿಗಳಿಂದಲಾ[ಗ],...ಳಿಂದವಾ [ಈ] ೩ ಣಂಗಳಂದದಿಂದೆ [ಅ.ಈ.ಒ.ಓ.ಗ] ೪ ಗಳ[ಅ.ಇ] ೫ ಪೋಗಲೀಯದೆನ್ನ [ಅ.ಇ.ಓ] ೬ ಲಾ [ಅ.ಇ.ಒ.ಓ.ಗ] ೭ ದೆಂ [ಈ] ೮ ದ ತೆರದ [ಅ.ಈ.ಒ.ಓ] ೯ ಬಿಸಂ[ಅ] ೧೦ ಪುತ್ತುಮಿಹ ಸುಪ್ರಕಾಶವಹ ಶರದ [ಅ.ಇ], ಪುತ್ತುಮಿರ್ಪ ಪ್ರಕಾಶಶರದೆಸೆವ [ಅ.ಓ] ಯುಹ ಕೃಷ್ಣ [ಅ.ಇ].

ಬರೆ ರಾಜನಾಳು ಸಾಲಿಟ್ಟು ಬಟ್ಟೆಯು ೧ಕಟ್ಟ
ಲುರು೨ ಫಣಿಯ ಪೆಡೆವರಲ್ ಕುಚದ ಮಧ್ಯದೊಳಿರ್ಪ
ಪರಿಯು೩ ಮಣಿಮಯಮಧ್ಯದಮಲ ನಕ್ಷತ್ರಮಾಲಿಕೆ ಮೆಱೆದುದಾ ವನಿತೆಗೆ ||
೪–೧೧||

ಕನ್ನೈದಿಲಲರ್ಗೆ*ಯಾರಡಿಗೆ ಶಶಿಬಿಂಬಕ್ಕೆ
ರನ್ನಕ್ಕೆ ಪೊನ್ನ ಕಳಸಕ್ಕೆ ತಿಳಿಗೊಳಕೆ ೩ಮಿಗೆ
ಚೆನ್ನೆಸೆವ೪ ಬಗಸೆಗಣ್ಣಳಕವಾನನಮಧರಕುಚಯುಗ್ಮಮೆಸೆವ ನಾಭಿ |
ಮುನ್ನಮೇ ಸರಿಯೆಂಬ ೪ ಒಲ್ಮೆಳಿ ಪೊಱಿವಾಱಧಿಕ
ವೆನ್ನಲುಚಿತಂ ತಥ್ಯವೆನಲೆಸೆದಳಾ ಚೆಲ್ವೆ
ಕನ್ನೆ ಭೂಭುಜನ ಮನದನ್ನೆ ರಸಿಕತೆಯೊಳುತ್ಪನ್ನೆ ಸದ್ಗುಣಕಭಿನ್ನೆ ||

ಪೊಡೆಯರಲನಂಗನೆಯ ಮನೆಯ ಸತಿ೫ಯೆಸಲಾಳ್ವ೫
ನುಡಿದೂಸಱಿಂಗಳ್ಕದಾ ರಮಾಕಾಂತೆಯೋ೬ಡ
ನೋಡೆವಿಡದೆ ಪಗಲು ಪಕ್ಕೆಯೊಳಿರ್ಪನಮು ದೋಷವೆಂದು ಮನದೊಳ್ನಿಸೋಯದೆ
ಎಡೆವಿಡದೆ ಸೂರ್ಯನಾರಾಯಣನೆನಿಸಿಕೊಂಬ
ಕಡೆಗಿವನ ಬದುಕು ನೀರೊಳ್ ನೆರೆಯದಿರದೆಂದು
ಪೊಡವಿಯಾಡುವ ಮಾತಿಗೆಡೆಯಾಗಿ ರವಿ ಪಡುವ ಕಡಲೊಳಾಹಾ ಬಿಳ್ದನು ||

ಲೋಕದ ಜನಂಗಳಿನ್ನುಂ ಮಗನ ಹೆಜ್೭ಯೆಂಬ
ರೇಕಿಲ್ಲಿಯಾನಲ್ಲಿಗೆಯ್ದಿಯಮರ್ದ*ಪ್ಪಿಯಾ
ಲೋಕಿಸುತೆ ನೆರೆದ ಕಂದನನೊಲ್ದು ಮುಂಡಾಡಿ ಬೆಳಗನ್ನಲಮಿರ್ಪೆನೆಂಮುಳ೮|
ಜೋಕೆಯಿಂ ಪಾಲ್ಗಡಲ್ ನಡೆತಂದು ತಾರಕಾ
ನೀಕವೆಂದೆಂಬ ಮುತ್ತಂ ಕೊಟ್ಟುದೋ ಎನಲು
ರಾಕೇಂದುವಂ ಬಳಸಿ ನಕ್ಷತ್ರದೇಳ್ಗೆಯಿಂ ಜೆಳ್ವಿಂಗಳೆಸೆದಿರ್ದುದು ||

---

೧ ಕಟ್ಟದರೆ [ಅ.ಇ], ಕಟ್ಟವುರು [ಓ], ಕಟ್ಟಲುರ [ಒ] ೨ ಯೊ [ಅ.ಇ] ೩ ಮಿಗಿ ಲಿನ್ನೆಱೆವ[ಉ.ಒ.ಓ],...ಲಿನ್ಮೆಱೆವ[ಅ], ಮಿಗಿಲಂಮೆಱೆವ[ಈ] ೪ ಭಾವ [ಅ.ಇ] ೫ ಯಾಗಳಾ ಅ.ಇ.] ೬ ಳಗೆ ಅ.ಇ.ಓ] ೭ ಯಸು [ಅ.ಇ] ೮ ಕಿರ್ಪೆನೆಂದು [ಅ.ಇ], ಲಿರ್ಪೆ...[ಅ.ಈ.ಉ], ಕೀರ್ತಿಪೆ...[ಓ]

ಆ ರಾತ್ರಿಯಲ್ಲಿ ಪೇರೋಲಗವ ಬೀಳ್ಕೊಟ್ಟು
ಭೂರಮಣನೆಳ್ತಂದು ಲಿಂಗಾರ್ಚನೆಯನೆಸಗಿ
ಚಾರು ಶಿವಲಿಂಗಪ್ರಸಾದಮಂ ಸವಿಯಲುಳಿದುದ ಕೊಂಡು ಭಕ್ತಿಯಿಂದೆ।
ನಾರಿ ಶಯ್ಯಾಗೃಹದ ಹಂಸತೂಳದ ತಲ್ಪ
ದೋರಣದ ೧ಚೆಲ್ವಿನ೧ಡಿಕಿಲ್ವಾಸಿನೊಳ್ ಪತಿಯ
ಸಾರಿ ಕರ್ಪೂರತಾಂಬೂಲಸೇವೆಯೊಳೆ ಮನ್ಮಥಯುದ್ಧ ಕನುವಾದರು॥

ಎನಗೆ ಸಾಕೀ ತಾರಹಾರೆ ನಿನ್ನಧರದೊ
ಳ್ಪನಿದೆನುತ್ತಡಿಗಡಿಗೆ ಪೀರ್ದರ್ ಕೇಕಾ ಶಿರೋ
ಜನಿತಧಮ್ಮಿಲ್ಲೆ ಕೇಳೌ ನಿನ್ನನಗಲೆ ಪತ್ತಜಿ ಕಡೆಯವಸ್ಥೆಯಲ್ತೆ।
ಘನ ಕುಚಶ್ರೀಪರ್ವತಾಗ್ರಗಳ ಕಂಡೆರ್ದೆ*ಯೊ
ಳನುಗೊಳಿಸಿದೆಂ ಧರೆಯೊಳುಳ್ಳ ದಿವ್ಯಕ್ಷೇತ್ರ
ವೆನಿತವಜಿ ಮುಕ್ತಿಗಳ್ ನಿನ್ನೊಳೊಳವೆಂದು ರಮಿಸುತ್ತಿರ್ದನಾ ಚೋಳನು॥

ಎಸೆವಂಗಪರಿಮಳಂಗಳ ನಾಸಿಕದಿನೀಂಟಿ
ಮಿಸುಗುವಧರಂಗಳಂ೨ ಪೀರ್ದರ್*ಕಂಗಳೊಳೆ ನಿ
ಟ್ಟಿಸುತಲಮರ್ದರ್*ಪ್ಪುತನ್ಯೋನ್ಯ ಕರ್ಣಂಗಳೊಳು ಲಲ್ಲೆನುಡಿಯಿನಿದುಗೇಳಿ।
ಒಸೆದು ನೆರೆದರು ಸದಾಚಾರದಿಂ ಗುರುವಿಗ
ರ್ಪಿಸುತ ಶಿವಲಿಂಗಜಂಗಮುಸುಪ್ರಸಾದಂಗ
ಳಸುಗಳೆರಡೊಂದಾಗಲಾ ಮಹಾಲಿಂಗಭೋಗಿಗಳು ಸುರತವನೆಸಗಲು॥ ೪-೧೨

ನಲಿದು ಗುರುಕರುಣದಿಂ ಕೈಲಾಸಪುರದ ಬಾ
ಗಿಲ ತೋರ್ಪ ಕಂದನಂ ಪಡೆವೆನೆಂಬೀ ಭಾಷೆ
ಚನಲಶಿವೇಜಿ೩ತೆಂಬಂತೆ ಬಾಸೆ ನಳನಳಿಸಿತ್ತು ಬಹಳ ದೊರೆತನದೊಳಿರ್ಪ।
ಲಲನೆಗೀ ನಡು ಬಡತನಂಬೋಗಿ ಬಿಣ್ಪಾಯ್ತು
ನೆಲವೆಣ್ಣು ತದ್ಧೃತಿಯಡಿಗಡಿಗೆ ಪದ
ಜಲಜಗಳನಮರ್ದರ್*ಪ್ಪೆ ವಹಿಲಮಂ ಪೂಣ್ದಂತೆ ಚೆಲ್ವೆ ನಡೆ ಮಂದವಾಯ್ತು॥

---

೧ ಸೌಖ್ಯದ (ಅ.ಇ) ೨ ಪಧರಗಳ;+ಚೆಲ್ಲೆ (ಅ.ಇ) ಬಲ (ಅ.ಇ.ಉ.ಬ.ಓ.ಗ)

ಶಿವಲಿಂಗಮುಂ ಕರಸ್ಥಲದಲ್ಲಿ ೧ಕಾಣ್ಬುಡೀ೧
ಯುವತಿಯಕ್ಷಿಗಳಿಗೆಡೆವೊಕ್ಕೆವಂತೆಲ್ಲದಿವ
ಳವಯುವಕೆ ಪೊಱ೩ಯೊಡೆವದುಮಲ್ಲದೀ ಸತಿಯನೆರ್ದೆ*ಗೆಡಿಸಿ ಕೊಂಡಿರ್ದೆವು|
ಭವನ ಕರುಣದ ಪಿಂಡ೨ವೀ ಗರ್ಭಮುಂ ಪೊಕ್ಕು೨
ದೆವಗಾದುದಪರಾಧವೆಂದಳ್ಕಿ ಕುಚದ ತೊ
ಟ್ಟವ ಮೊಗಂಗಂದಿದವೊ ಪೆಱ೩ದಲೆಯನಂ ನೆನೆವುತಮೃತಮಾರ್ಗಂ೩ಬಡೆ೩ದುವೊ ||
ಉದಯಿಸುವ ಪುತ್ರನಿನಕುಲಚಕ್ರವರ್ತಿಯೆಂ
ಬುದನಱಿಪುವಂತರಲ್ದುದು ನಾಭಿಸರಸಿಜಂ
ಪದಮಲಾಚಾರಿಯುತ್ಪತ್ತಿಯಾದಪನೆಂಬ ಮಾತ್ರದೊಳೆ ಭವಪಾಶದಾ।
ಪುದಿದ ೪ಬಲ್ಗಟ್ಟಳಿವ ತೆಱದಿಂದ೪ ಸಡಿಲಲಂ
ಗದ ಬಿಗಿಪು ಗರ್ಭಿಣಿಗೆ ನವಮಾಸ೫ಪೂರ್ಣವಾ೫
ದುದು ತದ್ವಿಲಾಸಿನಿಯ ಸಂ೬ತಸ೬ದ ಮುಂದೆ ನಸುಬೇನೆಯ
ಪೇಳಲಹುದೆ? || ೪- ೧೪

ಈ ಪುತ್ರನಧಿಕಬಲನಿವನಾತ್ಮದೊಳ್ ಪುದಿದ
ಪಾಪಮುಂ ಕಳೆವ ದುಷ್ಕೃತ್ಯಭೋಗಂಗಳಂ
ಕೈಪೆಂದೆ ಕಾಣ್ಬನೆನಲೆಸೆವ ಹಲಮುಸಲಪಿಚುಮಂದಪತ್ರಂಗಳಿಂದ|
ವ್ಯಾಪಿಸುವ ಪೊಱಮಡುವ ಸತಿಯರ ವಿಧಾನದಾ
ಲಾಪದಿಂ ರಂಜಿಸುವ ಸೂತಿಕಾಗೇಹದೊಳ್
ಭೂಪನ ಕುಮಾರನೆಸೆದಂ ರತ್ನಮಯ ಕನಕಪರಿಯಾಣಮಧ್ಯದಲ್ಲಿ ||

೭ಸಲ್ವ ಸಗ್ಗಂ ನೆಲಕೆ೭ ಕಾಲ್ವಟ್ಟಿಯಾಗೆ ಬಂ
ಬಲ್ವಿಡಿದು ನಡೆತರ್ಪ ಬಲ್ಪಡೆಗಳಮರಿಯರ
ನಾಲ್ವಡಿಸಿದಂದದಿಂಗೋಲ್ವಿಲ್ಲ ಸೈಪಲನುಱ೮ ಪೋಲ್ವ ಪುರ್ಬುಗಳ ರತಿಯ।
ಗೆಲ್ವ ಸೊಬಗಿಂದುಱ೮ ಕುಕಿಲ್ವಕ್ಕಱಿಂದ್ರೈದೆ
ಜೋಲ್ವ ಮುಡಿಯಬಲೆಯರೆಳಲ್ವ ಮನದಮಳಿನ ಮ
ರಲ್ವ ಕಣ್ಣಿಂ ನೋಡೆ ಚಲ್ವ ಕುವರನ ಸೊಬಗು ಸಾಲ್ವುದೇ ಭೂತಳದೊಳು ||೧೦-೩೩

೧ ತಾ ಕಾಣ್ಬ[ಅ] ೨ ಗರ್ಭರಾಜ್ಯವನಾಳ್ದು [ಅ.ಇ] ೩ ದಳೆ [ಆ.ಈ.ಉ.ಒ.ಓ.ಗ]
೪ ಬಲ್ಗಟ್ಟು ಸಡಿಲುವ ತೆರದೆ [ಅ.ಇ] ೫ ವಾಗಲಾ [ಅ.ಉ.ಓ.ಗ] ೬ ಪದ [ಒ.]
೭ ನಲ್ವಿನಿಂದಂ ಸಗ್ಗ [ಅ] ೮ ನೆರೆ [ಉ.ಒ].

## ನಾಲ್ಕನೆಯ ಸಂಧಿ

ಪಲ್ಲವಿ ॥ ಒಗೆದುನಾಥ[೧]ವನ[೧] ಕರುಣ[೨]ದು[೨] ಮಂತ್ರಲಕ್ಷಕಂ
ಸೊಗ[೩]ಸುವ[೩]ಗ್ರಜನೊಡನೆ ಬಾಲಲೀಲೆಯ ಕಳೆಯೆ
ಮಿಗೆ ವಸಂತಂ ಬರಲ್ ವನಕೇಳಿಯಲ್ಲಿ ಮೆಱೆಪಂ ಚೋಳಚಕ್ರೇಶನು ॥

ಗಿರಿಜೆಯಮೊಗಂ ನೀಲಕುಟ್ಟಿಮದೊ[೪]ಳಂ[೪] ಪೊಳೆಯೆ
ಸರಸಿಯೊಳ್ ಮೆಱೆವ ತಾವರೆಯೆಂದು ಕೈಸೀ[೫]ಡಿ[೫]
ಶಿರವೆತ್ತಿ ಸಿಂಹಾಸ್ಯಗಣವ[೬]ನ[೬] ಕಂಡೋಡೆ ಬರ್ಪ ತಮ್ಮನ ನವಿಲಿಗೆ ।
ಉರಗನಳ್ಕುತ ಸರಿಯೆ ಕಟ್ಟಳಿದು ಪೊಡೆಯೊಡೆದು
ಸುರಿಯಲುಂಡಲಿಗೆ ಬಂದಪ್ಪಿ ಹೊಟ್ಟೆಯು ಕಟ್ಟಿ
ಕರಿಮುಖನ [೭]ಮುದ್ದು[೭]ಬೇಡಲ್ಕೆಸುಂಡಿಲ[೮]ನೀಡೆ[೮]ನಗುವ ಶಿವ
ರಕ್ಷಿಸೆಮ್ಮಂ ॥ ೪–೧೫

ವೈರಿಭೂಮಿಪರ ವಕ್ಷನನೊದೆವ ತಿಱಿವೆ ಚರ
ಣಾರವಿಂದಮನಾಡಿಪಂ ತನಗೆ ಮುಂದೆ ಮಾ ।
ರಾರಿಪ್ರಸನ್ನಕಾಲದೊಳಾಗಸದೆ ಬರ್ಪ ಮಣಿಖಚಿತ ಪುಷ್ಪಕವನು ।
ಆರಯ್ವ ತೆಱದೆ ಲಂಬಣರತ್ನಕಂತುಕ ಮ
ಹಾರಾಗಮಂ ನೋಳ್ಪನಂಗಮೋಹಿಗಳಂ ಕು
ಮಾರನಪಹಾಸ್ಯಮಂ ಮಾಳ್ಪಂತೆ ನಸುನಗುವನೈ ಬಾಲಲೀಲೆಯಲ್ಲಿ ॥

ದೇಹಮೋಹದ ವಿರಾಗದ ಪಣ್ಣನೆನಗೆಮು
ನ್ನಾಹ ಸಿರಿಯಾಳನಣ[೯]ಗಂ ಸವಿದನದು ತನಗೆ
ಬೇಹುದೆಂದಕ್ಕೆಗೆಯ್ವಂತಳುತ್ತಂ ವೀರಸೋಮವ್ವೆಯುಂ ಸುಂಗಿದಾ ।
ಸಾಹಸರ್ವೇ ಬಿಡು ನಿನ್ನನೊಳಿಕೊಂಡೆನೆನ್ನ [೧೦]ಚಿ
ದ್ದೇಹ[೧೦]ದೊಳಗೆಂದು [೧೧]ಸೊಡರಂ[೧೧] ನೋಡಿ ನಗುವನು
ತ್ಸಾಹದಿಂ ಪಂಚಶಕ್ತಿಯರ ಸೆಱೆವಿಡಿವೊಲಬಲೆಯರ ಮುಂದಲೆವಿಡಿವನು ॥

---

೧ ವ [ಗ] ೨ ದಿ [ಅ,ಆ], ದಿಂ [ಗ] ೩ ಸೀವ [ಆ], ಸಿವ [ಬ.ಓ] ೪, ಳಂ (ಅ.ಗ) ೫ ಡೆ (ಅ.ಇ.ಉ.ಬ.ಓ ಗ) ೬ ನು (ಅ.ಇ.) ೭ ಮುದ್ದ (ಗ) ೮ ನೀಯೆ (ಅ.ಇ.ಉ.ಬ.ಓ) ೯ ವ (ಆಓ.ಗ) ೧೦ ಚಿದ್ದೇಹ(ಆ) ೧೧ ದೀಪವ(ಅ.ಇ.ಓ)

ವಸುಂ೧ತನಂ೧ ಪೊರ್ದದಂತಾವ್ಯಾಘ್ರ೨ಪಾದ೨ನಡಿ
ಬಿಸಜಮಂ ತಾಳ್ದಂತಿರೆಳಲಿಟ್ಟ ಪುಲಿಯುಗು೩ರಿ
ನೆಸಕ೩ದಿಂ ಭ್ರೂಮಧ್ಯದರಳೆಲೆ ಪರೀಕ್ಷಿಸೆಂಬಂದದರಳಿಲೆಯ ಚೆಲ್ವ।
೪ನೊಸಲಿನಿಂ೪ ಫಲವಾಸನೆಯನಾ ಪ್ರಸಾದ ಮುಖ
ರಸವಮಾಡುವೆನೆಂಬಿ೫ನಂ೫ ಮೆಱೆವ ಕಿವಿಗೆ ರಂ
ಜಿಸುವ ಮಾಗಾಯ್ಗಳಿಂದೆಸೆದನಾ ಮಂತ್ರಲಕ್ಷಂ ಕ್ರಿಯಾಜ್ಞಾನಪಕ್ಷಂ॥ ೪-೧೯

ದೋಷಮಂ ಕಂಡೊಡಂ ಬಳುಕುವೆಂ ಶರಣರೆನ
ಗಾಸೆ ಪಿಂಗೋಡೆ ಪಿಡಿಪೆಂ ತತ್ಪದಾಬ್ಜಮಂ
ಭಾಸು೬ರಾಚಾರದಿಂ೬ಗಟ್ಟಡಿಯನಿಡುವೆನಾ ಮೃತ್ಯುವಿನ ನಡುದಲೆಯೊಳು।
ಮೋಸವಿನ್ನಾವುದೋಡಾಟವೆನಗನ್ಯಧನ
ದಾಸೆಯೆಂಬಂತೆ ಕೈಕಾಲ್ಗಳಿಂದಂ ನಡೆವ
ಲೇಸೆನಿಪ ಭಿತ್ತಿಯಂ ಪಿಡಿದು ಮೆಲ್ಲಡಿಯಿಟ್ಟು ಪರಿದಾಡಿದಂ ಕುಮಾರಂ॥ ೪-೨೦

ಹಿರಿಯಮಗನಾಡುತಿರೆ ಲಿಂಗಂ ನಡಿಲ್ದು ಬಿ
ಳ್ದಿರಲ೮ಱಿ೮ಪಲವನಸುವ ಬಿಡೆ ಲಿಂಗಮಂ ೭ಕಂಡು೭
ಧರಿಸಲೊಡನೇಳಲವನಂ ತಂದೆ ಪೊಗಳೆ ಜಱಿದಾ ಕಿಱಿಯನಂ ಪರಿಕಿಸೆ।
ಇರುಳಯ್ಯನಭವನಂ ಕೊಂಡೊಯ್ಯಲಿಱಿಯಲವ
ನರುಣೋದಯದೊಳೀಯೆ ಜೀವಿಸಿದ ಸತ್ಯೇಶ
ಶರಣ ಚಾಮಯ್ಯನಣುಗರ ಪೋಲ್ವ ನೃಪಕುಮಾರಕರು ಬರ್ದಿಂ ಬಳೆದರು॥

ಅಮೆ ವಾಮೆ ಸಂಪೂರಣೆಚ್ಛಾಯೆ ಹೈಮವತಿ
ಸುಮನಸಾಜ್ಯೋತ್ಸ್ನ ಸ್ವಧಾಕಾಂತಿ ಸುಶ್ರೀಗ
ಳಮರ್ದಿ*ರ್ದ ಹ್ರೀ ರೇವತಿ ಪ್ರೀತಿ ತುಷ್ಟಿ ಪುಷ್ಟಿಗಳೊಡನೆ ತನ್ಮಾನಸಲಸಿಲ।
ಅಮೃತಾಖ್ಯ ಷೋಡಶಕಲಾಭರಿತ ಪೂರ್ಣಚಂ
ದ್ರಮನಂತೆ ರಾಜಿಸುವ ಹದಿನಾಱು ಬರಿಸದೊಳೆ
ರಮಣೀಯವಾದನಗ್ರಜನೊಳ್ ಕುಮಾರ ಲಕ್ಷಣವಾಕ್ಸುಧಾಪೂರಾ॥

---

೧ ಭಾವ (ಅ.ಓ) ೨ ಪದ (ಅ ಈ.ಉ.ಒ.ಗ) ೩ ರ ಮುಸಕ (ಈ.ಉ.ಒ.ಓ), ರು ಮುಸಕ (ಅ), ರ ದೆಸಕ (ಗ) ೪ ನೊಸಲಿಂದ (ಅ.ಈ.ಉ.ಓ.ಗ) ೫ ದಂ (ಗ) ೬ ರ ಚಾರಣದಿಂ (ಈ) ೭ ತಂದು (ಅ.ಈ.ಉ.ಒ.ಓ ಗ) ೮ ಸೆ (ಅ.ಉ.ಒ.ಓ)

9

ಸ್ಮರ ವಿಕ್ರಮಾಂಕ ದೇವೇಂದ್ರ ಯಕ್ಷೇಶ್ವರರ
ಶರ ಶಸ್ತ್ರ ಕರಿ ತುರಂಗಾಭ್ಯಾಸದಲ್ಲಿ ಸರಿ
ದೊರೆ ಕುಮಾರಂಗೆಂಬುದನುಚಿತಂ ತ್ರಿಪುರಸಂಹಾರನೇಣಾಧಿನಾಥ|
ವರನನಿಜೀವತ್ತಾಂಡಿಯರ ಚೊಕ್ಕನೈನಾರ
ಕರುಣದೆ ವಿರಾಜಿಸುವರೀನಲುಚಿತವಾ ಲಸ
ದ್ವರಗುಣಿಯ ಶಿವಭಕ್ತಕುಲಶಿರೋಮಣಿಯ ದಿವ್ಯಜ್ಞಾನ ಗಗನಮಣಿಯ ||*೫-೧

ಕುಸುಮರಜದಿಂದೆ ಫಲರಸದಿಂದೆ ನಾಡೆ ನ
ರ್ತಿಸುವ ಶಿಖಿಯಿಂದೆ ತಂಬೆಲರಿಂದನಂತ ರಂ
ಜಿಸುವ ಕನಕಾಬ್ಜಪಜ್ತಿಗಳ ನಿರ್ಮಳ ೪ಜೀವನಂಗಳ ಸರೋವರಂಗಳಾಳ |
ಒಸೆದು ಸಾರ್ದೊಪ್ಪುತಿಹ ಹಂಸಮಿಥುನಂಗಳಿಂ
ದೆಸೆನಷ್ಟಮೂರ್ತಿವತ್ತಾದ ತದ್ವನದೇವಿ
ವಸುಧಾಧಿಪತಿಯನುಪಚರಿಪಂತೆ ಮೆಱೆದುದಂತಾ ವನಂ ಮಿಗೆ ಪಾವನಂ || ೫-೪

ಪೂರ್ಣಚಂದ್ರಾನನಾಕರ್ಣನಯನದ ಸಮಾ
ಕೀರ್ಣ೫ವಹ೫ ಮಲ್ಲಿಗೆಯಲರ್ ನಾಡೆ ರಾಜಿಪ ನ
ವಿರ್ಣವಕದೊಳ್ಮುಡಿಯ ಕರ್ನೈದಿಲಮಳ್ಗಿ *ವಿಯುದೀರ್ಣತಾಪಸಧೈರ್ಯದ |
ಸ್ವರ್ಣಘಟಕುಚಯುಗದ ಚೂರ್ಣಹಿಮತಾಂಬೂಲ
ಪರ್ಣಪೂಗಂಗೊಡುವೆಲರ್ನಯದ ಬಿಜ್ಜಳದ
ವರ್ಣನೆಯ ಸತಿಯರೊಳ್ ಮಾರ್ನಡೆದಳರಸಿ ಸೌಖ್ಯಾರ್ಣವದ ತೆರೆಗಳಂತೆ ||

ಇಂದೀವರಾಕ್ಷಿಗಳಿಗಾ ಕಮಲಮುಖಕೆ ಸಖ
ವೆಂದೆನಿಸಿತಾ ರಾಜಹಂಸಗಮನಂ ಬಳಿಕ
ಮಂದಗಜಯಾನದಿಂದೂರಿಂಗೆ ಪೊಱಗಾಗಿ ಚೆಲ್ವಿನೊಪ್ಪುವ ಬಾಸೆಗೆ |
ಹಿಂದಾದೆವೆಂದದಿರುವಂತೆಸೆವ ಪೊಱವಾರ್ಗ
ಳಿಂದೊಪ್ಪುವಾ ಸತಿಯರಾನಂದದಿಂದಲೆ
ಯ್ತಂದರಾಕೆಯ ಕೂಡೆ ತಾಪಸರು ಕೆಟ್ಟೋಡೆ ಕಾವನಲರಂಬ ಪೂಡೆ ||

---

೧ ಂಗೆ (ಅ.ಆ.ಇ.ಗ) ೨ ನೆ (ಅ.ಇ) ೩ ಭಕ್ತ (ಅ.ಇ.ಈ.ಉ.ಒ) † ಈ ಪದ್ಯ 'ಓ' ಪ್ರತಿಯಲ್ಲಿ ಕೈಬಿಟ್ಟುಹೋಗಿದೆ. ೪ ಜೀವನಗಳ ಸರಸಿಯ ತಡಿಗಳಾ (ಒ.ಓ) ೫ ತೆಯ (ಆ.ಈ.ಉ.ಓ.ಗ)

ಎಸಗಲ್ಕೈರಾವಂತತದಿತವಾದ್ಯ[೧]ವೆಂದು ನಿರ
ವಿಸುತಲಾ ಪುಂಡರೀಕಾಕರಂಬೊಗಲು ರಂ
ಜಿಸು ವಾಮನಃಪ್ರೀತಿಯಿಂದ ಕುಮುದಾಂಜನಾಲಂಕೃತಾಕ್ಷಿಯ[೨]ರಬ್ಜದಾ[೨] ।
ಪೊಸ ಪುಷ್ಪದಂತರಾಳದ ಪರಾಗದೊಳು ಸಮ
ರಸವಾದ ನೀರ್ದುಳುಂಕಿದರು ಖೋಯೆಂದು ಗ
ರ್ಜಿಸುಲಂತಾ ಸಾರ್ವಭೌಮನ ಮಹಾಸುಪ್ರತೀಕನುಂ ನೆಱೆ ಮುಸುಕಲು ॥

ಕಂಬುಕಂಧರೆಯರಾಡಂಬರದ ರತ್ನ[೩]ಮಯ[೩]
ಚೆಂಬೊನ್ನಿನಂಡೆಗಳ ತುಂಬಿ ಪರಿಮಳಮಿಶ್ರ
ದಂಬುಗಳ ಕಟಕಕ್ವಣರೆಂಬ ರವದಬಲೆಯರು ಮುಂಬರಿದು ಚೆಲ್ಲು[೪]ವಲ್ಲಿ[೪] ।
ಅಂಬರದೊಳಿಯ್ದೆ ನೆಱೆ ಬಿಂಬಿಸುವ ಸುರಚಾಪ
ವೆಂ[೫]ಬೊಲ್[೫] ಪಯೋಧರ[೬]ವ[೬] [೭]ಚುಂ[೭]ಬಿಸುವ ಮ[೮]ಧಾರೆ
ಶಂಬರಾಹಿತನ ಕೂರಂಬನಿಳಿಕೆಯ್ದುವೇನೆಂಬೆನಾ ಜಲಕೇಳಿಯಾ ॥

ಕಡೆಗಣ್ಣ ಕಾಂತಿ ಸುಲಿಪಲ್ವೆಳಗು ನಖದ ಬೆ
ಳ್ಪಡಸಿ ಪಸರಿಸೆ ಕೊಳನ ಜಲವೆಯ್ದೆ ಚೆಲ್ವ ಪಾ
ಲ್ಗಡಲಂತೆ ಮೆಱೆಯಲು ಮುಳುಂಕಿ ನಿಂದಮೃತವತಿ ಸಾಕ್ಷಾತು ಕಮಲೆಯಿವಳ ।
ಎಡೆಯೊಳ್[೯]ಳಾಂ ಸತ್ಯೇಂಪ್ರನಿರ್ಲೆನೆಂದು[೯] ಪೊಱ[೧೦]ಮಡಲು
ಕಡೆಗೆ [೧೦]ಪುರುಷೋತ್ತಮಂ ಪೋಗ[೧೧]ದಿರು[೧೧] ಬೇಡ ನಾಂ
ಬಿಡನೆಂದು ಮೌಕ್ತಿಕದ ಸೇಸೆದಳಿವಂತೆ ಚೆಲ್ಲಿದಳು ನೀರ್ವನಿಗೆದಱಲು ॥

ಇಂತು ಜಲಕೇಳಿಯಂ ರಚಿಸಿ ಪೊಱಮಟ್ಟು ಮಿಗೆ
ಸಂತಸದೊಳ್ಪಿದೆ ದಣಿಬವನುಟ್ಟು ಪಣೆಯೊಳೆ ಸ
ಮಂತು ಭಸಿತವನಿಟ್ಟು ವನಿತಾಜನ[೧೨]ಕ್ಕಲಂಕಾರವಸ್ತ್ರಗಳ[೧೨] ಕೊಟ್ಟು ।
ಕಾಂತೆಯರ ಕೆಲಬರಂ ಕುಸುಮಕ್ಕೆ ಬೀಳ್ಕೊಟ್ಟು
ಮುಂತೆ ರಚಿಸಿರ್ದ ಗದ್ದುಗೆಗೆ ಬಂದಳವಟ್ಟು
ತಿಂತಿಣಿಸಿದುಪಕರಣಮುಂ ಶಿವಕುಮಾರನೃಪನೀಕ್ಷಿ[೧೩]ಸಿದನಳ್ತಿವಟ್ಟು[೧೩] ॥ ೫—೫

---

೧ ತಾಡಿತವಾದ್ಯ (ಅ ಆ.ಇ.ಈ.ಉ.ಓ), ತಾಧಿತವಾದ್ಯ (ಒ) ೨ ರೆರದರಾ (ಈ) ೩ ದಾ (ಈ.ಗ) ೪ ವಾಗ (ಅ.ಇ.ಓ) ೫ ಬಾ (ಆ.ಈ.ಗ) ೬ ಂ (ಈ) ದಿ (ಅ) ೭ ತುಂ (ಅ) ೮ ಖಾ (ಆ ಈ.ಗ) ೯ ನಿಂದೆಯೆಂದು; ೧೦ ಮಡೆ ನೀನೆ (ನೀವೆ=ಈ); ೧೧—(ಆ.ಈ.ಉ.ಒ.ಓ.ಗ) ೧೨ ಕ್ಕೆ ವಸ್ತ್ರಾಭರಣತತಿಯ (ಆ.ಈ.ಉ.ಒ.ಗ) ೧೩ ಸಲು ಚಿತ್ತವಿಟ್ಟು (ಅ.ಇ)

ಚಾರು ಸದ್ಯೋಜಾತ ವಾಮ[೧]ದಾ[೧]ಘೋರ ತ
ತ್ಪೂರುಷೇಶಾನದಿಂ ಧರೆಜಲಾನಲವನಿಲ
ತಾರಾಧ್ವಮವಱಿಂ ನಿವೃತ್ತಿ ಪ್ರತಿಷ್ಠೆ ವಿದ್ಯಾ ಶಾಂತಿ ಶಾಂತ್ಯತೀತೆ |
[೨]ಕಾರಣದಿ[೨] ಕಪಿಲಾಸಿತಾರುಣಾಮಲಚಿತ್ರ
ಸಾರನಂದಾ ಭದ್ರೆ ಸುಮನೆ [೩]ಸುತಿಲೆಯು[೩] ಸುರಭಿ
ಯಿೞರವ್ಯ ಪಶುವಿಂ ವಿಭೂತಿ ಭಸಿತಂ ಭಸ್ಮವಾ [೪]ಕ್ಷಾರ[೪] ರಕ್ಷೆಯೆಂದು || ೫–೮

ಹೊನ್ನಿತಂದೆಗಳನಣುಮೂರ್ತಿಯಾಯ್ದಕ್ಕಿಯ
ತ್ಯುನ್ನತದ ಮಾ[೫]ರಿದೇವಗಳ ಹರದತ್ತಾರ್ಯ[೫]
ರಂ ನಾಚಿ ಗೊಗ್ಗವ್ವೆಯಂ ಕಲಿಯ[೬]ನಾ[೬]ರುವಂ ಕರಿಕಾಲಚೋೞನೃಪನಾ |
ಚಿನ್ನಿಧಾನದ ರೇಚಿತಂದೆಗಳ ಪಾದಮಂ
ತಾಂ ನೆನೆದು ಲಸದಷ್ಟ[೭]ವಿಧ[೭] ಪೂಜೆಯಂ+ರಚಿಸಿ
ದಂ ನವ್ಯಸುಗುಣಿ ಭೂಪಾಲನುತಶೀಲ ಸುವಿಶಾಲ ಸದ್ಭಕ್ತಿಲೋಲಾ || ೫–೧೨

ಪರತರಬ್ರಹ್ಮಾನವರತಸಂತೃಪ್ತಾಕಿ
ಧರ ತರಣಿರೇಂದುವೃಕ್ಸುರತತಿಸ್ತುತ್ಯ ಭಾ
ಸ್ಕರತನುಭವದ್ವಿಷಾವಿರತ ನತಸಜ್ಜನಾಮರ[೮]ತರೂ[೮]ಕ್ಷಪಗ ವರದ |
ಕರತಳ ಶ್ರೀನಾಥನರ ತತ್ತ್ವ[೯]ಚಯ[೯]ಪ[೯] ಮುರ
ಹರತನುಜಶತ್ರು ನಿರ್ಜರತಟನಿಭೃನ್ಮಹೇ
ಶ್ವರಲನೆ[೯] ಹರ ಸಲ[೯]ಹೆಂದು[೯] ನಿರುತ[೧೦]ಂವೆಱಗಿದ[೧೦]ಂ ಭಯಾತುರ

[೧೧]ತನ್ನೃಹರಿ[೧೧]ಶರಭಗೆ † || ೧೦–೩೩

---

೧ ದೇವಾ (ಅ.ಈ.ಉ.ಒ.ಓ), ದಾ (ಅ.ಆ.ಇ.ಗ) ಈ ಪಾದದಲ್ಲಿ 'ದೇವಾ' ಎಂಬ ಪಾಠವನ್ನು ಸ್ವೀಕರಿಸಿದರೆ ಎರಡು ಮಾತ್ರೆ ಹೆಚ್ಚಾಗುತ್ತದೆ. ಆಗ್ಗೆ ಮುಂದೆ ಇರುವ 'ತತ್' ಎಂಬ ಪದವನ್ನು ಬಿಡಬೇಕಾಗಿ ಬರುತ್ತದೆ. ಇದೂ ಸರಿದೋರದೆಂದು ಕಾಣುತ್ತದೆ. ೨ ಕಾರಣದೆ (ಅ.ಉ.ಗ), ಕಾರುಣದೆ (ಈ) ೩ ಸುಸುಲೆ (ಉ), ಸುಸಿಲೆ (ಒ) ೪ ಕ್ಷಾರ (ಅ.ಈ.ಗ) ೫ —;+ ಮಿಂಗೆ (ಅ.ಇ) ೬ ತರು (ಆ.ಈ.ಗ) ೭ ನಿಚಯು (ಅ.ಇ) ೮ ಕ (ಅ.ಇ.ಈ.ಗ) ೯ ಹೆಸರ (ಅ.ಇ) ೧೦ ಸಟಿಸಿದ (ಅ.ಇ) ೧೧ ತ ನೃಹರಿ ಶರಭಗೆ (ಈ.ಗ), ಸಂ ನೃಹರಿ ಶಿವನನು (ಅ.ಇ). †ಈ ಪದ್ಯ ಉ, ಒ ಮತ್ತು ಓ ಪ್ರತಿಗಳಲ್ಲಿ ಇಲ್ಲ.

## ಐದನೆಯ ಸಂಧಿ

ಪಲ್ಲವಿ || ಗೆಲುತ ಸಿಂಹಳನೃಪನ ತತ್ಪುತ್ರಿಯರ ಮಂತ್ರಿ
ಸುಲಭ ಸುಕುಮಾರರ್ಗೆ ಮದುವೆಯಂ ಮಾಡಿ ಭೂ
ಲಲನಾಧಿಪಂ ಚೋಳನಾರಾಧಿಸುತ್ತಿರ್ದನಂದುಮಾವಲ್ಲಭನನು ||

ಬೇಡವೆಲೆ ದೇವಯೆನ್ನೊಳು ೧ಗರ್ವ೧ ನಿನ್ನ ಗುಣ
ಮಾಡಿದೊಡೆ ಹುರುಳಿಲ್ಲ ನಂಬಿ ಯೇಕಾಂತದೊಳ್
ಕೂಡುವಂಗನೆಯಪ್ಪ ಪರವೆಣ್ಣ ಮೊಲೆಯೊಳಗೆ ನೀಂ ಕೈಯ್ಯ ನೀಡಲಾತಂ |
೨ನೋಡುತೆಲೆಲೇ೨ ಶಿವನೆ ಎಂದೊಡ೩ಳ್ಳುತ್ತೆ೩ ಕೊಂ
ಡಾ೪ಡಿ೪ ಸಾವಿರ ಹೊನ್ನ ತೆತ್ತ ಮರ್ಮವನೀಗ
ಲಾಡುವೆನು ಶರಣರೊಳ೫ದೇಕೆ೫ ನೀನೇ೬ನ೬ಗೆ ಭಕ್ತಿಯ ಲಂಚವಿತ್ತು
ಬರ್ದು*೭ಕು೭ || ೬-೧

ಆ ರತ್ನದಧಿಕ ಪ್ರಕಾಶಮಂ ನೋಡುತ್ತ
ಭೂರಮಣನಖಿಳ ವಣಿಜರ ಪರೀಕ್ಷಿಪುದೆನೆ ಮ
ಹಾರಾಯ ಚಿತ್ತೈಸು ನವಕೋಟಿಬೆಲೆಯೆನಲು ವಿಷ್ಣುವಿನ ಬಾಳ್ಕೆಯ್ಯೆಸೆ |
ಸಾರಕೌಸ್ತುಭವೆನಲು ಜಾರಗೋಪಾಂಗನೆಯ
ಪೇರುರದ ಸೋಂಕು ಚಿಂತಾರತ್ನವೆನೆ ತ್ರಿದಿವ
ದೂರ ಸಂಪತ್ತಲಾ ನಾರದಮುನೀಶನ ಮನೋರಾಗಮೆನೆ ಮೆಚ್ಚಿದಂ || ೬-೨

ಸೂರಕಿರಣಂಗಳಿಂ ಬೆಂದು ತಲೆಬಿರಿದು ಮದ
ವಾರಣದ ಮುತ್ತುಗಳು ಸುರಿಯೆ ಕೆಱೆಯುಗೆ ಕಾಯ್ದು
ನೀರಿಂದೆ ಮೆಯ್ಯ ಸಮ್ಮಂ ಸುಗಿದು ಬೆಳ್ಳಾನೆಯಾದ ಬಳಿಕಿಳೆಯೊಳಿರದೆ |
ಸಾರಿತದು ಸಗ್ಗಮಂ ೮ಪಿಂದಬ್ಧಿ೮ಯಂ ಪೀರ್ದ
೯ವೀರ್ರ೯ ಕುಂಭಜನಾಮವಾ ಮಣಿ೧೦ಂಗೆ ಸಲಲಳ್ಕಿ೧೦ಂ
ವಾರಿಯಱತಾ ತಟಾಕಂ೧೧ಬೀಟಿ ವಿರಿ೧೧ದುದೇನೆಂಬೆ ಬೇಸಗೆಯುಗ್ರಮಂ || ೬-೫

---

೧ ಬಿಂಕ (ಅ.ಇ) ೨ ನೋಡುತ್ತೆಲೆಲೇ (ಇ.ಈ), ನೋಡುತೆಲೆಲೆಲೆ (ಗ) ೩ ಳ್ಕಿ(ಇ.ಗ), ಳ್ಳುತೆ (ಅ.ಈ) ೪ ಡೆ (ಈ.ಗ) ೫ ಗೇಕೆ (ಉ.ಒ.ಓ) ೬ ಮ (ಈ.ಗ) ೭ ಕಾ (ಅ.ಗ) ೮ ಪಿಂಗದ (ಈ) ೯ ಧೀರ (ಅ.ಇ) ೧೦ ಗಿರಲ್ಕಳುಕಿ (ಅ.ಇ.ಓ) ೧೧ ಬೀಡೆಯಾ (ಈ.ಗ), ಬೀಟೆವಂ (ಅ.ಇ.ಓ)

ಆಗಮು ಕ್ಷ್ನಪ ಶಾಬರವ್ರಾತ ಶಾಂಡಿಲ್ಯ
ರಾಗಿಸುವ ಲೇಖಾ ಜಟವ್ರಾತ ೧ಶಲ್ಯಾದಿಂ
ಯೋಗದಿಂ ಪೊತ್ತಗೆಗಳಂತಾದಧೀಚಿಹರಿಗಳ ಯುದ್ಧರಂಗದಂತೆ|
೨ಮೇಗ೨ ೩ಪಕ್ಷಣ೩ದಂತೆ ದುರ್ದಿನದ ೪ಘನಳಗೌತ
ಮಾಗಾರದಂತೆ ಸುರಪುರಿಯಂತೆ ವರಮುಹಾ
ಭಾಗಮುನಿಯಂತೆ ಕೌರವಸೇನೆಯಂತೆ ರಾಜಿಸುವ ಪೇರಡವಿಯಲ್ಲಿ|| ೬-೬
ಕೋರಿವೇಡಿತಿಯೆನ್ನ ಕಣ್ಗೆಣೆಯೆ ನೀವೆನು
ತ್ತಾರುತೆರಲೆಗಳನೆಸಲದು ತಾಗಿತಿಲ್ಲ೫ದೇಂ೫
ಕಾರಣಂ ಕೇಳಬಲಿಯಾವೆಂದುದಿಲ್ಲವದು ಕವಿವಚನಮೆನಲು ಮುಳಿದು|
ಕೂರಂಬಿನಿಂದಲೆಚ್ಚೊಡೆ ಕಣ್ಣ ತಾಗಿತಂ
ದಾರಾಕ್ಷಸಾರ್ಯಶುಕ್ರನನದುನಿಮಿತ್ತಂ ವಿ
ಚಾರಿಸಲ್ಕವಗೊಂಡು ಕಣ್ಣಿಲ್ಲ೬ವದು೬ ದೃಷ್ಟವಲ್ಲದಿವಳಂಬು ಹುಸಿಯೆ|| ೬-೭
ಶ್ರೀ ಕಲಿಗಣೇಶ್ವರಂ ಸೂಳೆ ನಿಂಬಕ್ಕ ಮಹಿ
ಮಾಕರವೃಷಾಧಿಪಂ ಪ್ರಸಲೆಯಾಂಡಾರು ಸು
ಶ್ಲೋಕ ಭೋಗಣ್ಣನುಂ ಬಾಚರಸರಿಯ್ದು ಮಾರಣ ಮೋಹನೋಚ್ಚಾಟನಂ|
ಸ್ತ್ರೀಕೃತಸ್ತಂಭನಂ ಸದ್ವಶೀಕರಣಮೆಂಸೆ೭
ವಾಕರ್ಷಣಾದಿ ಷಟ್ಸಾಮರ್ಥ್ಯ೮ಮುಮು೮ಸಾ ಪಿ
ನಾಕಿಗಾದೊಡೆ ಮಾಡಿದವರಣುಗನಿನಗೆಣೆಯೆ ಧರೆಯ ನೃಪಕೀಟಕಗಳು|| ೬-೧೧
ಮೇರು ರೋಹಣ ಪರ್ವತಂಗಳಿಂತೀ ನೃಪಕು
ಮಾರಕರ ಮದುವೆಯುಂ ೯ನೋಡೆ೯ ಚತುರತೆಯಿಂದೆ
ಸಾರಿ ೧೦ಕಂಭವ೧೦ ೧೧ಭಿತ್ತಿಗಳ೧೧ನೆಮ್ಮಿ ಲೋವೆಗಳ ಪತ್ತಿ
ಆರ್ತೆಯೆ ಪಲವು ರೂಪಾದಂತೆ ನಿರ್ಮಿಸಿದ [೧೨ಶಿಖರಂಗಳಡರ್ಮ*೧೨|
ಕೀರಣದ ಪೊಸ ಪೊನ್ನ ಮಣಿಗೆಲಸದಿಂ ಮೆಱೆದು
ದಾರತ್ನಗರ್ಭಾಧಿಪತಿಯು೧೩ಸಿರಿಯೆನೆ೧೩ಮಂತ್ರಿಮಾಡಿಸಿದ ಶುಭಮಂಟಪಂ|| ೬-೨೦

೧ ಶಲ್ಯಾದಿಗಳ (ಅ.ಇ) ೨ ಮೇಘ (ಅ.ಒ.ಓ.ಗ), ಮೇಗೆ (ಈ) ೩ ಪೆಕ್ಕಣ (ಆ) ೪ ವರ (ಅ.ಇ.ಗ) ೫ ದೇಂ (ಅ) ೬ ದುದು (ಆ), ದಮ (ಈ.ಗ) ೭ ಜಿತೆ (ಅ.ಇ.) ೮ ಗಳ (ಅ.ಇ.ಉ.ಒ.ಓ) ೯ ನೋಡಿ (ಅ.ಇ) ೧೦ ಕಂಭಾ (ಆ.ಉ.ಒ.ಗ) ೧೧ ಭಿತ್ತಿಯುಂ (ಅ.ಇ) ೧೨ ಶಿಖರಗಳನಡರ್ಮ (ಅ.ಇ,ಓ) ೧೩ ಸಿರಿಯುಹ (ಇ), ಪಿರಿಯುಹ (ಅ), ಸಿರಿಯುನೆ (ಗ)

ಲಾಳ ನೀಂ ಬೊಕ್ಕಸದ [೧]ಮನೆಯು[೧] ಮುದ್ರೆಗೆ ನಿಲ್ಲು
ಗೌಳ ನೀಂ ಸಂತೈಸು ಗಾಯಕರ ತಿರ್ದು ಪಾಂ
ಚಾಳ ನೀಂ ತಿಲ್ಪಿಗಳ ಗುರ್ಜರನೆ ಕಾಯ್ದಿ ಪುರ್ದರಮನೆಯೊಳೊಳವಾಗಿಲಂ।
ಜಾಳೇಂದ್ರ ನೀಂ ಭದ್ರ[೨]ದುಪರಿ[೨]ಯನಲಂಕರಿಸು
ವೂಳಿಗವನೊಂದೊಂದ[೩]ನುಜಿತಮಾಡಿಯು[೩]ಖಿಳ ಭೂ
ಪಾಳರೆಂದೆಯ್ದೆ ನೇಮಿಸುತಿರ್ದನಾ ಮಂತ್ರಿಪರ್ಯ ನೃಪನಾಪ್ತಕಾರ್ಯ ॥ ೬-೨೧

---

## ಆರನೆಯ ಸಂಧಿ

ಪಲ್ಲವಿ॥ [೪]ಭೂರ[೪]ಮಣ ಸತ್ಯೇಂದ್ರಚೋಳ ಧರಣೀಶನಾ
ಸಾರ ಮಹಿಮಾಕ[೫]ರನ[೫] ಶಿವನ [೬]ಕಾಲಂಗಳೊಳ
ಗಾ[೬]ರಾಧಿಸುತ್ತಿರಲು [೭]ರಾತ್ರಿಯು[೭] ವಿಹಾರಮಂ ಮಾಡಿದರು
ಸುಕುಮಾರರು।

ಹರನೆಂದು ದುಗ್ಧವಾರಿಧಿ ವಿಚಾರಿಸದೆ ಶಂ
ಕರನೆಂದು ತನ್ನ ತಿಂಗಳ ಶಿಶುವ ಕೊಡಲದಂ
ಹರಿವ ನೀರ್ ಮೊಜಿತವ ಹಾವುರಿವ ಕಿಚ್ಚಿನ ಪೊರೆಯೊಳಿರಿಸಲದು ಸನ್ನಿವಟ್ಟು।
ಶರಿರವೆಲ್ಲಂ [೮]ಕಂದಿ ಕುಂದಿತ[೮]ಭವಾ ನಿನ್ನ
[೯]ನೆರೆಯಲಿ[೯]ರ್ದೆನ್ನ [೧೦]ಮೆಯ್ಯ[೧೦]ರೆಯಾ[೧೧]ತೆಂದೆಂಬ
ಗಿರಿಸುತೆಯ ಮಾತಿಂಗೆ ಮೆಚ್ಚಿ[೧೧]ಸಲಿದ[೧೧]ಪ್ಪಿದೀಶ್ವರ[೧೨]ರಕ್ಷಿಸೊಲಿದೆಮ್ಮನು[೧೨] ॥
೭-೧

---

೧ ಭವನ (ಅ.ಇ.ಓ) ದುಪ್ಪರಿ (ಅ.ಇ.ಈ.ಗ) ೩ ಮಾಡಿ ನೀವ (ಅ.ಇ.ಓ) ೪ ಶ್ರೀ (ಈ) ೫ ದಂ (ಅ.ಇ) ೬ ತತ್ಕಾಲಗಳೊಳಾ (ಅ.ಇ.), ಕಾಲಂಗಳೊಳಿಯಾ (ಆ) ೭ ರಾತ್ರೀ (ಅ.ಆ.ಇ.ಈ ಗ) ೮ ಕುಂದಿ ಕಂದಿತ (ಅ.ಇ) ೯ ಪೊರೆಯೊಳಿ (ಅ.ಇ), ಪೊರೆಯಲಿ (ಆ), ನೆರೆಯೊಳಿ (ಉ) ೧೦ ಕೆಸುವ (ಅ.ಇ.ಓ) ೧೧ ಪಾರಲ್ಬ (ಅ.ಇ), ಯಾರಲ್ದ (ಆ) ೧೨ ಸಲಹು ನೀನೆನ್ನನು (ಅ.ಇ)

ವಿವರ¹ಗೆಟ್ಟೆಯ್ದು² ಮಿತ್ರನ ಮೇಲೆ ಪಸಲು ಸಂ
ಗವಿ³ನೆಸಗಿ⁴ ದೋಷಮೊಡನೊಂದಿದುದಱಿ⁵ಂದಳ್ಳು
ಭುವನನಿಧಿಯಲ್ಲಿ ವಿಷಮುಂ ಕುಡಿದು ಬಂದು ಕಣ್ಣೀರನೆಡವಿಡದೆ ಕಱೆದು ।
ತವಕದಿಂ ಘನಘೋಷದಿಂ⁶ದಳಲು⁷ ಪದ್ಮಿನೀ
ಯುವತಿಯು⁸ರುಳ ಮುಖಸುಗಿದು ಮಧುಕರಧ್ವನಿ⁹ಗಳಿಂ¹⁰
ತವೆ¹¹ಪಲುಂಬುವೊಲೆಸೆದುದಾ ವರುಷಕಾಲವಾಹಾಹ! ಬಱಿನೆರ್ದೆ*ಯು

ಶೂಲಾ¹² ॥ ೭-೨

ಹರನ ಪೂಜಾಬಲಕೆ ಕೊಂಡಾಡುತಿರೆ ಶರಣ
ರುರು ಭವದ್ವೇಷಿಗೊಲಿದಿಷ್ಟವೇನೆನಲು ಶಂ
ಕರನಿಂದೆ ಶಾರ್ದೂಲಪದನಖಂಬಡೆದು ಸಂಪಗೆಯ ಮರನೇಱಿ ಬಳಿಕಂ ।
ಶರಿರದ ಲಘುತ್ವಮುಂ ಬೆರ¹³ಳಕಂಗಳ ಪಡೆದು
ವರಿಸಿ ತಪದಬಲೆಯಂ ಜನಿಸಿದಣುಗಂಗಮೃತ
ಶರಧಿಯೆಱಿದರ್ಗೆ ತವನಿಧಿಲಯ ಮೆಚ್ಚಿತ್ತುಳ ಮೆಱೆದೈಪುಲಿತ್ತೊಡೆಯ ಶರಣು ।
ವೈರ¹⁴ದೊಡೆಯರ ಮುಷ್ಟಿ¹⁵ಹತಿಗಂಗವಿತ್ತು ಮದ
ನಾರಿಯೆಳ್ಕೊಣಗುತಿರೆ ಕಾಪಿನಾಳ್ಗಳ ಕದ್ದು
ಸಾರಿಯಾಲದ ಮರನ ಕೊಂ¹⁰ಂಬೇಱಿ¹⁰ಂಧುವಿನ್ಮಿಕ್ಕಲಾಗಿ ಪಿಡಿದೊಯ್ಯೆ ಚೋಳ ।
ಭೂರಮಣನೀಶಂಗೆ ನೀಂ ¹¹ನಿನಗೆ ತೊಳ್ತಾನು¹¹
ತಾರೆಂದು ಬಾಯ ತಿಲಮುಂ ಕಳೆದು ಮೆಲಲೀವು
ತಾರಾಯು ¹²ಸಹಿತ¹² ಹರನೊಳು ಪೊಕ್ಕು ಮೆಱೆದ ಶಿವಖಣಿಭಕ್ತರಡಿಗೆ ಶರಣು ॥
ಭೂಲೋಲನಣುಗನಾನೆ¹³ಗಳ¹³ ದಾಂಟಿಪ ಬಾಲ
ಲೀಲೆಯವನೀಪಟ್ಟಮಕುಟಮುಂ ಧರಿಸೆ ನೃಪ
ಜಾಲವಳ್ಕುತಲೋಡೆ ಕೇಳಿ ಧರೆಯಂ ಬಿಸುಟು ಪೊನ್ನಾಂಬಲಾಧೀಶನಾ ।

---

೧ ಪುಳಿದಾನೆ (ಈ.ಉ.ಒ.ಓಗ), ಮಳಿದಾನೆ (ಅ) ೨ ಮಾಡಿ (ಅ.ಇ) ೩ ದಳಲ್ದು (ಅ.ಇ), ದಳಲ್ದ (ಉ.ಓ) ೪ ರ (ಅ.ಈ.ಉ.ಒ.ಓ.ಗ) ೫ ಗಳಂ (ಅ) ೬ ಯಳಲ್ವಾ ಕಾಲದಭವ ಪೂಜೆಗೆ ನೃಪಂ ಗಣನಿಕರಮುಂ ಪೊಗಳಿದಾ (ಅ.ಇ) ೭ ಲ್ಗಳಂ ತಾಂ ತಳೆದು (ಅ.ಇ) ೮ ಯಚ್ಚನಿತ್ತು (ಅ.ಇ.*), ಯಚ್ಚಕಿತ್ತು (ಉ.ಓ) ೯ ದಯ್ಮಗಳ ಕರ (ಅ.ಇ), ದೊಡೆಯಂ ಮುಷ್ಟಿ (ಅ) ೧೦ ಬಡರಿ (ಅ.ಇ.) ೧೧ ತೊಳ್ತುನಾ (ಅ), ತೊಳ್ತುವಾಂ (ಅ.ಈ.ಗ) ೧೨ ನೊಡನೆ (ಅ.ಈ.ಉ.ಒ) ೧೩ ಯನು (ಅ.ಈ)

ಱಲ[೧]ಯದೊಳಂತಥಮವೇಷದಿಂ[೧] ರಜವುಡುಗು
ತೋಲ್ಸೈಸಿ ಬಲಿಗೆವಱಿದಾ ಪ್ರಸಾದಂಗೊಳಲು
ಶೂಲಿ ಮಱಿಪಿಟ್ಟೊಳಗುಮಾಡಿಕೊಂಡಾ [೨]ಭಕ್ತ[೨]ರ್ಸೈವಡಿಯನಾರ್ಗೆ ಶರಣು ||

ಹಾಳೆಯೊಳಗಣ ಶೇಷಮಂ ಶುನಕನುಣಲೆಯ್ದಿ
ಕೈಲಾಸದಿಂದಿಳಿದು ಶಿವನ ಕರುಣದ ಸಿರಿಯ
ಚೋಳನಾಗಿರ್ದಱಿದು ಬಂದೆಱಗೆ ತಿಳಿದು ಶಂಕರನಿಲಯಕೆಯ್ದಿ ಕರೆದು ।
ಕೇಳಭವ [೩]ಕೊಟ್ಟೈ ಪ್ರಸಾದಿಗಂ ಭವವ ನಿ
ನ್ನಾ[೩]ಳುತನವೇನೆಂದು ಮುಖ[೪]ವ ತಿವಿದಡೆ[೪] ಹರಂ
ತೋಳೆರಡಱಿಂದಿರ್ವರ[೫]ಪ್ಪೆಯುವಿ[೫]ದೆಸೇ[೬]ದ ನುತ ನೈಶನಾರಡಿಗೆ[೬] ಶರಣು || ೭-೫

ಗಂಗೆಯಂ ಪಣೆಯೊಡ್ಡಿ ಮುಂಡಾಡಿಯನಲಕರ
ದಿಂ [೭]ಗಿರಿಜೆಯಂ[೭] ತಡವಿ ಜಲಜಭವ ವಾರಿಶಯ
ನಂ ಗೋತ್ರಭಿನ್ಮೇಘವಾಹನಾ[೮]ದಿ[೮]ಗಳ ಬರ್ಹಿರ್ಮುಖರ ಮಾಡಿ ಮಹಿಯ ।
ಪೊಂಗಿ ತಳಿಕೆಳಕುಮಾಡಿದ [೯]ಹಿಮರ್ವ ಮಱು ಭಾಪು
ಪಿಂಗಿಸಿದನಭವನಂತಾರಾಹು ಹಿಮಕರನ
ನುಂಗಲಹಿಗಳು ರಸಾತಳಕಿಳಿದ[೧೦]ವೆಂದೊಡಾ[೧೦] ಹಿಮರಾಜನೇಂ ವೀರನೋ ||
೭-೮

ಅಂದೆನ್ನ ಕಣ್ಪೋಯ್ತು ಪಲ್ಗಳು[೧೧]ದಿರ್ದ*ವು ಮುಪ್ಪಿ
ನಿಂ[೧೧]ದೀಗ ಸವೆದೆನಿನಿಯಳ ಪದ್ಮಿನಿಯನದೇ
ನೆಂದು ನಾಂ ನೋಡಿ ಚುಂಬಿಸಿ ಸೆರೆವೆನೆಂದಿನಂ ನಾಣ್ಚೆ ಶರಧಿಯೊಳು ಬೀಳೆ ||
ನೊಂದು ಹೃದಯದೊಳು ಶೋಕಂದುಂಬಿ ಜಿನುಗಿ ಕಾ
ಯ್ಪಿಂದೆ ನೀರ್ಪೊರ್ಕ್ಕು ಕಮಲಿನಿ [೧೨]ಪಲುಂಬಲು[೧೨] ಜಗಂ
ಕಂದಿತೋ ಕರುಣದಿಂದೆಂಬಂತೆ ಪರ್ವಿ ದಟ್ಟೈಸಿದ ತಮಂಧದೊಳಗೆ || ೭-೧೦

---

೧ ಯಾಂತದೊಳಮುದ [ಅ], ಯಾಂತದೊಳದುಮ [ಇ] ೨ ಶಕ್ತ [ಉ.ಒ.ಓ]
೩ ಭವನಿತ್ತೈಪ್ರಸಾದಿಗೆ ನಿನ್ನ।ಯಾ [ಆ.ಈ.ಉ.ಒ.ಗ] ೪ ವಂ ತಿವಿಯೆ [ಅ.ಇ.ಗ]
೫ ಪ್ಪಿಯುದರಿಂ [ಓ] ೬ ವ ನೈಯೀಶಾನನಡಿಗೆ [ಉ], ದ ನೈಯೀಶನಾರಡಿಗೆ [ಅ.ಇ.ಗ],
ದ ನೈಶನಾರಡಿಗೆ [ಓ] ೭ ಜಗಜೆಯಂ [ಅ] ೮ ಳಿ [ಅ.ಈ.ಗ] ೯ ಥಳಿಯ [ಅ.ಇ.ಓ]
೧೦ ರೆಂಬರಾ [ಅ], ವೆಂಬರಾ [ಈ.ಉ.ಒ.ಓ.ಗ] ೧೧ ದುರಿದವು ಮುಪ್ಪಿಂ [ಉ.ಒ.ಓ]
೧೨ ಪಲುಬುತಿರೆ [ಅ]

ಮಾಸಿದಂಬರಂ[೧]ವುಳಿದು[೧] +ಧವಳಾಂಬರಮ[೨]ನಾಂತು[೨]
ಲೇಸೆನಿಪ ತಾರಹಾರಂದೊಟ್ಟು ಲಾವಣ್ಯ
ಭಾಸುರಸಮುದ್ರಮಂ ಪೆರ್ಚಿಸುತಲಿಂಪು ನೈದಿ[೩]ಲ್ಗಂಗಳಿಂ[೩] ನೋಡಲು ।
ಆ ಸಮಯದೊಳು ಸೌಮ್ಯರಾಜಪುತ್ರರ್ ಮಿಗೆ ವಿ
ಲಾಸದಿಂ ಸಿಂಗರಿಸಿ ರಾತ್ರಿಯ ವಿಹಾರಕೆ ಮ
ಹಾಸಖರೊಳೆಯ್ದಿ ಪೊಱಮಟ್ಟು ಗಣಿಕಾವೀಥಿಯಲ್ಲಿ ಬರುತಿರೆ ಬರ್ದಿನಿಂ ॥

ರತಿಯ ಕಡೆಯಲ್ಲಿ ನಲ್ಲರ್ಗೆ ಸೊಗಸೀವ ಸ
ನ್ನುತ ಮನೋರಥದ ಮದಕುಂಭಿಕುಂಭದ್ವಯೋ
ನ್ನತ ಕುಚಂಗಳ ಸಂಪದಾತಿಶಯವೆಸೆವಾ ಜಿತೇಂದ್ರಿಯರ ಗೆಲ್ವೆನೆಂಬಾ ।
ಅತಿವೀರದಂಗನೆಯರೆಸೆದರಾ ಮನ್ಮಥನ
ಚತುರಂಗ ಸೇನೆಯೆಂಬಂದದಿಂ ಚೋಳಭೂ
ಪತಿಯ ಸುಕುಮಾರರ್ಕೈತರ್ಪೆಡೆಯೊಳಾ ಸ್ತ್ರೀಪ್ರಗಜಿತೆದು [೪]ಸಿಂಗರವಳಮೆಜತಿದು ॥

ನಡೆಯೆಂದು ಕಳುಪುತುಂ ದೀಹವಂಚೆಯನೆಮ್ಮ
ನಡುವಿರ್ಪುದೆಂದು [೫]ಹರಿಯುಂ[೫] ತುಂಬಿಗಳ ಸಾಲೆ
ಕೊಡುತ ಬಾಸೆಯ ಬಳಿಕಲೆಸೆವ[೬]ಪಕ್ಕಿಗಳನೆರ್ದೆ*ಯೊಳಪ್ಪಿಯರಗಿಳಿಯನೆಮ್ಮ ।
ನುಡಿಯ ಮಾಜದಿರೆಂದು ಮಿಗವನವುಳ್ಕಿ *ಜೊಣ್ಣ[೬]ಳ
ವಡಿಸಿ ನವಿಲಂ [೭]ಮುಡಿ[೭]ಯೊಳಿಟ್ಟು ತಲೆಯಂ ಸಂತ
ವಿಡುವೊಲಿನಿಯನ ಸೆಜ್ಜೆವನೆಯ ಪುಗುವೊರ್ವರ್ [೮]ಜಾಣೆಯ[೮] [೯]ಕಂಡರಾ
ಕುವರರ್ ॥

ನಡುವೊಂದು ಪಿಡಿಯೆನಲು ಜವ್ವನದ ಸೊಕ್ಕಾನೆ
[೧೦]ಯಿಡಿಕಿಱಿನ[೧೦]ವೊಲಿವೆಟ್ಟನೊಳು ತನ್ನ ತಲೆಯನಿ
ಟ್ಟೊಡನಳುಪೆ ಪುರುಷಸಿಂಹಂ ಮಧ್ಯದಲ್ಲಿ[೧೧]ರುತ್ತು[೧೧]ಗುರ್ಗೊರ್*ನೆಗಳಿಂ
ಪೊಡೆಯಲು ।

---

೧ ವಳಿದು [ಅ.ಈ.ಒ.ಓ.ಗ] + ತಳೆದು; ೨—[ಅ.ಇ] ೩ ಲ್ಗಳಿಂದಂ [ಇ], ಲ್ಗಳಿಂ [ಉ.ಒ.ಓ] ೪ ಸೌಖ್ಯತೆಯಂ [ಅ.ಈ.ಉ.ಒ.ಓ.ಗ], ೫ ಸಿಂಹನ [ಅ.ಇ.ಓ] ೬ ಪಕ್ಷಿಗಳೊ [ಅ.ಈ.ಒ.ಓ.ಗ], ಪಕ್ಷಿಯೊ [ಉ] ೭ ಪೊಸೆ [ಅ.ಇ.ಗ], ಪೆಸೆ [ಉ.ಒ] ೮ ಚದುರೆಯು [ಉ.ಒ.ಓ] ೯ ಕಂಡು ಹರುಷಿಸಿದರು [ಅ.ಇ] ೧೦ ಯಿಡುಕುಱಿನ [ಅ.ಇ], ಯಿಡುಕಿಱಿನ [ಈ], ಯಿಡುಕಿರಿಸ [ಗ], ಯಿಡಿಕಿರಿದ [ಅ] ೧೧ ಸುರ್ [ಅ.ಇ.ಉ]

ಪಿಡಿದೂರ್ಧ್ವಕಿಕ್ಕೆಲಕೆ ಸಾಲಿಟ್ಟ ಮೌಕ್ತಿಕದ
ಗಡಣವೆನೆ ರಾಗಾಧರೆಯ ಕಂಠಮಾಲೆ ಚೆ
ಲ್ವಡೆಯೆ ಮನ್ಮಥಯುದ್ಧಕುಜ್ಜುಗಿಸುವೊರ್ವ [೧]ಬಾಲಕಿಯೆಸೆದಳಾ
ನೆಲೆಯೊಳು[೧] ||೬||

ಮೊಗಪಸಿಯ ಕಲೆಗಳುಱಿ ಮುತ್ತುಬಿತ್ತಾಗಲವ
ನಗೆವೊಯ್ದೊಡಾದಮೃತಬಿಂಬಫಲಮಂ ಸವಿವ
ಬಗೆಯುದಲ್ತಲ್ತಮರ್ದು*ಗೆ[೨]ಜಱಿ[೨]ಗೆ ಬಜ್ಜರ[೩]ವರಲ[೩] ಸೇರುವೆಯ ಮಾಣಿಕ್ಯದಾ|
ಸೊಗಸುವೇರಿಯೊಳುಕ್ಕುವಿನಿದುಗೊಂಬಂತೆ ನಾ
ಲಗೆ ದಂತಗಳ ಭಾಗ್ಯವೆನಿಪಧರಮಂ ಪೀರ್ವ
ಸುಗುಡ†ರೆಸೆದರು ವನಿತೆಯರ ಮನೆಗಳೊಳು ರಾಜಪುತ್ರರೆಯ್ತರ್ಪಾಗಳು||

ಉನ್ನತಪ್ರೌಢನಂಗನೆಗೆ ವಿತ್ತಂಗೊಡದೆ
ಚೆನ್ನ ನುಡಿಗೂಟಂಗಳಿಂದೆ [೪]ಕಾಲವ[೪] ಕಳೆವು
ದನ್ನೋಡಿ [೫]ತಾಯಿ[೫]ದೂದವಿ ಸಂಕಟಂಗೊಂಡು ಮಗಳ ಕೂಡಿಂತೆಂದಳು|
ನಿನ್ನ ಸೀನಜಱಿಯಲಾ ಕುಚಯುಗ್ಮವೆಂದೆಂಬ
ಹೊನ್ನ ಕರಡಗೆಯು [೬]ಬಿಡಬಹುದೆ[೬] ಪಱಿನೂಡಿಕೊ
ಳ್ಳೆನ್ನಲಂತದನಱಿದು ತಳರ್ವ * ಚಪಱಿನ ಕಂಜು ನಡೆದರಾ ಕುವರರ್ಕಳು||

ಹೆಣ್ಣೆ ಕೇಳಾಬರ್ಪ ಚದುರ [೭]ನಿನ್ನೆಡೆಗೆ[೭] ಕಡೆ
ಗಣ್ಣ ಧಾಳಿಯನಟ್ಟಿದಪಲನೆಂದೊಡಲವಳಕ್ಕಿ
ಸಣ್ಣ ನಡುವಿನ ಚೆಲ್ವಿನತ್ತಿಗೆಯುವಂಗಿದಿರ್ವಂದು ಮನ್ಮಥಯುದ್ಧಕೆ|
ತಿಣ್ಣವೆನ್ನದೆ [೮]ನಿಂದಳೇ[೮]ಕೆಂದೊಡಿವಳ ತಾಯ್
ಹಣ್ಣಹದುಳದೊಳಿವನ ಪಿತನೊಳಿರ್ದಪಳೆಂದು
ಬಣ್ಣದುಟಿಯಬಲೆಯರು ಬಿತ್ತರಿಸೆ ನಗುತ ಸತ್ಯೇಂದ್ರನಣುಗರು ನಡೆದರು||

---

೧ ಜಾಣೆಯು ಕಂಡರಾ ಕುವರರು [ಅ.ಇ] ೨ —[ಈ] ೩ ವರಲ್ಲ [ಈ], ಪಲ್ಲ [ಅ.ಗ]
†ಸುಗುಡರೆಸೆದರು [ಈ]ಪ್ರತಿಯಲ್ಲಿ ಮಾತ್ರ. ಸ್ವೀಕೃತ ಪಾಠವಾದ 'ಸುಗುಡರ್' ಎಂಬ ಪದದ
ವ್ಯುತ್ಪತ್ತಿ ಹೀಗಿರಬಹುದೆ : ಸು+ ಕೂಟ+ಅರ್ > ಸುಗೂಡರ್ > ಸುಗುಡರ್=ಸಂಭೋಗಿಗಳು
೪ ಕಾಲಂ [ಆ.ಈ.ಉ.ಒ.ಓ.ಗ] ೫ ಕಾಯ್ದು [ಆ.ಈ] ೬ ಪೊನ್ನ...ಬಿಡಬೇಡ[ಈ],
ಹೊನ್ನಾಕರಂ...ಬಿಡದೆ[ಅ] ೭ ನೀಂ ನಿನಗೆ [ಅ.ಈ.ಗ] ೮ ನೆಸಲ್ಕ [ಅ] ನಿಂದಳೇ [ಅ.ಇ].

ಎರಳೆಗಣ್ಣಳೆ ಸಗ್ಗ೧ವೆಣ್ಗಳ ಶಿರೋರತ್ನೆ೧
ಪರಕಲಿಪ ನಱುಸುಯ್ಲು ಕಂಪನುಳ್ಳವಳೆ ಬಂ
ಧುರಶಿಖಿಯ ಪೋಲ್ವ ಮುಡಿಯಳೆ ಶಿಥಿಲಮಧ್ಯಳೆ ಭಾಸ್ವಚ್ಚಕೋರನಯನೇ।
ಉರುತರ ವಿಲಾಸವಿಭ್ರಮೆ ಸಕಲರಲ್ಲಿ ನಿ
ಷ್ಠುರವಚನದಾರಿದ್ರೆ ಸೌಖ್ಯಪರವಶೆ ನಿನ್ನ
ವರಿಸದ೨ನೆ ನಿರ್ಜೀವಿಯೆಂದು ನುತಿಸಿ೨ದಳಬ್ಬೆ ಸೂಚಿಸಿ ದಶಾವಸ್ಥೆಯಂ॥

ಇನಿಯನನಗಲ್ದು ವಿರಹಾಕುಲದಿ೩ನಾಂ೩ ಚೆಲ್ವ
ಬನವ ಪುಗುತಿರಲು ಪುಯ್ಯಲ್ಚೆ೪ ಪರಪುಟ್ಟಂಗ
ಳನಿತಕೆ ಬಸಂತನಾ ಸಹಕಾರರೂಪನಾಗಿರ್ದು ಚೆಂದಳಿರ್ಗ*೪ಳಿನಿಪಾ।
ಘನವಪ್ಪ ಮೊಗಗಿಚ್ಚ ತಾಳಿದಂ ಮುಂಗಯ್ಯೊ
ಳನವರತಮಿರ್ದು ಸಾಗಿಸಿಕೊಂಬ ಗಿಳಿಗಳೆ
ಮ್ಮನೆ೫ಕಂಡು ಮೂಗ ಕೆಚ್ಚನೆಮಾಡಿ೫ತೊಂಡುಗೆಡೆದಪವೆಂದಳೊರ್ವ ವನಿತೆ॥

ಕೇಳು ನೀನೆನಗೋಪವನಿತೆಯೆಂದೆನ್ನ ೬ನೀ
ಚಾಳಿಸುವುದೇ೬ತಕ್ಕೆ ೭ಏನು೭ ಮಯಜಗಂಧಿ
ಯಾಳೋಚನಂ ಬೇಡ ಅದೇಹಲವೆರಡಲ್ಲದೆನ್ನೊ೯ಳುಹರಣ ನಿನ್ನದೊಂದು।
ಬಾಳೆಮೀನ್ಗಣ್ಣಬಲೆ ಮುನಿಯ ೧೦ಬೇಡೆಂದೆನುತ೧೦
ಲಾಳಿಗೊ೮ಂತುಂ ಚದುರನಂಗನೆಯ ಬುಜ್ಜಯಿಸಿ
ಮೇಳವಂ ಮಾಡುತಿರೆ ಲಾಲಿಸುತ್ತಂ ನಗುತ ನಡೆದರಾ ಕುವರರ್ಕಳು॥

೧೧ಮತ್ತೆ ವಿಟನೊರ್ವಂಗೆ೧೧ ೧೨ದೂತಿ ನುಡಿದಳ್೧೨ ನಿನ್ನ
ಚಿತ್ತದನ್ನಳ ಮಿಸುಪ ಸೊಬಗಿನೊಳ್ಗಡಲೊಳೊ
ಪ್ಪುತ್ತಿರ್ಪ ಚೆಲ್ವಮೊಗನೆಂಬ೧೩ದೀವಿಯೊಳು೧೩ನೀಂಬಯಸಿದೀ ವ್ಯವಹಾರದಾ।

---

೧ ವೆಣ್ಣುಗಳ ತಲೆರನ್ನೆ [ಅ.ಇ], ೨ ನ ಬಾಳಾವುದೆಂದು ಪೊಗಳಿ [ಅ.ಇ.] ೩ ವಾ [ಈ] ೪ ಲ್ಗೆ [ಅ.ಇ.ಗ], ಲ್ಕೆ [ಉ] ೫ ಪುಚ್ಚು ಮಾಡುತ್ತ ತಾವಿಂತು [ಅ.ಇ] ೬ ದೀ ಚಾಳಿ ಯೇ [ಅ.ಈ.ಉ.ಒ.ಓ.ಗ], ೭ ಯನುಕಂಪೆ [ಅ.ಈ.ಉ.ಓ.ಗ] ೮ ವಂಗ [ಅ.ಈ.ಉ.ಗ] ೯ ಳಗೆಯುಸು [ಅ.ಈ.ಉ.ಓ.ಗ] ೧೦ ದಿರು ನೀಸೆನುತ್ತಾ [ಅ.ಈ.ಉ], ಬೇಡೆಂದೆನುತ್ತಾ [ಓ] ೧೧ ಮತ್ತೊರ್ವ ವಿಟಗೆ [ಅ.ಇ.ಓ] ೧೨ ದೂದವಿ ನುಡಿದಳೆಲೆ [ಅ.ಇ.ಓ] ೧೩ ದ್ವೀಪದೊಳು [ಅ.ಆ.ಇ.ಈ.ಗ]

ಮುತ್ತುಂಟು ವಜ್ರಮುಂಟ್ತೆ ಪವಳಮುಂಟಲ್ತೆ
[೧]ಮತ್ತಲ್ಲಿ [೧]ನೀಂ [೨]ಗಳಿಸೆ[೨] ನೀಲವುಂಟೇಗ ನೀಂ
ಹತ್ತು ಸಾವಿರ ಹೊನ್ನ ಕೊಟ್ಟಾದೊಡಂ ಕೊಂಬುದುಚಿತವೆಂದಳು ಬರ್ದಿನಿಂ ॥

ಪಱಿಮೆಗಳ ಕಡುಚೆಲ್ವ ಮಱಿ ಮಿಸುಪ ತಾವರೆಯ
ನಱುಗಂಪಿಗೆಳಸಿ ಮೇಲಱಿಯದೊಳಪುಗಲು ನೇ
ಸಱು ಮುಳುಗೆ ಮುಗಿಯಲಾಂ ಪೊಱಮಡುವುದಿನ್ನಾವ ತೆಱನೆಂಬ ಮಾಳ್ಕೆಯಿಂದೆ ॥
ಮೆಱೆವೀ ಭುಜಂಗರಾ[೩] ಸಱಿಮಿಂಡಿಯರ ಕಾಂತಿ
ಗೆಱಗಿ ಬಿಡಲಳವಲ್ಲದೊಱಲಿ ಕಾಲ್ಗೆಟ್ಟು ಬಾ
ಯ್ದೆಱೆದು ದೈನ್ಯಂಬಟ್ಟು ಮಱುಗುತಿರೆ ನೋಡಿ ನೆಲದೆಱೆಯನಣುಗರು
ನಡೆದರು ॥

ನಡುವೆ ಬಡತನವಾಯ್ತು ನಿನಗೆಂದು [೪]ಚುನ್ನಮಂ[೪]
ನುಡಿವ ಮೊಲೆಗಳ್ಗೆ ನಡುವೆಂದುದೆಲೆಲೆ ಪೊಂ
ಗೊಡನೆಂಬ ಬಗೆಯನಱಿದರ್ಥವಿತ್ತರ್ವಿಡಿದು ಕತ್ತುರಿಯ ಕೆಸಱ ಕೂಡಿ ।
ನಿಡುಗಲ್ಲ ಹೇಱಲದು ಕೊರಲಾರವಾಗಲಿ
ಟ್ಟಡೆಗೊಂಬ ನಿಮ್ಮ ಕುಂಡಱಿಯಿರ್ಕೆ [೫]ಬಾಸೆಯಂ
ಬಿಡದೆಮ್ಮ[೫] ಜಱೆನಿರೆಂಬಂತೆಸೆವ ನಡುವಿನಬಲೆಯರು ಕಣ್ಗೆಸೆದಿರ್ದರು ॥

ಈ ತೆಱದ ಗಣಿಕೆಯರ ಕೇರಿಗಳ ಸೊಬಗಿನ ನಿ
ಕೇತನಂಗಳ ಸಿಂಗರಂಗಳಂ ರಚಿಪ ಸು
ಪ್ರೀತಿಗಳ ನೋಟಗಳ ವಿರಹಗಳ ಕೂಟಗಳ ಜಾಣ್ಮೆಗಳ ಸೌಂದರ್ಯವಾ ।
ಭೂತಳಾಧಿಪನ ಕುವರರು ನಾಗರೀಕನೆಂ
ಬಾತನಿಂ ಕೇಳಿಯೊಡವಂದರಂ ಕಳುಪಿ ವಿ
ಖ್ಯಾತರರಮನೆಯ ಪೊಕ್ಕೆಡೆಯೊಳಾ ಚಂದ್ರಂಗೆ ಬೀತುವು ಲಸತ್ಕಲೆಗಳು ॥ ೭–೧೧

---

೧ ಮತ್ತೆ (ಆ)  ೨ ಘಳಿಸಲ್ಕೆ (ಆ)  ೩ ವ ಭುಜಂಗನಿಕಾಯ (ಆ), ವ ವಿಭುಜಂಗರಾ (ಈ.ಓ)  ೪ ವ್ಯಂಗ್ಯವ (ಅ.ಇ)  ೫ ಬಾಸೆಯೆಂ ಬಿಡವೆಮ್ಮ (ಆ)

## ಏಳನೆಯ ಸಂಧಿ

ಪಲ್ಲವಿ। ಶ್ರೀಚೋಳರಾಯನೋಲಗಗಾಣ್ಕೆಗೆಂದು ಬಂ
ದಾ ಚಮತ್ಕೃತಿಯಶ್ವಯುಗ್ಮಮಂ ಕೊಟ್ಟೊಡಾ
ಲೋಚನಾಧಿಕ್ಯ[೧] ವೈಹಾಳಿಯಂ ಪೋಗಲುಜ್ಜುಗಿಸಿದರು
ಸುಕುಮಾರರು ॥

ಜೆಟ್ಟಣುಗಿಯೆಡಮೆಯ್ಯನಡಸಿರಲ್ ನೀರ್ವೆಣ್ಣು
ನೆಟ್ಟನಡುದಲೆಯೊಳಿರೆ ಮಿಾನೆಱಿಯನೆಲರುಣಿಗ
ಳಿಟ್ಟ ತೊಡವುಗಳಾಗೆ ದುರ್ಧರಪಶುಪನೆಯ್ದೆ ಬಲದೊಡೆಯೊಳಿರ್ದು ನೋಡೆ[೨]।
ಬಟ್ಟಲೊಳ್ ಪಾಲ್ತಂದ ಪಸುಳೆವೆಣ್ಗೊಲಿದಿರ್ದ*ಯ
[೩]ಕೊಟ್ಟೆಸೆವನೆಂದು ನಿನ್ನಂ ಶರಣರೊಳಗೆಃ ದೂ
ಱಿಟ್ಟಡೇಗೆಯ್ವೆ ಶಿವ ಪೆರ್ಮೆಗಿಡದಿರ್ಪುದಳವಟ್ಟೆನ್ನ ಹೃದಯದೊಳಗೆ। ೭-೧೩

ಸಾರ ಮಂತ್ರೀಶರಿಂ ಕಾರಣ ಪ್ರಾಜ್ಞರಿಂ
ವೀರ ಭಟರೊಗ್ಗಿನಿಂ ಪ್ರೇರಕಾಧೀಶರಿಂ
ಚಾರರಿಂ ಮಣಿಮುಕುಟಧಾರರಿಂ ಸುರವೃಕ್ಷದೋರಣದುದಾರಗುಣರಿಂ।
ಧೀರನರಮುಖ್ಯರಿಂ ಮಾರತಂತ್ರಂಗಳ ವಿ
ಚಾರದ ಭುಜಂಗರಿಂದಾರಯ್ಯೆ ಳದಿವಿಳ ಮರ್ತ್ಯ
ವಾರಸಾತಳಸಭಾಕಾರವಾದಂತೆಸೆದುದಾ ರಾಯನೊಡ್ಡೋಲಗಂ॥ ೭-೧೪

ಕೋರಿವೆಣ್ಣಂ ಕುವರನಂ ರನ್ನಮಂ ಕೃಷಿಯ
ವಾರುವಂಗಳ ನವ್ಯಕೂಟದೊಳು ಬಾಲ್ಯದೊಳು
ಚಾರುಸುಪ್ರಭೆ ಮಸುಳಿಸಿರ್ಪೆಡೆಯೊಳ್ಬೆದೆ ತತ್ಕಾಲದೊಳೆ ಪಲ್ಲಣಿಸುತೆ।
ಭೂರಮಣನಡರಲಂತಾಸ್ಪರ್ಶಕೋಪ ಶಾ।
ಣಾರಚಿತಕರ್ತೃದರ್ಶನಶಿಕ್ಷೆಗಳಿನುಱಿ ವಿ
ಚಾರದಿಂದೊಳಗುಮಾಡಲ್ಬೇಹುದೆನಲಣ್ಣನೊಳೆ ಮಂತ್ರಲಕ್ಷನೆಂದಂ[೪]॥

---

೧ ದಿತ್ಯ (ಅ), ಧಿಕ್ಯರ್ (ಅ) ನೋಡುತಿರಲು ಬಲದೊಡೆಯನೇಱಿ (ಅ.ಇ) ೩ ಕೊಟ್ಟುರೆ ವಿರಾಜಿಸುವೆನೆಂದು ಶರಣರ್ಗೆ (ಅ.ಇ)...ಶರಣರೊಳು (ಆ.ಉ) ಳ ವಿ ಎಂದು 'ಆ' ಪ್ರತಿಯಲ್ಲಿ ಮೊದಲಿದ್ದು ಆ ಅನಂತರ 'ದಿವಿ' ಎಂದು ತಿದ್ದಲ್ಪಟ್ಟಿದೆ. ಉಳಿದೆಲ್ಲ ಪ್ರತಿಗಳಲ್ಲೂ 'ದಿವಿ' ಎಂಬ ಸರಿಯಾದ ಪಾಠವೇ ಇದೆ. ೪ ದೆನ್ನಲಣ್ಣಂಗೆಂದನಾ ಮಂತ್ರಲಕ್ಷಂ (ಅ.ಇ)

ನಱುಗಂಪನೆಣ್ದೆಸೆಗೆ ಬೀಱುವಲರ್ವ*ಂಡುಣಲ್
ಪಱಿಮೆಗಳಿಗೇಂ ವಿಚಾರಮೆಯುಮುರ್ದ* ಮಾಂಬಣ್ಣಿ
ಗೆಱಗಿ ಸೋರ್ವಿನಿಮುಮಂ ಪೀರ್ವಲ್ಲಿ ಕೀರಂಗೆ ಬೆಜ್ಜರೋದಿನ ಮಾಲೆಯೆ|
ಸಱಿವಿಂಡಿ ಸೆಜ್ಜೆವನೆಯಿನಿಯನಾಲಿಂಗನಕೆ
ನಿಱಿ ಸೋಂಕಲಿದಿರಾಗೆ ೧ಭೇದಂದಜ್ಜರ ಬೋಧೆ
೨ಯುಱಿಸುವುದೆ೩ ಕೇಳಣ್ಣ ತಂದೆಯೇಗೆ೪ಯ್ದೊಡಳಿತ್ತಿಯ ಕೆಡಿಸ೪ಬೇಡೆಂದನು|| ೭-೨೯
ವರಮಲ್ಲಿಕಾಸ್ಮೇರ ೫ಫಲ್ಗುನೇ೫ಷ್ಟವ ಭವೋ
ತ್ಕರವೈದ್ಯ ವಿಶ್ವತಶ್ಚಕ್ಷುರೂಪಂಗೆ ಬಂ
ಧುರಸುಕೇಶಿಪ್ರಣುತರಾಜಧರ ವಿಶ್ವಪತಿಯಣುಗರ್ಗೆ ಸಹಜಲಿಂಗ|
ಚಿರವಿಶ್ವತೋಮುಖಸಖರ್ಗೆಯಾರಾಧ್ಯರ್ಗೆ
ನಿರುಪಮಿತ ದಣ್ಣಾಯಕರ್ಗೆ ಚಿಕ್ಕಯ್ಯಂಗೆ
ಹರನ ಮಹಿಮೆಯ ಕಾರ್ಯಪೆಂದರಂದಾ ಚಿಕ್ಕದಣ್ಣಾಯಕಾರಾಧ್ಯರು|| ೭-೩೨

## ಎಂಟನೆಯ ಸಂಧಿ

ಪಲ್ಲವಿ| ಜೋಕೆಯಿಂ ವೈಹಾಳಿಪೋಗಿ ಕುವರರು ೬ತಿರುಗ
ಲಾಕಾಲದಲ್ಲಿ೬ ಮಿತವಚ೭ನನ೭ಶ್ವದ ಖುರಲದೆಲ
ಶ್ರೀಕಂಠವರಿಕಂಠವೆನಲು ಶಂಕರನಳಿದುದಂ ಕೇಳಿದಂ ಜೋಳನು||
ಚರಣಕ್ಕೆ ಸುತನೆಱಗೆ ೯ಶಿಖಿಗೆ೯ ಹಸ್ತಶ್ರವಣ
ದುರಗ೧೦ತತಿ೧೦ತಲೆಯೆತ್ತೆ ಶೂಲ೧೧ದರೆವೆಣ೧೧ಗಂಗ
ೞೆರಡಹಿ ಫಣಾಮಣಿಗಳೊಳ್ ಗಂಗೆಯೊಳಗಲ್ಲಿ ಫಣಿದೃಷ್ಟಿಗಳ್ ಬಿಂಬಿಸೆ|
ಕರಪದನಖಂಗಳೊಳಗಹಿಗುಹಾಕ್ಷಿಗಳೆಸೆಯೆ
ಶಿರದಿ ಹತ್ತುಂಗರದ ಕ್ಕೆಯಲ್ಲಿ ೧೨ಹತ್ತು೧೨ಸಾ
ಸಿರವಂಪ್ರಿಗಳೊಳು ಸೂಱಿಪ್ಪತ್ತು ಕಣ್ಪೊಳೆಯಲೆಸೆವ ಗಂಗಾಧರ ಜಯ||೮-೧

---

೧ ಬೇದ (ಅ.ಈ.ಉ.ಓ.ಗ) ೨ ಯುರಿವುದೆ (ಅ.ಈ.ಗ) ೩ ಯ್ವನ (ಅ.ಈ.ಓ.ಗ), ಯ್ವರ (ಉ) ೪ ಪೇಳೆಂ (ಅ.ಈ.ಉ.ಓ.ಗ) ೫ ಫಲ್ಗುಣೇ (ಅ.ಇ.ಓ), ಫಲ್ಗುಣಿ (ಗ), ಫಾಲ್ಗುಣೇ [ಅ] ೬ ಪುಗಲಾಕಾಲಸೆಯ್ದೆ [ಅ.ಇ.ಓ], ೭ ನಾ [ಅ.ಆ.ಇ.ಈ.ಗ] ೮ ದಿನೀ [ಅ.ಇ], ದೆನಾ [ಅ.ಈ], ದಿ [ಓ] ೯ ನವಿಲ್ಗೆ (ಅ.ಇ.ಗ) ೧೦ ಗಳ್[ಅ.ಇ] ೧೧ ದರೆವೆಣ್ಣ (ಅ), ಧರವೆಣ (ಈ.ಓ) ೧೨ ಪ್ಪತ್ತು (ಅ)

ನುಣ್ಗುರುಳ ೧ಪಸುರ್ವ*ರೆಯು೧ದಂಬುಜಾಸ್ಯದ ಸೂಳೆ
ವೆಣ್ಗಳೊಡನೆಯ್ದುಲಜ್ಜುಗಿಸೆ ೨ಪಡೆ ೨ಮೋಹರಿಪ
ಜಾಣ್ಗೆ ಸಂತೋಷಿಸುತ ೩ವಂದಿಗಳು೩ ಜಯ ಜೀಯ ಭಲರೆ ಭಾಪೆಂದುಳಿಲಿಯಲುಳ |
ನಾಣ್ಗಾದೆಯಲ್ತು ಕರ್ಪುರದರಲ್ಸೇಸೆಗಳ
ತಣ್ಗಂಪಿನಿಂ ಹರಿಗಳಂ ಕುವರರೆಯ್ದೆ ಮೇ
ಗಣ್ಗೆ ಭೋಂಕೆನಲಡರಿ ಬಿದಿಯು೫ನಲ೫ವೊರ್*ಡೆಯ ಮೆಯ್ಗಣ್ಗರುವರಂ ಜಱಿದರು ||
ಕಂಗಳಸಿಗಳ್ ಮಿಾಂಗಳಾ ಕುಚ ರಥಂಗಳು
ತ್ತುಂಗ ೬ಭೃತ್ಯತ್ರಗಳು೬ ಭೂಷಣ ಬೊಬ್ಬೆಯುಬ್ಬರರ
ವಂಗಳು ನಿತಂಬಗಜಗಳ್ಗಿರಿಗಳಲ್ಪ೭ವತಿ೭ಹಸನ ಹಯುಗಳ್ ತೆರಿಗಳು |
ಪೆಂಗಳಿಟ್ಟಹ ಬಟ್ಟಿದುಱುಬು ಪರಿಗೆಗಳು ಕಮ
ಠಂಗಳಾ ಶೃಂಗಾರ ವೀರರಸ ವಾರ್ಧಿಗಳ
ಪಾಂಗುಲ ಬೆರೆದಂಡವಂದ್ಯೈದಿದರು ಕುವರರೊಡನಂಗನೆಯರತಿ ಸುಭಟರು ||
ಅಂದೆನ್ನ೮ಮಗ೮ ಭೀಮಸಂ ೧೦ಕರ್ಣ೧೦ ಬಿಲ್ಗೊಪ್ಪಿ
ನಿಂದಿಱಿ೯ದ೧೧ನವನಯ್ಯ ನೀನಲಾ೧೧ ಕಾದಬೇ
ಕೆಂದಿಳೆಯ ರಾಜಾಳಿಯುಂ ಕೂಡಿ ದಾಳಿಟ್ಟು ವಾಯು ಸೂರ್ಯನ ಮುತ್ತಿದಾ |
ಚಂದದಿಂ ಪದಧೂಳಿ ರವಿಯ ಮುಸುಕಲು ಬೆಳಗು
ಕುಂದೆ ಸದ್ವಂಶಜರ ಬಲಶಸ್ತ್ರಕಿರಣಂಗ
ಳಿಂದುಂಟುಮಾಡಿದನಲಾ ಭಾಪೆನಲ್ಕೆ ಪೆರ್ಬಡೆ ನಡೆದುದೇನೆಂಬೆನು ||
ಕೂಟದರಸರ ಮಣಿಕಿರೀಟ ಸಾಮಗ್ರಿಯ
ಕೋಟಾನುಕೋಟಿ೧೨ಗಳ೧೨ ಮಾಟ೧೩ದಾಪ್ರಭೆಗಳಿಂ೧೩
ಮಿಾಟಪ್ಪ ಭೇದದಾ ನೋಟದಬಲೆಯರ ಹೃತ್ಸ್ಫೋಟರವ ಸಂತೋಷದ|
ಆಟದಿಂ ದಾನಾರ್ಥದೂಟದಳಿಗಳ ಸಮು
ಚ್ಚಾಟನದ ಶ್ರುತಿಯುಗಾಸ್ಫಾಟನದ ಕರಿಗಳಿಂ
ಘೋಟಕಂಗಳನಡರಿಯೋಟಗಳನೆಯ್ದೆ ಶಶಿಜೂಟನ ಭುಜಾದಂಡದು| ೮—೩

೧ ಪಸಿವರೆಯು (ಅ.ಇ) ೨ ಪಣೆ (ಆ) ೩ —;ಳ ಮಾಪುರದರುಲಿಯೆ (ಅ.ಇ)
೫ ರಲ್ವೊಡೆಯು (ಅ.ಇ.ಉ.ಓ) ೬ ಭೃತ್ರಾಳಿ (ಅ.ಈ.ಉ.ಗ)
೮ ಳಿಹಿಂಗೆ (ಅ.ಇ) ೯ ಸುತ; ೧೦ ಪುಳಿಪು; ೧೧ ಕರ್ಣನವನಯ್ಯಂ ನೀನು (ಅ.ಈ.ಉ.ಓ.ಗ) ೧೨ ಮಣಿ; ೧೩ ಪ್ರಭಾಳಿಯಿಂ (ಅ.ಇ)

ಗಜಘಟಾಕೋಟಿ ನಿಂದುವು ಮೂಡಲೊಳು ರಥ
ವ್ರಜವಿನವರೂಥಾಭಿಮುಖವಾದ ಪಶ್ಚಿಮದ
ನಿಜದಿಕ್ಕಿನಲ್ಲಿ ಮೇಳೈಸಿದುವು ವಾಜಿಗಳ ಥಟ್ಟು ಕವಿದುತ್ತರದೊಳು।
ಭುಜಬಲದ ರಾವುತರನುಜ್ಞೆಯಿಂದೊಪ್ಪಿ ಗಜ
ಬಜಿಂಪಂ ಕಾಲಾಳ್ಗಳಂತಾ ತೆಂಕಣಧಿಕ ದಿ
ಗ್ವಿಜಯರಾಗಿರ್ದರೆನಲಾ ಕುಮಾರರ ಬಲವನಿಳೆಯೊಳಾವಂ ಬಣ್ಣಿಪಂ॥ ೮-೫

ತಾವೆ ನೋಡುವ ದಿಟ್ಟಿಗಳು ಕುಮಾರರ ದೇಹ
ಲಾವಣ್ಯರಸದೊಳಗೆ ಮಾರ್ಪೊಳೆವುತಿರೆ ಚೋಳ
ಭೂವರಂಗೊಗೆದು ದೇವೇಂದ್ರನತಿಶಯಭೋಗದಿಂದಲಿವ್ರ್ಮೆಯ್ಯಾದನೋ।
ಆ ವಿಚಾರಮದಲ್ತು ಬೆಂದ ಕಾಮಂ ತಮ್ಮ
ಭಾವದಿಂದೊಗೆದು ಸಾಕ್ಷಾದಮಳರೂಪಾದ
ನೋ ವಿಚಾರಿಪೆವೆಂಬವೋಲೀಕ್ಷಿಸುತ್ತಿರ್ದರಾ ಪುರದ ಸಲ್ವೆಂಡಿರು॥ ೮-೧೦

ತೋಱಿ ಜಲದಂ ತಾಯ ತಲೆವೆಟ್ಟಸಲ್ಲಿ ಕಾ
ಲೂಱಿ ಕುವರನ ಕಂಧರಸ್ಥಲದೊಳಾಕುದುರೆ
ಯೇಱಿದನ ಕರವಾಳಿನೊಳ್ಮಿಂಚಿಯವನ ಕಂಠದಸರಂಪಱಿದು ಬಿಳ್ದು।
ಬೇಱಾದ ಠಾವಿನೊಳಗಾಲಿವರಲುಗಳಾಗೆ
ಚೀಱುವಂಗನೆಯಬ್ಬರದೊಳೊದವೆ ಸಿಡಿಲಳಪ
ಮಾಱುದನಿಯವಳ ಕಣ್ಣೊಳ್ಕಱೆಯೆ ಮಳೆ ಶೋಕ ವರುಷಸುತುವೆನಲೆಸೆದುದು।
೮-೨೦

ಜಾಣ ನಂಬ್ಯಣ್ಣನಣುಗನ ಮೊಸಳೆ ನುಂಗಲಾ
ಯೇಣಲೋಚನೆ ಸಂಗೆಯಳುವಂತೆ ಕಿನ್ನರನ
ಪ್ರಾಣಮಂ ಶಂಭು ತನ್ನೊಳಗುಮಾಡಲು ಬಸವರಾಜನೊಱಲುವ ಮಾಳ್ಕೆಯಿಂ।
ಮೇಣು ನೃಡಶಿಶುವಿಗಮ್ಮವ್ವೆ ಶೋಕಿಪ ತೆಱದಿ
ಮಾಣದಂಗನೆ ಮಕರಕೇತನಧ್ವಂಸಿಯ
ಕ್ಷೀಣಭಕ್ತರ ನಿಧಾನವೆ ಮರಣಹಿತ ಸೈರಿಸಲಾಱಿನೊಂದತ್ತಳು॥ ೮-೨೧

---

೧ ಸುತಿಸ; ೨ ಳಾ (ಅ.ಇ) ೩ ಲಧಿಕ (ಅ.ಉ.ಓ.ಗ.), ಲಲ್ಲಿ (ಅ.ಇ.) ೪ ಬಣ್ಣಿಸುವ
ರಾರಿಳೆಯೊಳು (ಅ.ಇ.ಓ) ೫ ತೋರಿದ ಜಲಂ (ಅ.ಈ.ಉ.ಓ.ಗ)

ಶಾತಾತಪಾದಿಸುಶ್ರೌತಾಳಿಸಂವಿನುತ
ಶೀತಾವನೀಧ್ರಜಾಮಾತಾತ್ಮಭೂ[೧] ಸುಪುರು
ಹೂತಾ[೧]ಸುರಾರಿಮುಖವಾತಾಪ್ತಳಪನವರ ಭೇತಾಳವೃಂದಮಧುರ।
ಗೀತಾದಿವಾದ್ಯಸುವ್ರಾತಾಗ್ರನಾಟ್ಯ ವಸು
ರೇತೋಬ್ಜಕಾಂಬಕ ಪ್ರೇತಾಧಿಪಾಂತಕ ವಿ
ಧೂತಾಘಗುರುಭಕ್ತಪೂತಾತ್ಮನಂಶಾಂಬುಜಾತಾರ್ಕವರ ಶಿವ ಜಯ॥ ೧೦–೩೩



## ಒಂಬತ್ತನೆಯ ಸಂಧಿ

ಪಲ್ಲವಿ॥ ಅನ್ಮನಣುಗನ ಪೞಗೆ ಸುತನ ಕೊರಲಂ ಪಱಿದ
ಸನ್ಮಂಥಕರಿದ ತಲೆಗಳೊಳಿತ್ತು ನಿಜಶಿರವ
[೨]ಸುನ್ಮಹದಿ[೨] ಪಡೆದಷ್ಟಮೂರ್ತಿಯೊಡನೆಯ್ದಿದಂ ಕೈಲಾಸಕಾ ಜೋೞನು॥

ಅಂಗಭವನಿಂ ತ್ರಿಪುರದಿಂ ಭಸಿತರುದ್ರಾಕ್ಷಿ
ಸಾಂಗವಾದುವು ನಿನಗೆ ಕಂತೆ ಕಟ್ಟಿಗೆ [೩]ಕಪ್ಪ[೩]
ರಂಗಳನಿಭಾಸುರನ ವಿಷ್ಣುವಿಧಿಗಳ ಸದೆದು ಬಲ್ಸಿನಿಂ ಸೆಳೆದುಕೊಂಡೈ।
ತಿಂಗಳಿಂದಿತ್ತಿತ್ತಲಾದ ಜಡೆ ಭಕ್ತಹೃದ
ಯಾಂಗಣದ ಸುಳುಹು ಗಣಸಂಸಾರಿಯಪ್ಪರ್ಥ
ಜಂಗಮಂ ನೀನೀ ಮಹತ್ತಿಗೆಣೆಯಲ್ಲಮರಗುಂಡವರ ಮಲ್ಲಿನಾಥ॥ ೯–೧

ಶ್ರೀಕಶ್ಯಪನ ಕಾಂತೆ ಶಿವನ ಲೋಚನಸೂರ್ಯ
ರಾಕೇಂದುಗಳಿಗೆಱಗಿ ವಿನತೆಯಾದಳು ಪಡೆದ
ಸ್ತೋಕಾಭಿಧಾನನುಂ ಖಗರಾಜನೆಂದಿಡಲವಂ ತನ್ನ ಪೆಸರೊಡೆಯುರ।
[೪]ಆಕಲಿಪ[೪] ರಾಹುಕುಲಮಂ ಕೊಲ್ವನೆಂತಂತೆ
ಭೂಕಾಂತರಿಪುಗಳಂ ತಡೆಗಡಿಯನೊಡೆಯನ ಮ
ಹಾ ಕುಮಾರನ ಕೊಲ್ಲಲಾಱಿಕೆನೆಂದಳಿದ ಮಂತ್ರೀಶನೇಂ ಕೃತಪುಣ್ಯನೋ॥ ೯–೧೧

೧ ಸುರಹೂತಾ (ಅ), ಸುಪುರುಹೂತರ (ಇ), ಸುಪುರಹುತಾ (ಆ.ಈ), ಸುಪುರ ಹೂತಂ (ಗ) ೨ ಮಂ ಮಹದೇವನಿಂ (ಈ), ಸುಂ ಮಹದೇವ (ಗ) ೩ ಕರ್ಪ (ಅ ಈ.ಉ), ಖರ್ಪ (ಆ.ಇ.ಗ) ೪ ಆಕರಿಪ (ಅ.ಈ.ಉ.ಗ)

ಪೆಱೆವಲೆಯುನಡಿಯನೋಲೈಸುತಿರ್ದರು ನಾಡೆ
ನಱುಗಂಪಿನರಲಂಬನಯ್ಯ ಬಿದಿಯಮರ್ದು*ಂಬ
ರೆಱೆಯ ದೆಸೆಯಾಣ್ಮರೆಲರ್ವ*ಟ್ಟೆಗರು ಕದಿರ್ಗ*ಱೆವ ಪೆಡೆವಣಿಯ ಬಿಸದಳೆದರು।
ಉಱಿವ ಭೇದದ ಬಟ್ಟೆಯುಱಿದ ಜತಿಗಳು ಸೊಬಗ
ಮೆಱೆವ ಸಗ್ಗದ ಚೆಲ್ವ ಸಱಿಮಿಂಡಿಯರು ಪಲ್ಲ
ಮುಱಿವೊಗನ ಮಾದೇವಿಯೆಱೆಕದಱುವೊಗನೊಡನೆ ಕಱೆಗೊರಲ
ನೊಪ್ಪಿರ್ದನು ॥ ೧೦-೧೭

ಆಮೇಷಮುಖನಮಿತ ವೀರವೃಷಭಪ್ರಿಯಂ
ಶ್ರೀಮಿಥುನರಪ್ಪ ಕಿನ್ನರ ನಾಯಕರ್ **ಕಟಕ**
ಕಾಮರುಱೆ ಪಾಡುತಿರೆ ಸಿಂಹಮಧ್ಯದ **ಕನ್ನೆ**ಯರು ತೋಳ್ಗಳಂ[1]ತೊಲೆ[1]ಯಲು।
ಚಾಮರವನಿಡೆ ವೃಶ್ಚಿಕಧ್ವಜಂ ಧನುವಿಡಿದು
ವಾಮಕರನಾಗಿ ಸೇವಿಸೆ **ಕುಂಭ**ಕುಚ **ಮೀನ**
ಕೋಮಲಾಕ್ಷಿಯರಪ್ಪ ಸಿದ್ಧ[2]ವನಿತೆ[2]ಯರು ಜಯವಿಡೆ ದಯಾರಾಶಿ ಮೆಱೆದಂ ॥

ಮೆಱೆವ ತಣ್ಗದಿರ್ಗ*ಲ್ಲ ಮಂಟಪದೊಳಮರ್ದ*ಂಬ
ಪೆಱೆಯ ಮೊದಲಾದವರ ಸಱಿಮಿಂಡಿಯರ್ಕಳಿಂ
ಪುಱಿವ ಸಂಭ್ರಮದೆ ಕುಳಿರ್ವೆ*ಟ್ಟಣಗಿಯೊಡನೆ ಪಸೆನಿಂದು ಕೆಂಬರಲತಲೆಯಾ।
ಮಱಿವಾವಿನುಂಗುರದ ಕೈನೀಡೆ ಕಂಡಂಜು
ತಿಱಿದೆ ಶಿವಯೆಂದು ಗಂಡನ ಪೆಸರೆನುತ್ತ ತಲೆ
ಯೆಱಗಿ ನಾಣ್ಚಿದ ಸತಿಯ ನೋಡಿ ನಸುನಗುವ ಗಂಗಾಧರಂ ಸಲಹುಗೆಮ್ಮಂ॥೧೦-೨೭

ಪಾಹಿ ಮಹಿಮಾಸ್ಥಾನ ಪಾಹಿ ಭವಗುಣಲೂನ
ಪಾಹಿ ಜಯಜಿತಕಾಮ ಪಾಹಿ ಗಿರಿಜಾವಾಮ
ಪಾಹಿ ಚಿದ್ಘನಕಾಶಿ ಪಾಹಿ ಸತ್ಕೃತಪಾ[4]ಶಿ[4] ಪಾಹಿ ದೇ[5]ವಾ[5] ಸುಭಾವಾ।
ಪಾಹಿ ನಿರ್ಮಲಕಾಯ ಪಾಹಿ ನಿಗಮಾಜೇಯ
ಪಾಹಿ ಪಂಚಾಕ್ಷರೀರೂಪ ಜಯ ನಿಷ್ಪಾಪ
ಪಾಹಿಯೆಮ್ಮುರಗುಂಡದ ಮಲ್ಲಿನಾಥ ಶಿವಮಸ್ತು ಶಿವಮಸ್ತು ಸತತಂ॥

---

೧ ಪೊಲೆ (ಅ.ಇ.ಓ) ೨ ಕನ್ನೆ (ಅ.ಇ) ೩ ತುಱಿದೆ (ಅ.ಆ.ಇ.ಉ.ಒ.ಓ)
೪ ಹಿ (ಆ.ಇ) ೫ ವಂ (ಅ)

ಮನುಸಂಭಂವಾಂಗ್ರದಶನೀಪರಾಜಿನಚೋಳ
ಕನದಲಘುಚರ ಮಹಾಸ್ನಿಗ್ಧಮುಖಕಮಲಾಭಿ
ಜನಪುಂಡರೀಕ ವಾಮಾರ್ಧೋಹದೋದ್ಭೂತಮಹನೀಯಮಾನಸ್ಥಿರಾ !
ಘನಭಾರಶತಕೋಟಿಕೋಟಿತೇಜೋವಿರೋ
ಚನಭೂ[2]ರ[2]ನಂತಸನ್ನಯಸು[3]ವಿ[3]ಷ್ಟತ್ತುಂಡ
ಜನಿತೋಸ್ರಮಾಲಿಯೆನಿಪಮರಗುಂಡದ ಮಲ್ಲಿನಾಥ ರಕ್ಷಿಪುದೆಮ್ಮನು॥ ೧೧.–೩೩



೧ ದಾ (ಅ.ಇ) ೨ ರಸ (ಈ) ೩ ವಿಷ್ಟಂ ತುಂಡ (ಆ) ; ವಿಷ್ಟಕತುಂಡ,
ವಿಷಂ ತುಂಡ (ಗ)

## ಭಾವಚಿಂತಾರತ್ನ ಸಂಗ್ರಹದ
## ಕೆಲವು ಭಕ್ತಕಥಾಪ್ರಸಂಗಗಳ ಸಂಕ್ಷಿಪ್ತ ಪರಿಚಯ

೧-೧ **ವಾಗೀಶ**—ಶೈವ ಸಮಯಾಚಾರ್ಯರಲ್ಲಿ ಒಬ್ಬರು. ತಿರುಮುನ್ನೈಪ್ಪಾಡಿ ನಾಡಿನ ತಿರುವಾಮೂರಿನ ವೇಳಾಳರ್ ಕುಲದಲ್ಲಿ ಜನಿಸಿದವರು. ಅವರ ತಂದೆ ಪುಗಜನಾರ್, ತಾಯಿ ಮಾದಿನಿಯಾರ್, ಅಕ್ಕ ತಿಲಕವದಿಯಾರ್. ಈ ಎಲ್ಲರೂ ಶಿವಭಕ್ತಿ ಸಂಪನ್ನರಾಗಿದ್ದರು. ವಾಗೀಶರ ಹುಟ್ಟು ಹೆಸರು ಮರುಣೀಕ್ಕಿಯಾರ್. ಅವರು ಇನ್ನೂ ಬಾಲಕರಾಗಿದ್ದಾಗ ತಾಯಿ ತಂದೆ ಇಬ್ಬರೂ ತೀರಿಹೋದರು. ಒಡಲು ಒಡವೆಗಳೆಲ್ಲ ಅಳಿದು ಹೋಗುವುವೆಂದುಕೊಂಡು ವಾಗೀಶರು ಸರ್ವಸ್ವವನ್ನೂ ದಾನಮಾಡಿ ತಿಲಕವತಿಯಾರನ್ನು ಬಿಟ್ಟು ಪಾಟಲಿಪುತ್ರ (ತಿರುಪ್ಪಾದಿರಿಪ್ಪುಲಿಯೂರ್) ಎಂಬಲ್ಲಿಗೆ ಹೋದರು. ಜೈನ, ಬೌದ್ಧ ಮತಗಳು ತಮಿಳುನಾಡನ್ನು ಆಕ್ರಮಿಸಿಕೊಂಡು ಶೈವಮತದ ಪ್ರಾಬಲ್ಯವನ್ನು ಕುಗ್ಗಿಸಿದ್ದ ಕಾಲ ಅದು. ಪಾಟಲಿಪುತ್ರದಲ್ಲಿ ಶ್ರಮಣರ ಪ್ರಭಾವಕ್ಕೊಳಗಾಗಿ ಜಿನಮತವನ್ನವಲಂಬಿಸಿದುದಲ್ಲದೆ ಆ ಮತದ ಧರ್ಮ ಗ್ರಂಥಗಳನ್ನು ಹಲವು ವರ್ಷಗಳ ತನಕ ಓದಿ ಪಾಂಡಿತ್ಯವನ್ನೂ ಸಂಪಾದಿಸಿದರು. ಅದನ್ನು ಕಂಡ ಜೈನರು ಅವರಿಗೆ ಧರ್ಮಸೇನರೆಂಬ ಹೆಸರನ್ನೂ ಆಚಾರ್ಯ ಪದವಿಯನ್ನೂ ಇತ್ತು ಗೌರವಿಸಿದರು.

ತಿರುವಾಮೂರಿನಲ್ಲಿ ಸದಾ ಶಿವನ ಸೇವೆಯಲ್ಲಿದ್ದ ತಿಲಕವತಿಗೆ ತಮ್ಮನ ಸಮಾಚಾರ ತಿಳಿದು ಬಂದಿತು. ಆತನನ್ನು ಶೈವಭಕ್ತನನ್ನಾಗುವಂತೆ ದಯೆತೋರೆಂದು ಸರ್ವಾಭೀಷ್ಟವರದನಲ್ಲಿ ಮೊರೆಯಿಟ್ಟಳು. ಶಿವನೂ ಆಕೆಯ ಪ್ರಾರ್ಥನೆಯನ್ನು ನೆರವೇರಿಸುವುದಾಗಿ ಸ್ವಪ್ನದಲ್ಲಿ ಹೇಳಿ ಮರೆಯಾದನು.

ಕೆಲವು ದಿವಸಗಳಲ್ಲಿಯೇ ವಾಗೀಶರಿಗೆ ಸಹಿಸಲಶಕ್ಯವಾದ ಹೊಟ್ಟೆನೋವು ಬಂದಿತು. ಶ್ರಮಣರು ಮಾಡಿದ ಮಂತ್ರೌಷಧಿಗಳೆಲ್ಲ ಫಲಿಸದಾದುವು. ಕಡೆಗೆ ಅಕ್ಕನನ್ನು ನೆನೆದು ಪಾಟಲೀಪುತ್ರದಿಂದ ಹಿಂತಿರುಗಿದ ವಾಗೀಶರು ತಿಲಕವತಿಯನ್ನು ಮರೆಹೊಕ್ಕರು. ಆಗ ತಮ್ಮನ ಮೇಲೆ ಕರುಣೆ ಉಕ್ಕಿ, ಅರಿಯದೆ ಅನ್ಯಸಮಯವನ್ನು ಸೇರಿದ ಅವರನ್ನು ಕಾಪಾಡುವಂತೆ ತಿಲಕವತಿ ಶಿವನಲ್ಲಿ ಬೇಡಿದಳು. ಒಡನೆ ತಮ್ಮ ಶೂಲೆ ಮಾಯವಾದುದನ್ನು ಕಂಡ ವಾಗೀಶರು ಅಕ್ಕನ ಮುಂದೆ ಕೈಮುಗಿದು

ನಿಂತರು. ದಯೆ ತೋರಿದ ಶಿವನಡಿಯನ್ನು ನೆನೆದು ಸೇವಿಸೆಂದು ಹೇಳಿ ಮಂತ್ರೋಪದೇಶವನ್ನು ಕೊಟ್ಟ ತಿಲಕವತಿಯ ಕರುಣೆಯಿಂದ ವಾಗೀಶರು ಶೈವಭಕ್ತರೇ ಆದರು.

ಪರಸಮಯವಾದಿಗಳನ್ನು ಸೋಲಿಸಿ ಜಿನಸಮಯವನ್ನು ಎತ್ತಿಹಿಡಿದಿದ್ದ ವಾಗೀಶರು ಶೈವಮತವನ್ನು ಕೈಕೊಂಡರೆಂಬ ಸಂಗತಿಯನ್ನು ಪಲ್ಲವರಾಜನಾದ ಜೈನದೊರೆ ಇಮ್ಮಡಿ ಮಹೇಂದ್ರವರ್ಮನು ಕೇಳಿ ಕೆರಳಿದನು. ಅವರನ್ನು ಹಿಡಿದು ತರಿಸಿ ಶ್ರಮಣರು ಹೇಳಿದಂತೆ ಸುಣ್ಣದ ಗೂಡಿನೊಳಗೆ ನೂಕಿಸಿ ಕವಪಿಕ್ಕಿಸಿದನು. ವಾಗೀಶರಿಗೆ ಆ ಸುಣ್ಣದ ಗೂಡೆ ಈಶನಡಿಯ ನೆಳಲಾಯಿತು. ಅದನ್ನು ಕಂಡು ರಾಜನು ಅವರಿಗೆ ನಂಜನ್ನೂಡಿಸಿದನು. ನಂಜೂ ಅಮೃತವಾಯಿತು. ಅನಂತರ ರಾಜನು ಮದಿಸಿದ ಆನೆಯನ್ನು ಮೇಲೆರಗಿಸಲು ಅದು ವಾಗೀಶರು ಹಾಡಿದ ತಿರುಪ್ಪಾಟ್ಟು ಕೇಳಿ ಮಣಿದು ನಿಂತಿತು. ರಾಜನು ಕಡೆಗೆ ಅವರನ್ನು ಕಲ್ಲುಕಟ್ಟಿ ಕಡಲಲ್ಲಿ ತಳ್ಳಿಸಿದನು. ಈ ಎಲ್ಲ ಕಷ್ಟಗಳಿಂದಲೂ ಪಾರುಮಾಡಿದುವೆಂದರೆ ವಾಗೀಶರು ಶಿವನಡಿಯನ್ನು ನೆನೆದು ಹಾಡಿದ ಸ್ತೋತ್ರಗೀತಗಳು. ಅವರ ಭಕ್ತಿಗೆ ರಾಜನು ಅಚ್ಚರಿಗೊಂಡು ಜಿನಸಮಯದಲ್ಲಿ ನಂಬುಗೆಗೆಟ್ಟು ಶಿವಸಮಯವನ್ನು ಸ್ವೀಕರಿಸಿದನು. ತಿರುನಾಗೇಶ್ವರದಲ್ಲಿ ಒಂದು ಶಿವಾಲಯವನ್ನೂ ಕಟ್ಟಿಸಿದನು.

ಶಿವಸ್ಥಲಗಳ ದರ್ಶನಕ್ಕಾಗಿ ದೇಶಸಂಚಾರಮಾಡುತ್ತಾ ಶೀರ್‌ಕಾಳಿ (ಶೀಯಾಳಿ) ಎಂಬಲ್ಲಿಗೆ ವಾಗೀಶರು ಬಂದಾಗ ತಿರುಜ್ಞಾನ ಸಂಬಂಧರು ಅವರನ್ನು 'ಅಪ್ಪರೇ' ಎಂದು ಸಂಬೋಧಿಸಿದುದರಿಂದ 'ಅಪ್ಪರ್' ಎಂಬುದೂ, ವಾಗ್ಮಿತೆಯಲ್ಲಿ ಬಲ್ಲಿದರಾದುದರಿಂದ "ನಾವುಕ್ಕರಶರ್" (ಈ ಪದದ ಸಂಸ್ಕೃತಾನುವಾದವೇ 'ವಾಗೀಶರ್') ಎಂಬುದೂ, 'ತಾಣ್ಡಕ' ಎಂಬ ಪದ್ಯ ಜಾತಿಯನ್ನು ಹಾಡಿದವರಾದುದರಿಂದ 'ತಾಣ್ಡಕರಾಜ' ಎಂಬುದೂ ಅವರ ಹೆಸರುಗಳಾದುವು. ಶಿವನ ವರದಿಂದ ತಾವು ಹಾಡಿದ ತೇವಾರಗಳಲ್ಲಿ ಭಕ್ತಿರಸವನ್ನು ಹರಿಸಿ, ಶಿವಜ್ಞಾನವನ್ನು ಬೆಳಗಿ, ಪವಾಡಪುರುಷರೆಂದೆನಿಸಿಕೊಂಡು ವಾಗೀಶರು ತಿರುಪ್ಪುಗಲೂರಿನಲ್ಲಿ ಶಿವೈಕ್ಯರಾದರು.

೧-೩ **ಏಲೇಶಕೇತಣಾರ್ಯ**—ಬಸವಣ್ಣನವರ ಕಾಲದಲ್ಲಿ ಶೀಲಾಧಿನಾಯಕನೆಂದು ಪ್ರಸಿದ್ಧವಾದ ಒಬ್ಬ ಶಿವಶರಣ ಮತ್ತು ವಚನಕಾರ. ನವಧಾನ್ಯಗಳ ನೆಲಮನೆಯಾದ ಕಲ್ಬುರ್ಗಿಯ ಏಲೇಶ್ವರ* ಆತನ ಸ್ಥಳ. ಜೇಸಾಯ ಕಾಯಕದ

---

*ಈಗಿನ ಏಲೇರಿ. ಶಾಂತಲಿಂಗದೇಶಿಕನ ಅಭಿಪ್ರಾಯದಂತೆ ಇದು ಆಂಧ್ರ ದೇಶದ ಒಂದು ಊರು

ಆತನಿಗೆ ಸಾಯಿದೇವಿ ಹೆಂಡತಿ ; ಶಿವಣ್ಣ, ಶಿವಮ್ಮ ಎಂಬಿಬ್ಬರು ಮಕ್ಕಳು.

ಆಚಾರವೇ ಪ್ರಾಣವಾಗಿದ್ದ ಕೇತಯ್ಯನಿಗೆ ಭವಿಗಳ ಸಂಗವೆಂದರೆ ಆಗದು.— ಅದನ್ನು ಕಂಡು ಕೆಲವರು ಬಿತ್ತನೆಯ ಕಾಲಕ್ಕೆ ಸರಿಯಾಗಿ ಆತನ ಕಣಜಕ್ಕೆ ಬೆಂಕಿ ಯನ್ನಿಟ್ಟರು. ಹಾಗೆ ಉರಿಗೊಂಡು ಕರಿಕಾದ ಬೀಜವನ್ನೇ ಬಿತ್ತಿ ಬೆಳೆದ ವಿಶ್ವಾಸ ಶೀಲ ನೆಂದರೆ ಕೇತಯ್ಯ. ಒಮ್ಮೆ ಆತನ ಮನೆಯ ಹಸುಗಳನ್ನು ಕದ್ದೊಯ್ದ ಕಳ್ಳರು ಹುಲ್ಲು ನೀರನ್ನು ಮುಟ್ಟದ ಅವುಗಳ ಆಚಾರನಿಷ್ಠೆಗೆ ಬೆರಗಾಗಿ, ನಿರುಪಾಯರಾಗಿ ಅವು ಗಳನ್ನು ಬಿಟ್ಟುಬಿಡಬೇಕಾಯಿತು. ಮನೆಗೆ ಹಿಂದಿರುಗಿದ ಆ ಹಸುಗಳ ಶೀಲವನ್ನು ಪರೀಕ್ಷಿಸಿಯೇ ಅವುಗಳನ್ನು ತನ್ನ ಕೀಲಾರದೊಳಗೆ ಸೇರಿಸಿಕೊಂಡ ಕೇತಯ್ಯನ ನಿಷ್ಠೆಗೆ ಕಳ್ಳರು ತಲೆಬಾಗಿ ಅವನ ಶಿಷ್ಯರಾದರು. ದೀಕ್ಷೆಯನ್ನೂ ಕೈಗೊಂಡರು.

ಸತಿಪತಿಗಳು ಗುರುವಿನಿಂದ ಉಪದೇಶವನು ಪಡೆದಲ್ಲಿ, ಅವರಿಬ್ಬರೂ ಗುರುವಿಗೆ ಮಕ್ಕಳಾದರು; ಗುರುವೇ ತಂದೆಯಾದನೆಂಬ ಭಾವನೆಯಿಂದಲೂ, ಪರಶಿವನು ತನ್ನಿಂದ ಹುಟ್ಟಿದ ಬ್ರಹ್ಮನಿಗೆ ತನ್ನ ಚಿಚ್ಛಕ್ತಿಯಿಂದ ಹುಟ್ಟಿದ ಸರಸ್ವತಿಯನ್ನು ಕೊಟ್ಟು ಮದುವೆ ಮಾಡಿದನೆಂಬ ಭಾವನೆಯಿಂದಲೂ, ಶೀಲವೇ ಸರ್ವಬಂಧುವಾದ ಏಲೇಶಕೇತಣಾರ್ಯ ತನ್ನ ಹಿರಿಯ ಮಗನಿಗೆ ತನ್ನ ಕಿರಿಯ ಮಗಳನ್ನೇ ಮದುವೆ ಮಾಡಿದನು. ಆಕ್ಷೇಪ ವೆತ್ತಿದವರಿಗೆ " ಸೋದರತ್ತೆಯ ಮಗಳೆಂದು ಮದುವೆಯ ಮಾಡುವುದೆಲ್ಲವೂ ಅಣ್ಣಂಗೆ ತಂಗಿಯನು ಮದುವೆಯ ಮಾಡಿದ ತೆರನಲ್ಲನೆ ? " ಎಂಬುದು ಆತನ ಉತ್ತರ. ಹರ ಗುರುವಿನ ಚರಿತ್ರವೇ ತನಗಿರಬೇಕೆಂಬುದು ಇಲ್ಲಿ ಆತನ ಧ್ಯೇಯ.

ಏಲೇಶಕೇತಣಾರ್ಯನ ಹಾಗೆ ಶೀಲವಂತನೂ, ತತ್ತ್ವೋಪದೇಶಕನೂ, ಅಘಹರನೂ ಆದ ಸಿದ್ಧಮಲ್ಲಿಕಾರ್ಜುನ ಅಥವಾ ಸಿದ್ಧಮಲ್ಲೇಶ ತನ್ನ ದೀಕ್ಷಾಗುರು ವೆಂಬುದನ್ನು ಕವಿ ಇಲ್ಲಿ ತಿಳಿಸಿದ್ದಾನೆ.

೧-೫ **ಶಿವಪೂಜೆಯಾರ್ಯ**—" ಗಿರಿಜಾ ಕಲ್ಯಾಣ " ಕೃತಿಯನ್ನು ನಾಗವಲ್ಲಿ ಯಲ್ಲಿ ಪ್ರತಿವರ್ಷವೂ ಮೆರವಣಿಗೆ ಮಾಡಿಸುತ್ತಿದ್ದ ಒಬ್ಬ ಗುರು. ಬಸವೇಶ್ವರ ಮಹತ್ವವನ್ನು ಶರಣರಿಗೆ ತಿಳಿಸುವುದರಲ್ಲಿ ನಿಪುಣನೆನಿಸಿ ತನ್ನ ವಚನದಿಂದಲೂ ಭಕ್ತಿಯಿಂದಲೂ ಕೀರ್ತಿಯನ್ನು ಗಳಿಸಿದ್ದ ಯತಿ. ಈತ ಶ್ರೀ ತೋಂಟದ ಸಿದ್ಧಲಿಂಗೇ ಶ್ವರರ ಶಿಷ್ಯನೆಂಬುದನ್ನು ಪೀಠಿಕಾಭಾಗದಲ್ಲಿ ತಿಳಿಸಿದೆ. ಚಾಮರಾಜನಗರದ ತಾಲ್ಲೂಕಿನ ನಾಗವಲ್ಲಿಯ ಶಿಲಾಶಾಸನದಲ್ಲಿ (E.C. Vol IV Part II) ಉಕ್ತ ವಾಗಿರುವ " ಶಿವಭಕ್ತಿಗೆ ಕಲ್ಯಾಣನೆನಿಸಿದ ನಾಗವಲ್ಲಿ "ಯೇ ಮಲ್ಲಣಾರ್ಯನು

ವರ್ಣಿಸಿರುವ 'ಶಿವನ ಕಲ್ಯಾಣದುತ್ಸವದ ನಾಗವಲ್ಲಿ' ಎಂದು ಕಾಣುತ್ತದೆ. ಈ ಶಾಸನದಲ್ಲಿ ಹೇಳಿರುವ ನಾಗವಲ್ಲಿಯೇ ಶಿವಪೂಜೆಯಾರ್ಯನ ಊರಿರಬಹುದೆಂಬುದಕ್ಕೆ ಈ ಶಾಸನ ಮತ್ತು ಕಾವ್ಯಗಳಲ್ಲಿ ನಾಗವಲ್ಲಿಯನ್ನು ಕುರಿತ ವರ್ಣನೆಗಳಲ್ಲಿರುವ ಸಾಮ್ಯವು ಸೂಚನೆಯನ್ನು ಕೊಡುತ್ತದೆ. ಅಲ್ಲದೆ ಶಿವಪೂಜೆಯಾರ್ಯರ 'ಗುರುಗಳಾದ ಶ್ರೀ ತೋಂಟದ ಸಿದ್ಧಲಿಂಗೇಶ್ವರರು ಗೋಸಲ ಚನ್ನಬಸವೇಶ್ವರರಿಂದ ದೀಕ್ಷೆಯನ್ನು ಪಡೆದದ್ದು ಇದೇ ಚಾಮರಾಜನಗರದ ತಾಲ್ಲೋಕಿಗೆ ಸೇರಿದ ಹರದನ ಹಳ್ಳಿಯಲ್ಲಿ ಎಂಬುದನ್ನು ಈ ಸಂದರ್ಭದಲ್ಲಿ ಗಮನಿಸಿದರೆ ಮೇಲಿನ ಊಹೆಗೆ ಪುಷ್ಟಿ ದೊರಕಿದಂತಾಗುತ್ತದೆ.

೧-೭ **ಗುರುಭಕ್ತ**—ಅಮರಗುಂಡದ ಮಲ್ಲಿಕಾರ್ಜುನ ಪಂಡಿತರ ಶಿಷ್ಯ. ಮಹಾ ಗುರುಭಕ್ತನಾದ ಈತನ ಚಾರಿತ್ರ್ಯವು ಕನ್ನಡ ತೆಲುಗು ಮತ್ತು ಸಂಸ್ಕೃತ ಶಿವಕವಿಗಳನೇಕರ ಕೃತಿಗಳಲ್ಲಿ ಭಕ್ತಿರಸ ಉಕ್ಕುವಂತೆ ವರ್ಣಿತವಾಗಿದೆ.

ಒಮ್ಮೆ ಶಿಷ್ಯರನ್ನು ಕುರಿತು ಮಂಚವನ್ನೇರುವಂತೆ ಹೇಳಿ ಗುರು ನೆಲದ ಮೇಲೆ ಕುಳಿತರು. ಅವರ ಆ ಮಾತಿನಂತೆ ನಡೆದು ಯಾವ ಪಾಪಕ್ಕೆ ಗುರಿಯಾಗುವುದು ಎಂಬ ಭೀತಿಯಿಂದ ಶಿಷ್ಯರನೇಕರು ಸುಮ್ಮನಿರುವಾಗ ಆತನ ಅಪ್ಪಣೆಯನ್ನು ಮೀರಬಾರದೆಂದು ಅರಿತ ಗುರುಭಕ್ತನು ಗುರುವಿಗೆರಗಿ ಮಂಚವನ್ನು ಹತ್ತಿ ಕುಳಿತನು. ಆಗ ಉಳಿದ ಶಿಷ್ಯರು ಗುರುಭಕ್ತನನ್ನು ಗುರುದ್ರೋಹಿಯೆಂದು ನಿಂದಿಸಿ ಹೊಡೆಯಲು ಹೋದರು. ಆಗ ಗುರುವಾದ ಅಮರಗುಂಡ ಮಲ್ಲಿಕಾರ್ಜುನ ಪಂಡಿತರು ಇವನು ಗುರುಭಕ್ತಿಹೀನನು, ನೀವೇ ಗುರುಭಕ್ತಿಯುಳ್ಳವರು ಎಂದು ಹೇಳಿ ಒಂದು ಶೂಲವನ್ನು ಅಂಗಳದಲ್ಲಿ ನೆಡಿಸಿ ಅದರ ಮೇಲೆ ಏರುವಂತೆ ಅವರಿಗೆ ಅಪ್ಪಣೆ ಮಾಡಿದರು. ಆಗ ಶಿಷ್ಯರು ಮುನ್ನ ಮಂಚವೇರಿದಾತನೇ ಈ ಶೂಲವನ್ನೂ ಏರುವನು ಎನ್ನಲು ಗುರುವಿನ ಆಜ್ಞೆಯಂತೆ ಗುರುಭಕ್ತನು ಆತನ ಪಾದಗಳಿಗೆರಗಿ ಮಂಚವನ್ನೇರಿದಂತೆ ಶೂಲದ ತುದಿಯನ್ನೂ ಸಂತೋಷದಿಂದ ಏರಿ ಕುಳಿತನು. ಒಂದಿನಿತೂ ರಕ್ತ ಬಾರದೆ ನೋವು ಗಾಯಗಳಾಗದೆ ಇರುವುದನ್ನು ಗುರು ನೋಡಿ ಕೊಂಡಾಡಿ ಇಳಿದುಬಾರೆಂದು ಹೇಳಿದೊಡನೆ ಇಳಿದು ಬಂದ ಗುರುಭಕ್ತನು ಇದು ಮಂಚ, ಇದು ಶೂಲವೆಂದು ಭೇದವನರಿಯದ ಗುರುಭಕ್ತಿ ನಿಷ್ಠಾಪ್ರತಿಮನೇ ಸರಿ.

ಆತನು ಒಂದು ದಿನ ಗುರುವಿನ ಪೂಜೆಗಾಗಿ ಹೂವನ್ನು ತರಲು ಹೋಗುವ ಸಡಗರದಲ್ಲಿ ಗುರುಪಾದುಕೆಯನ್ನು ಸೋಂಕಿದ ತನ್ನ ಪಾದವನ್ನು ಒಡನೆ ಕತ್ತರಿಸಿ

ಬಿಸುಡಿದನು. ಆ ವಾರ್ತೆಯನ್ನು ಕೇಳಿ ಅಮರಗುಂಡ ಮಲ್ಲೇಶ್ವರಾಚಾರ್ಯರು ಶಿಷ್ಯ ಸಮೇತ ಬಂದರು. ಗುರು ಬರುವುದನ್ನು ಕಂಡು ಎದ್ದು ನಮಸ್ಕರಿಸಲು ಯತ್ನಿಸಿ ತಲ್ಲಣಿಸುತ್ತಿದ್ದ ಗುರುಭಕ್ತನಿಗೆ ಪಾದ ಬರುವಂತೆ ಮಾಡಿದ ಮಹಾನುಹಿಮ ಅಮರ ಗುಂಡದ ಮಲ್ಲಿಕಾರ್ಜುನ ಪಂಡಿತ![೧] ಗಣಸಹಸ್ರದಲ್ಲಿ ಅವರ ಹೆಸರಿದೆ. ಅವರು ತಮ್ಮ ಇಷ್ಟಲಿಂಗವಾದ ಮಲ್ಲಿಕಾರ್ಜುನ ಲಿಂಗದಲ್ಲಿ ನಿರ್ವಯಲಾಗಿ ಮೆರೆಯುವ ಪುಣ್ಯ ಸ್ಥಳವೇ ಅಮರಗುಂಡ[೨]. ಈಗ ಅದಕ್ಕೆ ಗುಬ್ಬಿಯೆಂದು ಹೆಸರು.

೧-೧೦ **ತಿರುಜ್ಞಾನ ಸಮ್ಬನ್ದರ್ (ತ)**—ತಂಜಾವೂರ್ ಜಿಲ್ಲೆಯ ಶೀರ್ಕಾಳಿ (ಶೀಯಾಳಿ)ಯಲ್ಲಿ ಶೈವಬ್ರಾಹ್ಮಣ ವಂಶದಲ್ಲಿ ಹುಟ್ಟಿದವರು. ಇವರ ತಂದೆ ಶಿವಪಾದ ಹೃದಯರ್, ತಾಯಿ ಭಗವತಿಯಾರ್. ಶಿವಭಕ್ತಿನಿಷ್ಠಾವಂತರಾದ ಈ ತಾಯಿ ತಂದೆ ಯರು ಸರ್ವಾಭೀಷ್ಟವರದನಾದ ದೋಣಿಯಪ್ಪರಿಗೆ ಮೊರೆಯಿಟ್ಟು ತಪಸ್ಸುಮಾಡಿದ ಫಲವಾಗಿ ಜನಿಸಿದ ಪಿಳ್ಳೆಯರು ತಂದೆಯಾದ ಶಿವನನ್ನು ಅಗಲಿದ ದುಃಖದಿಂದ ಒಮ್ಮೊಮ್ಮೆ ಅಳಲು ತೊಡಗುತ್ತಿದ್ದರು. ತಮ್ಮ ಮೂರನೆಯ ವರ್ಷದಲ್ಲಿ ಪಿಳ್ಳೆಯರು ಸ್ನಾನಕ್ಕೆ ಹೋಗುತ್ತಿದ್ದ ತಂದೆ ಶಿವಪಾದಹೃದಯರ ಹಿಂದೆಯೇ ಹೊರಟರು. ಆ ಊರಿನ ದೇವಾಲಯದ ಬಳಿಯಿದ್ದ ತಟಾಕದ ದಡದ ಮೇಲೆ ಮಗುವಾದ ಪಿಳ್ಳೆ ಯರನ್ನು ಕುಳ್ಳಿರಿಸಿ ತಂದೆ ಸ್ನಾನಕ್ಕಾಗಿ ನೀರಿನಲ್ಲಿಳಿದು ಮುಳುಗಿದರು. ಮಗು ತಂದೆಯನ್ನು ಕಾಣದೆ ದೇವಾಲಯದ ಕಡೆ ನೋಡಿ ಶಿವನಡಿಯನ್ನು ನೆನೆದು "ಅಮ್ಮಾ ಅಪ್ಪಾ" ಎಂದು ರೋದಿಸಿದರು. ಆಗ ಉಮಾಸಹಿತನಾದ ಶಿವನು ಕಾಣಿಸಿಕೊಂಡನು ಪಾರ್ವತಿಯು ಮಗುವಿನ ಕಣ್ಣೀರನ್ನು ಒರಸಿ, ತನ್ನ ಎದೆಹಾಲನ್ನು ಹೊನ್ನಬಟ್ಟಲಲ್ಲಿ ಕುಡಿಸಲು ಪಿಳ್ಳೆಯರ ಅಳು ನಿಂತಿತು.

---

೧ ಅಮರಗುಂಡದ ಮಲ್ಲಿನಾಥ ಪಂಡಿತರು, ಅಮರಗುಂಡದ ಪಂಡಿತರು, ಅಮರ ಗುಂಡದ ಪಂಡಿತ, ಅಮರಗುಂಡದ ಮಲ್ಲಿಕಾರ್ಜುನ ತಂದೆ, ಅಮರಗುಂಡದ ಮಲ್ಲಿ ಕಾರ್ಜುನಾರ್ಯ, ಅಮರಗುಂಡದ ಮಲ್ಲೇಶ್ವರಾಚಾರ್ಯ ಎಂಬಿವೇ ಮೊದಲಾದ ಬೇರೆ ಬೇರೆ ಹೆಸರಿನಿಂದ ಪ್ರಸಿದ್ಧರಾದ ಇವರೊಬ್ಬರನ್ನಲ್ಲದೆ ಪಂಡಿತತ್ರಯರಲ್ಲಿ ಒಬ್ಬರಾದ ಮಲ್ಲಿಕಾರ್ಜುನ ಪಂಡಿತಾರಾಧ್ಯರನ್ನೂ ಕವಿ ಕಾವ್ಯದ ಮೊದಲಲ್ಲಿ ಸ್ತುತಿಸಿರುತ್ತಾನೆ.

೨ ನೋಡಿ: Annual report of the Mysore Archaeological Department for the year 1919.

"ಕಾಳಿಂಗ ದೇಶದ ಅಮರಗುಂಡವೆಂಬ ಪುರದಲ್ಲಿ ಮಲ್ಲಿಕಾರ್ಜುನ ಪಂಡಿತರು ಇದ್ದರು" ಎಂದು ಭೈ. ಕಾ. ಕ. ಸೂ. ರ.ದಲ್ಲಿ ತಿಳಿಸಿದೆ.

ತಂದೆ ಶಿವಪಾದಹೃದಯರು ಸ್ನಾನ ಮುಗಿಸಿ ಬಂದು ನೋಡುತ್ತಾರೆ, ಪಿಳ್ಳೆಯರ ಕೈಯ್ಯಲ್ಲಿ ಹೊಂಬಟ್ಟಲಿದೆ! ಬಾಯಿಂದ ಹಾಲು ಸೋರುತ್ತಿದೆ! ಯಾರು ತಂದು ಕೊಟ್ಟ ಹಾಲನ್ನು ಕುಡಿದೆ ಎಂದು ಕೋಪಿಸಿಕೊಂಡು ಕೇಳಲು ಪಿಳ್ಳೆಯರು ಆನಂದ ಬಾಷ್ಪವನ್ನು ಸುರಿಸುತ್ತ ಆಕಾಶದಲ್ಲಿ ಹೋಗುತಲಿದ್ದ ಶಿವಪಾರ್ವತಿಯರ ಕಡೆ ಕೈ ತೋರಿಸಿ,

"ತೋಡುಡ್ಡೈಯ ಶೆವಿಯನ್ ವಿಡ್ಯೈಯೇಱಿಯೋರ್ ತೂವೆಣ್‌ಮದಿಶೂಡಿ
ಕ್ಕಾಡುಡ್ಡೈಯ ಶುಡಿಲ್ಪೈಪ್ಪೊಡಿ ಪೂಶಿಯೆನುಳ್ಳಙ್ಕವರ್‌ಕಳ್ವನ್
ಏಡುಡ್ಡೈಯ ಮಲರಾನ್ ಮುನ್ನೈನಾಟ್ಪಣಿನ್ದೇತ್ತ ಅರುಳ್ ಶೆಯ್ದ
ಪೀಡುಡ್ಡೈಯ ಪಿರಮಾಪುರಮೇವಿಯ ಪೆಮ್ಮಾನ್ ಇವನನ್ಱೇ"

—ಎಂದು ಹಾಡತೊಡಗಿದರು.

ಪಿಳ್ಳೆಯರು ಪಾರ್ವತಿಯ ಎದೆಹಾಲನ್ನು ಕುಡಿದು ಶಿವಜ್ಞಾನವನ್ನು ಪೊಂದಿದ ಕಾರಣ ತಿರುಜ್ಞಾನ ಸಂಬಂಧರೆಂದೂ, ಆ ಶಿವಶಕ್ತಿಯರಿಬ್ಬರಿಂದಲೂ ಆಳಲ್ಪಟ್ಟವರಾದ ಕಾರಣ ಆಳುಡ್ಡೈಯ ಪಿಳ್ಳೆಯಾರ್ ಎಂದೂ ಆ ಬಳಿಕ ಪೆಸರಾಂತು ಶಿವಸ್ಥಲಗಳ ದರ್ಶನಮಾಡಿ ಶಿವನ ಸ್ತೋತ್ರರೂಪವಾದ ಪದಿಕ (ಹತ್ತು ತಿರುಪಾಟ್ಟು)ಗಳನ್ನು ಆಯಾ ಸ್ಥಳಗಳಲ್ಲಿ ಹಾಡಿರುವರು. ಅವರ ಆ ತೇವಾರ (ದೇವ+ಆರ=ದೇವರ ಹಾರ) ಗಳು ಸಾವಿರಾರಿವೆ. ಹತ್ತು ಸಾವಿರ ತೇವಾರ ಪದ್ಯಗಳನ್ನು ಅವರು ಹಾಡಿರುವರೆನ್ನು ವುದುಂಟು. ತಮಿಳಿನಲ್ಲಿರುವ ತೇವಾರಗಳಲ್ಲಿ ಜ್ಞಾನಸಂಬಂಧರವೆ ಮೊತ್ತಮೊದಲಿನವು, ಬೇರೆ ಬೇರೆ ಸಮಯಗಳಲ್ಲಿ ಆತ್ಮಾನುಭೂತಿ ಕಾವ್ಯಸ್ಫೂರ್ತಿಗಳಿಂದ ಹೊರಹೊಮ್ಮಿದ ಮಧುರತಮವೂ ಹೃದಯಸ್ಪರ್ಶಿಯೂ ಆದ ಅವರ ತೇವಾರಗಳು ಭಾವಗೀತೆಯ ಆದರ್ಶ ನಿದರ್ಶನಗಳು. ಕ್ರಿ.ಶ. ಏಳನೆಯ ಶತಮಾನದಲ್ಲಿ ತಮಿಳುನಾಡಿನ ಶಿವಸ್ಥಲ ಗಳ ಸಂದರ್ಶನ ಕಾಲದಲ್ಲಿ ತಿರುನೀಲಕಂಠಪ್ಪೆರುಮ್ಬಾಣರು ತಿರುಜ್ಞಾನಸಂಬಂಧರೊಡ ನಿದ್ದು ಅವರು ತನ್ನು ಶ್ರೀಕಂಠವನ್ನೆತ್ತಿ ಹಾಡಿದ ತಿರುಪಾಟ್ಟುಗಳನ್ನು ವೀಣೆಯಲ್ಲಿ ನುಡಿಸಿ ಭಕ್ತರನ್ನು ಕುಣಿಸಿ ನಲಿಸಿದರು. ಇಂದಿಗೂ ತಿರುಜ್ಞಾನಸಂಬಂಧರ ಮೂರ್ತಿ ಯನ್ನು ತಮಿಳುನಾಡಿನಲ್ಲಿ ಪೂಜಿಸದ ಶಿವಾಲಯವಿಲ್ಲ; ಅವರ ಸ್ತೋತ್ರಗೀತಗಳನ್ನು ಹಾಡದ ಭಕ್ತರಿಲ್ಲ. ಅಚ್ಚ ತಮಿಳಿನ ಭಾವಗೀತಾ ಕವಿಪುಂಗವರೆಂದರೆ ಜ್ಞಾನ ಸಂಬಂಧರು. ತಮಿಳಿನಲ್ಲಿ ಅವರಿಗಿದ್ದ ಜ್ಞಾನ, ಪ್ರೇಮಗಳಿಗೆ ಪಾರವಿಲ್ಲ. ಆ ಕಾರಣ

ದಿಂದಲೆ ತಮಿಬ್ ಜ್ಞಾನಸಂಬಂಧರ್ ಎಂಬ ಅನ್ವರ್ಥನಾಮದಿಂದವರು ಖ್ಯಾತ ರಾಗಿರುವರು.

ವೇದಾರಣ್ಯವೇ ಮೊದಲಾದ ಕ್ಷೇತ್ರಗಳಲ್ಲಿ ತಿರುಜ್ಞಾನಸಂಬಂಧರು ಮೆರೆದ ಮಹಿಮೆಗಳನ್ನು ಪಾಂಡ್ಯರಾಜನಾದ ಕೂನಪಾಂಡ್ಯನ ಮಹಾದೇವಿ ಮಂಗೈಯರ್ಕ್ಕರಸಿಯರೂ ಮಂತ್ರಿಯಾದ ಕುಲಚ್ಚರೆಯೂ ಕೇಳಿ ಅವರನ್ನು ತಮ್ಮ ನಾಡಿಗೆ ಆಹ್ವಾನವಿತ್ತು ಕರಸಿಕೊಂಡರು. ಜೈನ ಧರ್ಮವನ್ನು ಕೈಗೊಂಡಿದ್ದ ತನ್ನ ಪತಿಯನ್ನು ಮತ್ತೆ ಶೈವಧರ್ಮಕ್ಕೆ ಹಿಂತಿರುಗಿಸಬೇಕೆಂದು ಚೋಳಮಹಾರಾಜನ ಮಗಳಾದ ಮಂಗೈಯರ್ಕ್ಕರಸಿಯರು ಜ್ಞಾನ ಸಂಬಂಧರನ್ನು ಪ್ರಾರ್ಥಿಸಿದರು. ಜೈನರು ಹೂಡಿದ ನಾನಾ ವಾದಗಳಲ್ಲಿ ಅವರನ್ನು ಆಳುಡೆಯಪಿಳ್ಳೆಯರು ಸೋಲಿಸಿದ್ದರಿಂದ, ಸೋತ ಜೈನರು ತಮ್ಮ ಪ್ರತಿಜ್ಞೆಯನ್ನು ಉಳಿಸಿಕೊಳ್ಳಲು ಕುಲಚ್ಚರೆಯರು ನೆಡಿಸಿದ ಶೂಲವನ್ನು ಏರಬೇಕಾಯಿತು. ಕೂನಪಾಂಡ್ಯನಿಗೆ ಉಂಟಾಗಿದ್ದ ವ್ಯಾಧಿಯ ಜೊತೆಗೆ ಆತನ ಕೂನೂ ಜ್ಞಾನಸಂಬಂಧರು ಮೆರೆದ ವಿಭೂತಿ ಮಂತ್ರಮಹಿಮೆಗಳಿಂದ ಪರಿಹಾರವಾಗುವಂತಾಗಿ, ಆತನು ಸುಂದರ ಪಾಂಡ್ಯನಾದನು; ಶೈವಸಂಪನ್ನೆಯಾದ ಮಂಗೈಯರ್ಕ್ಕರಸಿಯರ ಬಯಕೆ ಈಡೇರಿತು ; ಶಿವಭಕ್ತಾಗ್ರಣಿಯಾದ ಕುಲಚ್ಚರೆಯಗೆ ತಿರುಜ್ಞಾನಸಂಬಂಧರಿಂದ ಪಂಚಾಕ್ಷರೀ ಮಂತ್ರೋಪದೇಶ ಲಭಿಸಿತು. ಪಾಂಡ್ಯನಾಡಿನಲ್ಲಿ ಜೈನಮತದ ಪ್ರಾಬಲ್ಯ ಕುಗ್ಗಿ ಶೈವಧರ್ಮ ತಲೆಯೆತ್ತಿ ನಿಂತಿತು. ಆ ಪಾಂಡ್ಯನಾಡಿನ ರಾಜಧಾನಿಯಾದ ಮಧುರೆಯಿಂದ ಹೊರಟ ತಿರುಜ್ಞಾನಸಂಬಂಧರು ಎಂದಿನಂತೆ ಅನೇಕ ಶಿವಸ್ಥಲಗಳನ್ನು ನೋಡಿ, ಹಾಡಿ ಶಿರ್ಕಾಟಿ (ಶೀಯಾಳಿ)ಗೆ ಬಂದರು. ತಮ್ಮ ಹದಿನಾರನೆಯ ವರ್ಷದಲ್ಲಿ ತಂದೆಯ ಪ್ರಾರ್ಥನೆಯ ಮೇರೆ ನಂಬಾಂಡಾರ್ ನಂಬಿಯರ ಮಗಳನ್ನು ಮದುವೆಯಾದರು. ಆ ಪವಿತ್ರವಾದ ವಿವಾಹ ಪೂರೈಸಿದ ಕೂಡಲೆ ಶಿವನನ್ನು ಸೇರುವ ಹಂಬಲದಿಂದ ಜ್ಞಾನಸಂಬಂಧರು ಶಿವನಿಗೆ ಮೊರೆಯಿಟ್ಟರು. ಅದರ ಫಲವಾಗಿ ಶಿವನ ಅನುಗ್ರಹದಿಂದ ಒಂದು ಅದ್ಭುತಜ್ವಾಲೆ ಎದ್ದಿತು. ನವದಂಪತಿಗಳ ಜೊತೆಗೆ ವಿವಾಹಕ್ಕೆ ಬಂದಿದ್ದ ಬಂಧುಗಳೆಲ್ಲರೂ ಆ ಪವಾಡದ ಉರಿಯಲ್ಲಿ ಮುಳುಗಿ, ಶಿವನಡಿಯಲ್ಲಿಗೆ ನಡೆದರು. ಜ್ಞಾನ ಸಂಬಂಧರ ಬಾಳು ಮೂಡಿದ್ದು ಪವಾಡವಲ್ಲಿ, ಮುಗಿದದ್ದು ಪವಾಡದಲ್ಲಿ. ಶೈವಸಿದ್ಧಾಂತ ಸ್ಥಾಪನೆಮಾಡಿ ಪರಮಾಚಾರ್ಯರೆನಿಸಿಕೊಂಡ ತಿರುಜ್ಞಾನಸಂಬಂಧರನ್ನು ಷಣ್ಮುಖಸ್ವಾಮಿಯಅವತಾರವೆಂದು ಇಂದೂ ಪೂಜಿಸುವರು.

೧-೧೦ **ಕುಲಚ್ಚಿರೈ (ತ)**—ಪಾಂಡ್ಯನಾಡಿನಲ್ಲಿ ಮಣಮೇರ್ಕುಡಿ ಎಂಬ ಊರಿನಲ್ಲಿ ವಿಭೂತಿ ರುದ್ರಾಕ್ಷಿ ಧರಿಸಿ, ಪಂಚಾಕ್ಷರಿಯನ್ನು ಜಪಿಸುತ್ತ ಭಕ್ತರು ಯಾರು

ಬಂದವರೂ ಮೇಲು-ಕೀಳೆಂದೆಣಿಸದೆ ಸೇವೆ ಸಲ್ಲಿಸುತ್ತಿದ್ದವರು. ಮಧುರೆಯ ಕೂನ ಪಾಂಡ್ಯ ಮಹಾರಾಜನಿಗೆ ಪ್ರಧಾನಿಯಾಗಿ, ಪಾಂಡ್ಯನ ರಾಣಿಯಾದ ಮಂಗೈಯರ್ಕ್ಕರಸಿಯರ ಶಿವಭಕ್ತಿಯ ಸೇವಾಕಾರ್ಯದಲ್ಲಿ ನೆರವಾದವರು. ಶೈವಸಮಯದ ಪರಮಾಚಾರ್ಯರಾದ ತಿರುಜ್ಞಾನಸಂಬಂಧರಡಿಗೆರಗಿ ಅವರಿಂದ ಪಂಚಾಕ್ಷರೀ ಮಂತ್ರೋಪದೇಶವನ್ನು ಕುಲಚ್ಚರೆಯರು ಪಡೆದ ಅಂಶ ತಿರುಜ್ಞಾನಸಂಬಂಧರ ತೇವಾರಗಳಿಂದ ತಿಳಿದು ಬರುತ್ತದೆ. ಸುಂದರಮೂರ್ತಿ ನಾಯನಾರಿಂದ [೧] 'ಪೆರುನಂಬಿ' (ಮಹಾಭಕ್ತ) ಎಂದು ಹೊಗಳಿಸಿಕೊಂಡ ಕುಲಚ್ಚರೆಯರು ಶಿವಭಕ್ತರ ಸೇವೆಯೇ ಪ್ರಾಣವೆಂದೆಣಿಸಿದವರು.

೨-೧೪ **ತಿಲ್ಲೈವಾಬಿನ್ದಣರ್** (ತೆ)—ಚಿದಂಬರದಲ್ಲಿರುವ ಮೂಲಸ್ಥಾನದ ಶಿವಲಿಂಗಕ್ಕೂ, ಕನಕಸಭೆಯಲ್ಲಿ ಪಾರ್ವತಿ ಕಾಣುವಂತೆ ಆನಂದ ತಾಂಡವವನ್ನಾಡುವ ನಟರಾಜನಿಗೂ ಪೂಜೆ ಸಲ್ಲಿಸುವ ಶೈವಬ್ರಾಹ್ಮಣರಿಗೆ ಈ ಹೆಸರು ಬಂದಿದೆ. ಕೈಲಾಸದಲ್ಲಿದ್ದು ಭೂಮಿಗವತರಿಸಿದ ಮೂರು ಸಾವಿರ ಶಿವಗಣಂಗಳೆ ಇವರು ಎಂಬುದು ಪುರಾಣವಿದಿತವಾದ ವಿಷಯ. ಸುಂದರಮೂರ್ತಿನಾಯನಾರ್ ಇವರನ್ನು "ತಿಲ್ಲೆವಾಬನ್ದಣರ್ ತಮಡಿಯಾರ್ಕ್ಕುಮಡಿಯೇನ್" ಎಂದು ಹಾಡಿ ಹೊಗಳಿರುವರು.

೩-೨೩ **ಕಾರೈಕ್ಕಾಲಮ್ಮೈಯಾರ್** (ತೆ)—ಇವರ ನಿಜವಾದ ಹೆಸರು ಪುನಿತವತಿ. ಚೋಳಮಂಡಲದ ತಂಜಾವೂರ್ ಜಿಲ್ಲೆಯ ಕಾರೈಕ್ಕಾಲ್ ಎಂಬ ಊರಿನಲ್ಲಿ ಹುಟ್ಟಿದವರಾದ ಕಾರಣ, ಆ ಊರಿನ ಅಮ್ಮೈಯಾರ್ ಎಂದು ಪ್ರಸಿದ್ಧರಾದವರು. ವೈಶ್ಯಕುಲಕ್ಕೆ ಸೇರಿದ ಧನದತ್ತನ ಮಗಳು. ಅದೇ ಜಿಲ್ಲೆಯ ನಾಗಪಟ್ಟಣದ ಪರಮದತ್ತನಿಗೆ ಸತಿಯಾಗಿ ಆತನೊಡನೆ ತೌರುಮನೆಯಲ್ಲಿಯೇ ಗುಪ್ತಮಾಹೇಶ್ವರಿಯಾಗಿದ್ದಾಕೆ. ಶಿವಭಕ್ತಿ ಮಹಿಮೆಯಿಂದ ಪ್ರಾರ್ಥನೆಯ ಸಾಫಲ್ಯವನ್ನೂ, ಅದ್ಭುತವನ್ನೂ ಮೆರೆದ ಕಾರಣ ತನ್ನ ಪತಿಯ ಭಕ್ತಿಗೇ ಪಾತ್ರಳಾದವಳು. ಶಿವಜ್ಞಾನವನ್ನು ಪಡೆದು ಶಿವನನ್ನು ಹಾಡಿ ಶರಣರು ಸಂಚರಿಸಿದ ಮಾರ್ಗದಲ್ಲಿ ಕಾಲನ್ನು ಸೋಕಿಸದೆ ತಲೆಯಲ್ಲಿ ನಡೆದು ಕೈಲಾಸಕ್ಕೆ ಹೋದ ಭಕ್ತೆ. ಈಕೆ ಅರವತ್ತು ಮೂವರು ಪುರಾತನರಲ್ಲಿ ಒಬ್ಬಳು. ತಮಿಳಿನ ಪೆರಿಯಪುರಾಣದಲ್ಲಿ ಈಕೆಯ ವೃತ್ತಾಂತವಿದೆ. ಹರಿಹರನ ರಗಳೆ, ಪಾಲ್ಕುರಿಕೆ ಸೋಮೇಶ್ವರನ ಗಣಸಹಸ್ರನಾಮ, ತ್ರಿಷಷ್ಟಿಪುರಾತನವಿಲಾಸ ಮೊದಲಾದ ಕನ್ನಡ ಕೃತಿಗಳಲ್ಲಿ ಈಕೆಯ ಚಾರಿತ್ರವಿರುವುದು ಕಂಡುಬರುತ್ತದೆ.

---

೧ ಪೆರುನಮ್ಬಿ ಕುಲಚ್ಚಿಜ್ಜೈ ತನಡಿಯಾರ್ಕ್ಕುಮಡಿಯೇನ್, ಸುಂದರಮೂರ್ತಿ ನಾಯನರ ತಿರುತ್ತೊಣ್ಡತ್ತೊಹೈ ಪದ್ಯ ೪ ಪಂಕ್ತಿ ೩.

ನೇರಿತಹ ಶರಣ ಸಂಚಾರಮಾರ್ಗದೊಳು ಸುವಿ
ಚಾರದಿಂದಡಿಯನಿಡದೆ ತಲೆಯೊಳು ನಡೆದ
ಕಾಲಕಾಲನಮ್ಮ ಪೊರೆಯೆನ್ನ ॥ ಪುರಾತನ ತ್ರಿವಿಧಿ. ಪದ್ಯ ೭೨

೩–೨೩, ೭–೧೬ **ಮುರುಘ**—ಅರುವತ್ತುಮೂವರು ಪುರಾತನರಲ್ಲಿ ಒಬ್ಬರು. ಚೋಳ ಮಂಡಲದ ತಿರುಪ್ಪುಗಲೂರ್ ಎಂಬಲ್ಲಿಯೇ ಅವರು ಹುಟ್ಟಿ ಶಿವಭಕ್ತರಾಗಿ ಬೆಳಗಿದುದು. ಪ್ರತಿ ದಿನವೂ ಹೊತ್ತು ಹುಟ್ಟುವುದಕ್ಕೆ ಮುನ್ನ ಎದ್ದು ಶುಚಿರ್ಭೂತರಾಗಿ

"ಶಿವನ ಪೂಜೆಗೆಂದು ಸಕಲ ಪುಷ್ಪವಾಟಿಯೊಳಗೆ ಪೊಕ್ಕು
ನವನವಪ್ರಸೂನ ಕುಲವನೆಯ್ದೆ ಕೊಯ್ದು ಭಕ್ತಿ ಮಿಕ್ಕು"

ಶಿವನಿವಾಸದ ರಂಗಮಂಟಪಕ್ಕೆ ಬರುತಿದ್ದರು. ಅಲ್ಲಿ ಶಿವನಿಗೆ ಮಜ್ಜನಕ್ಕೆರೆದು, ನಿಷ್ಠೆಯಿಂದ ತಾವು ಆಯ್ದು ತಂದ ಹೂಗಳಿಂದರ್ಚಿಸಿ ನೋಡಿ ನಲಿಯುತ್ತಿದ್ದರು. ಶಿವನ ಮುಂದೆ ಆಡಿ ಪಾಡಿ ಕಣ್ಗಳಿಂದೆ ಸುಖರಸದ ಹೊನಲನ್ನು ಹರಿಸುತ್ತಿದ್ದರು.

ಉಂಬೆಡೆಯೊಳುಡುವೆಡೆಯೊಳಾ
ಡಂಬರದಿಂ ಕುಳ್ಳಿಪೆಡೆಯೊಳೊರಗಿಪ್ಪೆಡೆಯೊಳ್ ।
ನಂಬುಗೆ ಮಿಗೆ ಮುರುಘಂ ಕೂ
ರ್ಪಂ ಬಿಡದೆ ನಮಃಶ್ಶಿವಾಯಯೆಂದೆನುತಿರ್ಪಂ ॥

ಅರಿವುದು, ಮರೆವುದು, ನುಡಿವುದು, ನಡೆವುದು, ಕರೆವುದು, ಕಾಣ್ಬುದು ಎಲ್ಲವೂ ಅವರಿಗೆ ನಮಃಶಿವಾಯವಾಗಿದ್ದುವು.

"ಉಲಿವ ಹಕ್ಕಿಯುಲಿವು ಪಂಚವರ್ಣದಂತೆ ತಾಗೆ ಕಿವಿಗೆ
ಕೆಲೆವ ವೃಷಭನಾದಮುಂ ನಮಃಶಿವಾಯವಾಗೆ ತನಗೆ"

ನಮಃಶಿವಾಯ ಮುರುಘರೆಂಬ ಹೆಸರು ಅನ್ವರ್ಥವಾಯಿತು. ಅವರ ಹಾಗೆ ಶಿವನ ನಾಮರಸದಲ್ಲಿ ನೆನೆದವರಿಲ್ಲ, ಶಿವನ ಮೇಲೆ ಪ್ರೇಮರಸದ ಮಳೆಯನ್ನು ಕರೆದವರಿಲ್ಲ. ತಿರುಜ್ಞಾನಸಂಬಂಧರ ಸ್ನೇಹಲಾಭವನ್ನು ಪಡೆದು, ಆ ಆಳುಡೈಯ ಪಿಳ್ಳೆಯರ ಅದ್ಭುತ ವಿವಾಹ ಸಮಯದಲ್ಲಿ ತಮ್ಮ ಪಂಚಾಕ್ಷರೀ ಮಹಿಮೆಯ ಫಲವಾಗಿ ಶಿವನಡಿಯ ನೆಳಲನ್ನು ಸೇರಿದವರೆಂದರೆ ಈ ಮುರುಘರು.*

---

*ತಮ್ಮ ಸಂಪತ್ತೆಲ್ಲವನ್ನೂ ಮಾಹೇಶ್ವರ ಪೂಜೆಗೆ ಸಲ್ಲಿಸಿ, ಕಡೆಗೆ ಜೂಜಾಡಿ ಗೆದ್ದು ತಂದ ಹಣದಿಂದ ಜಂಗಮಾರಾಧನೆಯನ್ನು ಮಾಡುತ್ತಿದ್ದು, ಶಿವಪದವನ್ನು ಹೊಂದಿದ ಮೂರ್ಖನಾಯನಾರ್ ಎಂಬುವರೇ ಬೇರೆ; ಈ ಮುರುಘರೇ ಬೇರೆ.

ಪರಮೂಲಮಂತ್ರವನೆ ಹರಣವಾಗುಚ್ಚರಿಸಿ
ಪರಮನೊಲುಮೆಯನು—ಪಡೆದ ಮುರುಘರ ಚರಣ
ವಿರಲೆನ್ನ ಮಾನಸದೊಳೊಂದಿ ॥ ನಿಜಗುಣಶಿವಯೋಗಿ

೪–೨ **ತೆಲ್ಲಿಗ ಕಲ್ಲಿಸೆಟ್ಟಿ**—ಹರಿಹರನ ಮಾತಿನಲ್ಲಿಯೇ ಈತನ ಕಥಾಪ್ರಸಂಗ ವನ್ನು ಕೇಳೋಣ.

“ ಕಲ್ಯಾಣದ ತೆಲ್ಲಿಗನಪ್ಪ ಕಲ್ಲಿಸೆಟ್ಟಿಯು ಗಾಣದ ಕೊಟ್ಟಗೆಗೆ ಬಂದು, ಮುಗಿಲ ಮಱೆಯ ಸೂರ್ಯನಂತೆ ಮಾಸಿದ ಪರುಷದಂತೆ ಗವಸಣಿಗೆಯಿಕ್ಕಿದ ಬೆಳಗಿನಂತೆ ಮುಸುಂಕಿರ್ದ ಸಾಮರ್ಥ್ಯದಂತೆ ಪ್ಪೆಗರೆದ ಶಿವಜ್ಞಾನದಂತೆ ಅಜ್ಞಾನಿಗಳ ನೋಟಕ್ಕದಾಸೀನವಪ್ಪ ಹೊರವೇಷನ ಹಱಿದ ಕಂಥೆಯ ಅಱುವೆಗೌಪೀನ ಪ್ರವಾಸಿಕ ದೇಶಿಕ ವೇಷಂ ಪ್ರಭೂತಮಾಗಿ ನಿಂದಿರ್ದ (ರೇವಣ) ಸಿದ್ಧನನಱಿಯದೆ ತನಗಂ ತನ್ನ ಸತಿಗಂ ಗಾಣವಾಡುವೆತ್ತಿಂಗೆ ಒಂದೊಂದೆ ಕಣ್ಣಾದ ಕಲ್ಲಿಸೆಟ್ಟಿಯುರು ಕಂಡು—ಎಲೆ ಅಯ್ಯ, ಗಾಣಮೆತ್ತಂ ಹೊಡೆದೊಡೆ ಹಿಱಿಯಂ ಮಲಲಿಕ್ಕುವೆಂ ನಡೆ—ಎಂದು ನುಡಿಯಲವನಂ ಕೃತಾರ್ಥನಂ ಮಾಡುವುದ್ಯೋಗಮೆಂದೊಡಂಬಟ್ಟು, ಗಾಣದ ಕತ್ತರಿಯಂ ಕೇಣದೊಳೆಱಿ ಜನನದ ಬಳಿವಿಡಿದು ಸಕಲ ಭುವನಪೀಠೆಱದೊಳ್ ತಿರುಗುವುದೆಂಬುದಂ ತೋಱುವಂ ತೆತ್ತಂ ಹೊಡೆದು ಗಾಣಮಂ ತಿರಿಗಿಸುತ್ತೀರ್ತೆಱದಿಂ ಕೆಲವು ದಿನವಿರೆ, ಮಂಗಳ ಸೇವ್ಯನ ಸಂಗದಿಂ ಕಲ್ಲಿಸೆಟ್ಟಿಯ ದರಿದ್ರಂ ಹಱಿದು ಹಾಱಿ ಸಂಪದಮೇಱಿ ಸುಖಿಯಾಗಿರ್ದೊಂದು ದಿನಂ ರಾತ್ರಿಯೊಳ್—ನಮಗೀ ಹಿಂಡಿಯ ಮರುಳನ ಬರವಿಂ ಲೇಸುಗಳೊದವಿತ್ತೆಂದು ಕಾರಣಿಕನಾಗದೆ ಮಾಣನೆಂದು ಹೆಂಡತಿಯೊಡನೆ ನುಡಿವುತ್ತಿರೆ—ಭೋಂಕನೆ ತನ್ನ ಕೆಟ್ಟ ಕಣ್ಬಂದಿರೆ, ಕೌತುಕದಿಂ ಸತಿಯ ಮೊಗಮಂ ನೋಡಲಾಕೆಯ ಕಣ್ಬಂದಿರೆ, ಬೆಱಗಾಗಿ ಪೊಱಗಣೆತ್ತಂ ನೋಳ್ಪೆನೆಂದು ಬರ್ಪಾಗಳೆತ್ತಿನ ಕಣ್ಬಂದಿರೆ, ರೇವಣದೇವನೆತ್ತಂ ನೋಯಿಸಲೇಕೆಂದದಂ ಬಿಟ್ಟು ಕೊಟ್ಟಗೆಯ ಧವಳಾರದ ಕತ್ತರಿಯ ಸಿರಿಮಂಚದ ಮೇಲೆಣ್ಣೆ ಬತ್ತಿಯ ಹಂಗಿಲ್ಲದ ಬೆಳಗಿನೊಳು ದಿವ್ಯಾಂಗನೆಯರಿಂ ಪದತಳಮನೊತ್ತಿಸಿಕೊಳುತ್ತಿರ್ದ ನಿತ್ಯ ನಿಳಯನಂ ಕಂಡು ಕಲ್ಲಿಸೆಟ್ಟಿ ಕೌತುಕಂಬಟ್ಟು, ನೋಡಲಮ್ಮದೆ ಮೆಯ್ಯಿಕ್ಕಿ ಬಿಳ್ದು, ದೇವರ ದೇವ ಕರುಣಿಪುದೆಂದು ಚರಣಮಂ ಪಿಡಿದಿರ್ದ ತಿಲಘಾತಕನನೆತ್ತಿ ಮಸ್ತಕದೊಳು ಹಸ್ತಮನಿಟ್ಟು ತೆಲ್ಲಿಗಂಗೆ ತವನಿಧಿಯಂ ಕೊಟ್ಟು ಇವನಱಿಂ ಇವನಱಿದಂ ಇನ್ನಿರಲಾಗದೆಂದು ಮಂಗಳವಾಡಕ್ಕೆ ” ಬಿಜಯಂಗೈದನು. **ರೇವಣಸಿದ್ಧೇಶ್ವರನ ರಗಳೆ “ ದ್ವಿತೀಯ ಸ್ಥಲ ”**

೪-೩೦ **ರೇಮಯ್ಯ ರೇಚಯ್ಯ**—ವೆಲನಾಡಚೋಳನ ಕಥಾಪ್ರಸಂಗದಲ್ಲಿ ಬರುವ ರೇಮಯ್ಯ ದೇವಯ್ಯಗಳೇ* ಇವರು ಎಂಬುದು ಮಲ್ಲಣಾರ್ಯನ ಕಥಾ ಸೂಚನೆಯಿಂದ ತಿಳಿದುಬರುತ್ತದೆ. ಶಿವದೇವಾಲಯದ ಕಂಬವನ್ನು ಒಡೆದು ಬೌದ್ಧಾಲಯವನ್ನು ಕಟ್ಟಿದಂತಹ ಬೌದ್ಧಗುರುವನ್ನು ಕೊಂದ ಪರಸಮಯಕೋಲಾ ಹಲರೂ ಹರಭಕ್ತಿ ಧುರಂಧರರೂ ಆದವರೆಂದು ಪುರಾಣ ಪ್ರಸಿದ್ಧಿ ಹೊಂದಿದವರು.

೭-೪ **ಶಿವಪ್ರಿಯನಾಚಿ**—ಚೋಳದೇಶದ ಒಬ್ಬ ಶಿವಭಕ್ತೆ. ಬಂದ ಭಕ್ತರಿಗೆಲ್ಲ ದಾಸೋಹ ನೀಡುವುದೇ ಆಕೆಯ ವೃತ್ತಿ. ತಂದೆ ತೀರಿಹೋದ ಮೇಲೆ ಅಣ್ಣನಿಂದ ಸಾಕಷ್ಟು ದ್ರವ್ಯ ಪಡೆದಿದ್ದಳು. ತಮ್ಮನಿಗೆ ಆಸ್ತಿಯಲ್ಲಿ ಭಾಗ ಕೊಟ್ಟು ಅಣ್ಣ ವ್ಯಾಪಾರದಲ್ಲಿ ತೊಡಗಿದ್ದನು. ಶಿವಪ್ರಿಯನಾಚಿ ಎಂದಿನಂತೆ ಜಂಗಮ ಸೇವೆಯಲ್ಲಿಯೇ ನಿರತಳಾಗಿದ್ದಳು. ಒಂದು ದಿವಸ ಅಣ್ಣ ವ್ಯಾಪಾರಕ್ಕೋಸ್ಕರ ಹಡಗನ್ನೇರಿ ಹೋದವನು ಹಿಂದಿರುಗಲೇ ಇಲ್ಲ. ಹಡಗು ಮುಳುಗಿ ಆತ ಸತ್ತುಹೋದನೆಂದು ಸುದ್ದಿ ಮುಟ್ಟಿತು. ಆ ಸಂಗತಿ ಕೇಳಿ ಶಿವಪ್ರಿಯನಾಚಿಯಲ್ಲಿದ್ದ ಹಣವನ್ನು ಕಸಿದುಕೊಳ್ಳಬೇಕೆಂದು ಆಕೆಯನ್ನು ತಮ್ಮನು ಪೀಡಿಸತೊಡಗಿದನು. ಆಗ ತನ್ನನ್ನು ಮೊರೆಹೊಕ್ಕ ಶಿವಪ್ರಿಯನಾಚಿಯ ಜಂಗಮಸೇವೆಗೆ ಭಂಗಬಾರದಂತೆ ಶಿವನು ಆಕೆಯ ಅಣ್ಣನ ಆಕೃತಿಯಲ್ಲಿ ಮೈದೋರಿದನು. ಆ ತಮ್ಮನನ್ನು ಕೋಲಿನಿಂದ ಒಡಿದು ಶಿವಪ್ರಿಯನಾಚಿಯ ಇಷ್ಟಾರ್ಥವನ್ನು ಸಲ್ಲಿಸಿ ಆಕೆಯ ಮಹಿಮೆಯನ್ನು ಲೋಕಕ್ಕೆ ಸಾರಿದನು.

ಶಿವಪ್ರಿಯನಾಚಿಯ ತಂದೆ ಅಣ್ಣಮಲ್ಲಯ್ಯ. ಆತನು ಚೋಳದೇಶದ ಚಂದಪೂರಿನಲ್ಲಿದ್ದ ಒಬ್ಬ ವ್ಯಾಪಾರಿ. ಆತನಿಗೆ ಅಣ್ಣನಾಚಯ್ಯ, ಅರುಣಾದ್ರಿಯರೆಂಬ ಇಬ್ಬರು ಗಂಡುಮಕ್ಕಳು, ಶಿವಪ್ರಿಯನಾಚಿಯೊಬ್ಬಳೇ ಹೆಣ್ಣು ಮಗಳು ಎಂದು ಶಿವಶರಣರ ಚರಿತ್ರೆಯಲ್ಲಿ[೧] ತಿಳಿಸಿದೆ, ಮಲ್ಲಣಾರ್ಯನು ತನ್ನ ವೀರಶೈವಾಮೃತ ಪುರಾಣದಲ್ಲಿ[೨] ಕುಲಚ್ಚರೆಯರ ಇಷ್ಟಲಿಂಗವನ್ನೇ ತನ್ನ ಪತಿಯಾಗಿ ಪಡೆದ ಶಿವಪ್ರಿಯನಾಚಿಯ ವಿಷಯವನ್ನು ಬಹು ರಮ್ಯವಾಗಿ, ಭಕ್ತಿನಿಷ್ಠೆಯ ನಡುವೆ ಹಾಸ್ಯಮಿನುಗುವಂತೆ, ಚಿತ್ರಿಸಿರುತ್ತಾನೆ. ಪುರಾತನ ದೇವಿಯರ ತ್ರಿವಿಧಿಯಲ್ಲಿಯೂ ಇದೇ ಕಥೆಯ ಸಂಗ್ರಹವಿದೆ :

---

*ಭುವನಕೋಶ (ಮ್ಯ.ಓ.ರಿ.ಇ. K.A. ೧೮೪) ಎರಡನೆ ಭಾಗ, ಪುಟ ೫೦; ಪಾಲ್ಕುರಿಕೆ ಸೋಮೇಶ್ವರ ಪುರಾಣ. ಸಂಧಿ ೭, ಪದ್ಯ ೯೪-೯೫.

೧. ಭಾಗ ೧, ಪುಟ ೧೧೫. ೨. ಕಾಂಡ ೪, ಸಂಧಿ ೧೦.

ಶಿವಲಿಂಗದೇವರನು । ವಿವರದಿಂದಲಿ ನೆರೆದು
ಅವನಿಯೊಳರಿಯಲು ಶರಣ ಸತಿ ಎನಿಸಿರ್ದ
ಶಿವಪ್ರಿಯನಾಚಿ—ಶರಣಾಗು ||

ಎರಡು ಕಥಾಭಾಗಗಳಲ್ಲೂ ಶಿವಪ್ರಿಯನಾಚಿ ದಾಸೋಹಿ, ಅಲ್ಲದೆ ಶಿವಪ್ರಿಯೆ ಒಬ್ಬಳು ವೈಶ್ಯನ ಮಗಳು. ಆದರೆ ಇಬ್ಬರೂ ತಮ್ಮ ದೃಢಭಕ್ತಿಯಿಂದ ಮೃಡನನ್ನು ಒಲಿಸಿಕೊಂಡವರು.

೭–೧೦ **ಮಾನಕ್ಕಂಜಾರ್(ತ)**—೬೩ ಪುರಾತನರಲ್ಲಿ ಒಬ್ಬ ; ಸೇನಾಧಿಪತಿ ಪದವಿಯಲ್ಲಿದ್ದ ಆತನ ಸ್ಥಳ ಕಂಜಾರೂರ್. ಬಹಳ ವರ್ಷಗಳತನಕ ಮಕ್ಕಳಿಲ್ಲದೆ ಇದ್ದ ಆತನಿಗೆ ಶಿವನ ಕೃಪೆಯಿಂದ ಒಂದು ಹೆಣ್ಣು ಮಗುವಾಯಿತು. ಆ ಮಗು ತಾಯಿತಂದೆಯರ ಪ್ರೇಮದಿಂದ ಬೆಳೆದು "ವರಕುಲಮಣಿದೀಪಿಕೆ" "ಭಕ್ತೋತ್ಕರ ಜಲನಿಧಿ ಚಂದ್ರಿಕೆ" ಎನ್ನುವಂತೆ ಒಪ್ಪತೊಡಗಿದಳು.

ಆ ಮನೋಹರಳಾದ ಕನ್ನಿಕೆಗೆ ವಿವಾಹಮುಹೂರ್ತ ಒದಗಿಬಂದಿತು. ಶಿವನೇ ಜಂಗಮವೇಷವನ್ನು ಧರಿಸಿ ಆ ವೇಳೆಗೆ ಕಾಣಿಸಿಕೊಂಡನು. ತಂದೆಯಾದ ಮಾನ ಕಂಜಾರನ ಆಜ್ಞೆಯಂತೆ ತನಗೆ ಮಣಿಯಲು ಬಂದ ಮದುಮಗಳ ಸೋರ್ಮುಡಿ ಯನ್ನು ಆ ಜಂಗಮನು ನೋಡಿ ಆಶಿಸಿದನು. ಆದರೆ ಮಾನಕಂಜಾರನನ್ನು ಕುರಿತು ಆತನು

"ನಿನ್ನನೊಂದಂ ಬೇಡಿ ಬಂದೆವೀವೊಡೆ ಪಿರಿದು
ನಿಮಗವಸರಂ ಬೇಡಲಾಗದೀ ಸಮಯದೊಳ್
ನಿಮಗೆ ಕೊಡಲರಿದು ವೈವಾಹದುತ್ಸಾಹದೊಳ್
ನಾಳೆ ಬಂದಪೆವೀಗಳೇಕೆ ಮಂಗಳದೊಳಗೆ
ಹೇಳಲಮ್ಮೆವು ಬಳಿಕ ಮುನಿವುದೀ ಸಭೆ ನಿನಗೆ"

ಎಂದು ಹೇಳಲು ಆ ಜಂಗಮನನ್ನು ಕುರಿತು

"ಬಂದುದೇ ಮಂಗಳಮಯಂ ದೇವ ನೀನೊಲ್ದು
ನಿಮ್ಮ ವಂಚಿಸಿ ಬೇರೆ ಮಂಗಳಂ ತಾನುಂಟೆ
ನಿಮ್ಮಡಿಗಳಿಲ್ಲದುತ್ಸಾಹವೀ ಧರೆಗುಂಟೆ
ನೀಂ ಮೆಚ್ಚಿ ಮಿಕ್ಕವರ್ಮುಳಿದು ಮಾಡುವುದುಂಟೆ

ಎಂದು ಪ್ರತ್ಯುತ್ತರವನ್ನಿತ್ತು ಮಾನಕಂಜಾರನಿಗೆ ಜಂಗಮನು

"ಎಮ್ಮ ಪಾವುಗೆ ಬೆರಳನೊತ್ತದಂತಿರೆ ಪಿಡಿದು
ನಿಮ್ಮೀ ಮಗಳ ಮುಡಿಯ ಕೂವಲತ್ಯಂತ ನೃದು
ತಂದಿಕ್ಕವೇಳ್ಪುದು" ಎಂದು ಕೇಳುತ್ತಿದ್ದಂತೆಯೇ ಕೈಯ ಕತ್ತಿಯಿಂದ ಹಸೆಯ ಮೋಗಣ ಮಗಳ ಮುಡಿಯನ್ನು ಕತ್ತರಿಸಿ ವೀರವಿರಕ್ತಿಯನ್ನು ಮೆರೆದ ಮಾನ ಕಂಜಾರನ ಭಕ್ತಿಗೊಲಿದು ಪ್ರತ್ಯಕ್ಷನಾದ ಶಿವನು ಗಣಪದವಿಯನ್ನಾತನಿಗಿತ್ತು ಕರುಣೆ ದೋರಿದನು.

೭-೧೮ ಅಪ್ಪೂದಿ (ತ)—ಶೈವ ಚತುರಾಚಾರ್ಯರಲ್ಲಿ ಒಬ್ಬರಾದ ವಾಗೀಶರ ಮಹಿಮೆಯನ್ನು ಕೇಳಿ, ಅವರೇ ತಮಗೆ ಶರಣೆಂದು ಮನೆಯ ಮಕ್ಕಳು, ಆಕಳು, ಕೆರೆ, ತೋಟ, ಧರ್ಮಛತ್ರ, ಅರವಟಿಗೆ—ಇವೇ ಮೊದಲಾದ ಎಲ್ಲಕ್ಕೂ ವಾಗೀಶರ ಹೆಸರನ್ನಿಟ್ಟು ಆ ಗುರುನಾಮಸ್ಮರಣೆಯನ್ನು ಸದಾ ಮಾಡುತ್ತಿದ್ದವರು. ಒಮ್ಮೆ ಶಿವಕ್ಷೇತ್ರಗಳ ದರ್ಶನವನ್ನು ಪಡೆದು ವಾಗೀಶರು ತಿಂಗಳೂರಿನ ದಾರಿಯಲ್ಲಿ ಬರುತ್ತ ಅಪ್ಪೂತಿಯಡಿಗಳ ಗುರುಭಕ್ತಿ ನಿಷ್ಠೆಯನ್ನು ಕಂಡು ಮೆಚ್ಚಿದರು. ಗುರುವಿಗೆ ಆತಿಥ್ಯ ವನ್ನು ಸಲ್ಲಿಸುವ ಸಲುವಾಗಿ ಬಾಳೆಯ ಎಲೆಯನ್ನು ತರಲು ತೋಟಕ್ಕೆ ಹೋಗಿ, ಹಾವಿನಿಂದ ಕಚ್ಚಲ್ಪಟ್ಟು ಸತ್ತುಹೋದ ಅಪ್ಪೂತಿಯರ ಹಿರಿಯ ಮಗನ ಪ್ರಾಣ ವನ್ನು ಅಪ್ಪರ್ ಉಳಿಸಿದರು. ಅಲ್ಲಿ ಕೆಲವು ದಿವಸಗಳು ಕಳೆದ ಬಳಿಕ ಅವರು ಪಳನಿಯ ಕಡೆಗೆ ಹೊರಟರು. ಅಪ್ಪೂತಿಯಡಿಗಳು ವಾಗೀಶರ ತಿರುಪಾಟ್ಟುಗಳನ್ನು ರಾಗರಸಭರಿತವಾಗಿ ಹಾಡುತ್ತ ಆನಂದದಲ್ಲಿ ಮುಳುಗಿದ್ದರು. ಕೈಲಾಸದಲ್ಲಿ ನಾರದನೇ ಮೊದಲಾದ ಗಾಂಧರ್ವರ ಮುಂದೆ ಶಿವನು

ಗಿರಿರಾಜತನೂಜೆ ಕೇಳ್ ಸ।
ದ್ಗುರುಭಕ್ತಿಯೊಳೊರ್ವನೆನ್ನ ಸೇವೆಯೊಳೊರ್ವಂ
ವರಗೀತಂಗಳೊಳೊರ್ವಂ
ಧರಣಿಯೊಳಪ್ಪೂತಿಯಡಿಯೆನುತ್ತಂ ಪೊಗಳ್ದಂ ॥

ಎಂದ ಮೇಲೆ ಶಿವನೊಲಿಸಿದ ಅಪ್ಪೂತಿಯರ ಗಾನ ಅದ್ವಿತೀಯವೇ ಸರಿ!

೭-೧೯ **ಮಲುಹಣ**—ಒಬ್ಬ ಪುರಾತನ ಶಿವಭಕ್ತಶಿರೋಮಣಿ. ಆತನ ತಂದೆ ಸುವರ್ಣಭಟ್ಟಾರಕನೆಂಬ ಶೈವಬ್ರಾಹ್ಮಣ. ಆತನು ಕಾಶ್ಮೀರ ದೇಶದ ರಾಜಧಾನಿ ಯಾಗಿದ್ದ ಭಾರತೀ ಪೀಠವೆಂಬ ಪಟ್ಟಣವಲ್ಲಿದ್ದ ಆಗರ್ಭ ಶ್ರೀಮಂತ. ಆತನು

ವೇದಶಾಸ್ತ್ರಪಾರಂಗತನೂ ಕಲಾಕೋವಿದನೂ ಆದ ತನ್ನ ಮಗ ಮಲುಹಣನಿಗಾಗಿ ದಿನವೊಂದಕ್ಕೆ ಮೂರು ಸಾವಿರ ಹೊನ್ನಿನಂತೆ ನೂರು ವರ್ಷಕ್ಕಾಗುವಷ್ಟು ದ್ರವ್ಯವಿಟ್ಟು ಶಿವೈಕ್ಯನಾದನು. ಆ ವೇಳೆಗೆ

> " 'ಅಂಗರುಚಿ ಮುಗ್ಧೆಯರ ಕಣ್ಗೆ ಕನ್ನಡಿಯಾಗೆ
> ಅಂಗಲತೆ ತರುಣಿಯರ ಸಂಗಸಂಪದವಾಗೆ
> ಸುರಕುಜದ ಚಂದನದ ಕರ್ಪುರದ ಶಶಿಯಂತೆ
> ಪರಿಮಳದ ಚಂದ್ರಿಕೆಯ ಕಾಂತಿಯಾ ಕರುವಂತೆ
> ಬೆಳವುತಿರ್ದನು ಸುಖಮನೆಳಸಿ ಮಲುಹಣನಿತ್ತ'

ಆ ಪಟ್ಟಣದ ಅಧಿದೈವವಾದ ವಿಜಯೇಶ್ವರನ

> ' ಪಾತ್ರದ ವಿಳಾಸಿನಿಯೆನಿಪ್ಪ ಪದ್ಮಾವತಿಯ
> ಚಿತ್ರತರ ಮಧುರತರ ನಾಟಕ ಕಲಾವತಿಯ
> ಎಸೆವ ಬಸಿಱೊಳು ಬಂದು ಶಿಶುಭಾವಮಂ ತಳೆದ
> ಕುಸುಮಬಾಣನ ಕೀರ್ತಿ ಬೆಳೆವಂದದಿಂ ಬೆಳೆದ
> ಮಲುಹಣಿಯ ಯೌವನವನೇನೆಂದು ಬಣ್ಣಿಪೆಂ
> ಮನವನೆಡೆಗೊಂಡನಾ ಮನಸಿಜಂ ಪರಿತಂದು
> ತನುವನೆಡೆಗೊಂಡುದಾ ಸೌಭಾಗ್ಯವೆಯ್ತಂದು
> ಪ್ರೇಮದಿಂ ಮಧುರೂಪಿನೊಳು ಪೊಗಲು ನೂತನಂ
> ಪೂಮುಡಿಯನಿಂಬುಗೊಂಡುದು ಮಕರಕೇತನಂ
> ಭ್ರೂಲತೆಯನಾಶ್ರಯಿಸಿತಿಕ್ಷುಚಾಪಂ ನೋಡ
> ಆಲೋಕನವನೊತ್ತುಗೊಂಡುವಲರ್ಗಣೆ ನೋಡ' "—ಹ.ರ.

ಮಗಳಿಗೆ ಈ ಹೊಸ ಹರೆಯದೊಡನೆ ರಸಮಯ ಲಾಸ್ಯಸಂಪತ್ತೂ ಕೈಗೂಡಿತೆಂದು ಅರಿತ ತಾಯಿ ಒಂದು ದಿನ ವಸಂತಮಾಸದಲ್ಲಿ ವಿಜಯೇಶ್ವರನ ಮುಂದೆ ನರ್ತನ ಮಾಡಿ ಸೇವೆ ಸಲ್ಲಿಸಲೆಂದು ಆಕೆಯನ್ನು ದೇವಾಲಯಕ್ಕೆ ಕರೆತಂದಳು. ನರ್ತನ ಆರಂಭಿಸಿತು. ಅಲ್ಲಿಗೆ ನಿತ್ಯನೇಮದಿಂದ ಶಿವಾರ್ಚನೆಗೆ ಬಂದಿದ್ದ ಮಲುಹಣನ ಚಿತ್ತ ನರ್ತಕಿಯ ರೂಪು ಲಾವಣ್ಯಗಳಿಂದ ಕಲಕಿತು. ನರ್ತನದ ಆನಂದದಲ್ಲಿಯೇ ತಲ್ಲೀನಳಾಗಿದ್ದು ಕಣ್ದೆರದ ಮಲುಹಣಿಯ ನೋಟ ಕುಸುಮಶರನಂತಿದ್ದ ಮಲುಹಣನನ್ನು ಕಂಡು ಬೆದರಿತು ಹೃದಯ ನಡುಗಿ, ಎಚ್ಚರ ತಪ್ಪುವಂತಾಯಿತು. ರಂಗ

ಮಂಟಪವೆಲ್ಲ ವಿರಹಮಂಟಪವಾಯ್ತು, ಈಶ್ವರ ಕೇಳಿಕೆಯೆಲ್ಲ ರತೀಶ್ವರ ಕೇಳಿಕೆಯಾಯಿತು.

ಮುಂದೆ ಅವರಿಬ್ಬರ ಪ್ರಣಯಜೀವನ ಕೊಂಚ ಕಾಲ ಸಾಗಿತು. ಅಷ್ಟರಲ್ಲಿ ಮಲುಹಣನ ಸಕಲೈಶ್ವರ್ಯವೆಲ್ಲವೂ ಮಲುಹಣಿಗಾಗಿ ಸೂರೆಹೋಯಿತು. ಧನವಿಹೀನನಾದ ಮಲುಹಣನನ್ನು ಬಿಟ್ಟು ಬೇರೊಬ್ಬ ಶ್ರೀಮಂತನ ಸ್ನೇಹ ಮಾಡುವಂತೆ ಮಗಳನ್ನು ತಾಯಿ ಬಲಾತ್ಕಾರಗೊಳಿಸತೊಡಗಿದಳು. ಮಲುಹಣನಾದರೊ ಮಲುಹಣಿಯ ವಿರಹದಿಂದ ವಿಕಲನಾದನು. ಎಲ್ಲಿ ನೋಡಿದರೂ ಮಲುಹಣಿಯ ರೂಪೆ: ಆಕೆಯ ನುಡಿಯಲ್ಲದೆ ಕಿವಿಗೆ ಬೇರೊಂದು ಕೇಳದು. ಹೀಗೆ ವಿರಹಾಗ್ನಿಯಲ್ಲಿ ಬೆಂದು ಹೋಗಿದ್ದ ತನ್ನ ಪ್ರಿಯನನ್ನು ಕಂಡು ಮನಮರುಗಿ ಕರುಣೆಯಿಂದ ಆತನನ್ನು ಕುರಿತು ನನ್ನ ಮೇಲಿನ ಈ ನಿನ್ನ ವಿರಹವನ್ನು ಶಿವನ ಮೇಲಿಡು ; ಆಗ ನಿನ್ನ ತಪಸ್ಸು ಫಲಿಸುವುದು ಎಂದೆನ್ನಲು ನಿನ್ನನ್ನು ಅರೆಗಳಿಗೆಯೂ ಅಗಲಿರಲಾರದ ನಾನು ಶಿವನಲ್ಲಿ ಮನವಿಡುವ ಬಗೆ ಹೇಗೆ? ಎಂದು ಮಲುಹಣನು ಚಿಂತಿಸಿದನು. ಆಗ ನಿನ್ನೊಡನೆ ನಾನೂ ಬರುವೆನು, ನಡೆ ಶಿವನನ್ನು ನುತಿಸಿ ಒಲಿಸೆಂದು ಮಲುಹಣಿಯೂ ಹೊರಟಳು. ವಿಜಯೇಶ್ವರನ ಮುಂದೆ ತನ್ನಾಕೆಯೊಡನೆ ತನುಸೋಂಕುವಂತೆ ನಿಂತು ಆ ಸುಖಸಮಯದಲ್ಲಿ ಶಿವನಲ್ಲಿಟ್ಟ ಚಿತ್ತೈಕಾಗ್ರತೆಯಿಂದ ಮಲುಹಣನು

> ಕಾಂತಾಕಚಪ್ರಚಯಪುಷ್ಪಸುಗಂಧಿಗಂಧ
> ಲುಬ್ಧಭ್ರಮದ್ಭ್ರಮರಕರ್ಬುರಕಂಧರಾಯ
> ಗಂಧರ್ವಯಕ್ಷಸುರಸಿದ್ಧಕಿರೀಟಕೋಟಿ
> ಸಂಘಟ್ಟಘೃಷ್ಟಚರಣಾಯ ನಮಶ್ಶಿವಾಯ—ಮ.ಸ್ತೋ.

ಎಂದು ಸ್ತುತಿಸಲು ಮೊದಲುಮಾಡಿದನು. ಆತನ ಸ್ತೋತ್ರಕ್ಕೆ ಮೆಚ್ಚಿ ಶಿವನು ಪ್ರತ್ಯಕ್ಷವಾಗಿ ಮಲುಹಣಿಯ ಸಮೇತ ಮಲುಹಣನನ್ನು ಕೈಲಾಸಕ್ಕೆ ಕರೆದುಕೊಂಡು ಹೋಗಿ ಆತನಿಗೆ ಗಣಪದವಿಯನ್ನಿತ್ತನು.

೭–೩೦ **ಚಂಡೇಶ್ವರ**—ಕಾವೇರಿ ನದಿಯ ದಡದಲ್ಲಿರುವ ತಿರುಚ್ಚೇಯ್ಞಲೂರ್ ಚೋಳನಾಡಿಗೆ ಸೇರಿದೆ. ಆ ಊರಿನ ನದಿಯ ಬಳಿ ಗೋವುಗಳನ್ನು ಮೇಯಲು ಬಿಟ್ಟು ತಾನು ಮಣಲಲಿಂಗವನ್ನು ಪೂಜಿಸುತ್ತಲಿದ್ದ ಬಾಲಕನೇ ಚಂಡೇಶ್ವರ. ಆತನು ಹುಟ್ಟಿನಲ್ಲಿ ಬ್ರಾಹ್ಮಣ; ವೃತ್ತಿಯಲ್ಲಿ ಗೋಪಾಲ. ಆತನ ಅಕ್ಕರೆಯಲ್ಲಿ ಮೈತುಂಬಿಕೊಂಡು ಬೆಳೆದ ಗೋವುಗಳು ಹಗಲಿರುಳೂ ಮನೆಯಲ್ಲಿ ಸಮೃದ್ಧಿಯಾಗಿ

ಹಾಲನ್ನು ಕೊಡುತ್ತಿದ್ದುವಲ್ಲದೆ ತಮ್ಮನ್ನು ಪ್ರೇಮದಿಂದ ಕಾಪಾಡುತ್ತಿದ್ದ ಆ ಚಂಡೇಶ ಪಿಳ್ಳೆಯ ಮಣಲಲಿಂಗದ ಮೇಲೆ ತಾವಾಗಿಯೇ ಹಾಲನ್ನು ಸುರಿಸಿ ಅಭಿಷೇಕ ಮಾಡು ತ್ತಿದ್ದುವು. ಇತರ ಗೊಲ್ಲರ ಹುಡುಗರು ಚಂಡೇಶನ ಮೇಲೆ ಚಾಡಿಯನ್ನು ಹೇಳಿದರು.

ಒಮ್ಮೆ ಚಂಡೇಶನನ್ನು ಪರೀಕ್ಷಿಸಲು ಹೋದ ಆತನ ತಂದೆ ಮಣಲಲಿಂಗದ ಮೇಲೆ ಸುರಿದಿದ್ದ ಹಾಲನ್ನು ಕಂಡು ಕೋಪೋದ್ರಿಕ್ತನಾದನು. ಮಗನನ್ನು ಬೈಯುತ್ತ ಅಭಿಷೇಕಕ್ಕಾಗಿ ಆತನು ಅಲ್ಲಿಟ್ಟಿದ್ದ ಹಾಲಿನ ಕೊಡಗಳನ್ನು ಕಾಲಿನಿಂದೊದೆದನು. ಆ ಶಿವಾಪರಾಧವನ್ನು ಮಾಡಿದ ಕಾಲ್ಗಳನ್ನು—ಅವು ತನ್ನ ತಂದೆಯ ಕಾಲ್ಗಳೆಂದು ತಿಳಿದರೂ ಅವನ್ನು—ಕಡಿಯಲೆಂದು ಚಂಡೇಶನು ಎತ್ತಿದ ಕೋಲೇ ಕತ್ತಿಯಾಯಿತು. ಒಡನೆ ಕಾಲ್ಗಳನ್ನು ತುಂಡುಗೆಡೆದು, ಲಿಂಗಪೂಜೆಯಲ್ಲಿ ಮತ್ತೆ ನಿರತನಾದ ಆ ಬಾಲಕನ ದೃಢಭಕ್ತಿಗೆ ಮೆಚ್ಚಿ ಪ್ರೈದೋರಿದ ಮೃಡನು ಚಂಡೇಶನಿಗೆ ಮಾತ್ರವಲ್ಲದೆ ಆ ತನ್ನ ಭಕ್ತನಿಂದ ದಂಡನೆಗೆ ಒಳಗಾದ ಆತನ ತಂದೆಗೂ ಕೈಲಾಸಪದವಿಯನ್ನು ನೀಡಿದನು.

೭-೩೦ **ಸತಿಯುಂ ಪೊಡೆಯುಂ ಸೀಳನೇ ಚೋಳನ್**—ಬರಗಾಲದಲ್ಲಿ ಮನೆಯಲ್ಲಿದ್ದ ಮಹೇಶ್ವರರನ್ನೆಲ್ಲ ಹೊರಡಿಸಿ ಅವರಿಗಾಗಿ ಕಣಜದಲ್ಲಿಟ್ಟಿದ್ದ ಧಾನ್ಯವ ನ್ನೆಲ್ಲ ಬಂಧುಸಮೂಹದೊಡನೆ ಮುಗಿಸಿಬಿಟ್ಟಿದ್ದ ಸತಿಯ ಹೊಟ್ಟೆಯನ್ನು ಸೀಳಿ ಉಳಿದೆಲ್ಲರ ತಲೆಗಳನ್ನು ಕಡಿದು ಶಿವನನ್ನು ಮೆಚ್ಚಿಸಿದಾತನೇ ಈ ಚೋಳ. ಈತನನ್ನು ಕೈವಲ್ಯಚೋಳನೆಂದೂ ಭೂವರಚೋಳನೆಂದು ವೀರಶೈವ ಗ್ರಂಥಗಳಲ್ಲಿ ಹೇಳಿದೆ.

೭-೩೦ **ಕಲಿಕಂಬ** –ತಮಿಳು ದೇಶದ ತಿರುಪ್ಪೆಣ್ಣಾಕಡ ಎಂಬ ಊರಿನಲ್ಲಿದ್ದ ಒಬ್ಬ ಶಿವಭಕ್ತ. ಒಮ್ಮೆ ತಮ್ಮ ಬಳಿಯಲ್ಲಿ ಕೆಲಸಮಾಡಿಕೊಂಡಿದ್ದ ಒಬ್ಬ ಸೇವಕನು ಜಂಗಮ ವೇಷದಿಂದ ಮನೆಗೆ ಬಂದಾಗ ಆತನಿಗೆ ನಮಸ್ಕರಿಸಿ ಕಲಿಕಂಬನು ತನ್ನ ಸತಿಯನ್ನು ಆ ಜಂಗಮರ ಕಾಲಿಗೆ ನೀರು ತಂದು ತೊಳೆಯುವಂತೆ ಹೇಳಿದನು. ಆ ಜಂಗಮರನ್ನು ತಮ್ಮ ಮನೆಯ ಆಳೆಂದು ತಿಳಿದು ಅತನ ಸತಿಯು ನೀರನ್ನು ತರದಿರಲು ಆಕೆಯ ಕೈಗಳನ್ನು ಕತ್ತಿಯಿಂದ ಕತ್ತರಿಸಿದ ಕಲಿಕಂಬನು ಜಂಗಮಸೇವೆಯೇ ಪ್ರಾಣ ವೆಂದರಿತವನು; ಜಂಗಮವೇ ದೈವವೆಂದು ಭಾವಿಸಿದವನು.

೭-೩೦ **ಗೊಲ್ಲಾಳ**—ಶ್ರೀಶೈಲದಿಂದ ತಂದ ಲಿಂಗವೆಂದು ಒಂದು ಕುರಿಯ ಹಿಕ್ಕೆಯನ್ನು ಕೊಟ್ಟ ಜಂಗಮನ ಮಾತಿನಂತೆ ದೃಢಭಾವದಿಂದ ಅದನ್ನೇ ಲಿಂಗವೆಂದು ಪೂಜಿಸುತ್ತಿದ್ದವನು. ಗೊಲ್ಲಾಳನು ಕುರಿಯ ಹಿಕ್ಕೆಗೆ ಕೊಡಗಟ್ಟಲೆ ಹಾಲನ್ನು ಸುರಿಯುತ್ತಿದ್ದಾನೆಂದು ಕೇಳಿ ಆತನ ತಂದೆ ಮಗನಿದ್ದಲ್ಲಿಗೆ ಹೋದನು. ಎಂದಿನಂತೆ

ಗೊಲ್ಲಾಳನು ಹಿಕ್ಕೆಯ ಲಿಂಗಕ್ಕೆ ಕೊಡಗಟ್ಟಲೆ ಹಾಲನ್ನೆರೆಯುತ್ತಿದ್ದನು. ಅಷ್ಟೆಲ್ಲಾ ಹಾಲು ಹೋಯಿತೆ ಎಂದು ಕೋಪದಿಂದ ಆ ಹಿಕ್ಕೆಯ ಲಿಂಗವನ್ನು ತುಳಿದುಹಾಕಿದನು. ಗೊಲ್ಲಾಳನು ಶಿವಲಿಂಗವನ್ನು ಒಡೆದ ತಂದೆಯ ತಲೆಯನ್ನು ಕಡಿದುಹಾಕಿ ಆತನಿಂದಾದ ಶಿವಾಪರಾಧಕ್ಕಾಗಿ ಮರುಗುತ್ತಿದ್ದನು. ಶಿವನು ಗೊಲ್ಲಾಳನ ಆ ಭಕ್ತಿನಿಷ್ಠೆಗೆ ಮೆಚ್ಚಿ ಪ್ರತ್ಯಕ್ಷನಾಗಿ ಮೈದೋರಿದನು. ಗೊಲ್ಲಾಳನು ಲಿಂಗಪೂಜೆಯನ್ನು ಸದಾ ತಾನು ಮಾಡುವ ವರವನ್ನು ಅನುಗ್ರಹಿಸೆಂದು ಬೇಡಿ ಎಲೆ ಶಿವನೇ, ನಿನ್ನನ್ನು ನನ್ನ ತಂದೆಯ ಮೂಲಕ ಕಂಡೆ, ಆದಕಾರಣ ಆತನಿಗೆ ಪ್ರಾಣದಾನ ಮಾಡೆಂದು ಪ್ರಾರ್ಥಿಸಿ ತಂದೆಯನ್ನು ಬದುಕಿಸಿಕೊಂಡನು. ಆ ಬಳಿಕ ವೀರಗೊಲ್ಲಾಳನೆಂದು ಹೆಸರಾದನು.

೬-೩೦ ನಿಂಬಿ—ಈಕೆಯ ಮನೆಗೆ ಒಮ್ಮೆ ಶಿವನು ಸಿರಿಯಾಳನೊಡನೆ ಜಂಗಮ ವೇಷದಿಂದ ಬಂದನು. ಅವರಿಗಾಗಿ ಬಹು ಸಡಗರದಿಂದ ಭಕ್ಷ್ಯಭೋಜ್ಯಗಳನ್ನು ಸಿದ್ಧ ಗೊಳಿಸಿ ನಿಂಬಿಯಕ್ಕ ನೀರು ತರಲು ಹೊರಗೆ ಹೋದಳು. ಅಷ್ಟರಲ್ಲಿ ಮನೆಗೆ ಬಂದ ಮಗ ತಾಯಿಯನ್ನು ಕೂಗಿ ಆಕೆ ಮನೆಯಲ್ಲಿ ಕಾಣಿಸದಿರಲು ಆಗತಾನೆ ಮಾಡಿಟ್ಟಿದ್ದ ಹೂರಿಗೆಯೊಂದನ್ನು ತಿಂದುಬಿಟ್ಟನು. ಅದನ್ನರಿತ ತಾಯಿ ಜಂಗಮರಿಗೆ ಮೊದಲೇ ಅರ್ಪಿತವಾಗಬೇಕಾಗಿದ್ದ ಆಹಾರ ಮಗನಿಂದ ಮೀಸಲಳಿಯಿತೆಂದು ಅತಿ ಕೋಪದಿಂದ ಆತನನ್ನು ಕೊಂದು ಬಿಸುಡಿದಳು, ಮತ್ತೆ ಹೊಸದಾಗಿ ಆಹಾರವನ್ನು ಸಿದ್ಧಗೊಳಿಸಿ ಜಂಗಮರಿಗೆ ನೀಡಿದಳು. ಮಗನೆಲ್ಲಿ ಕರೆ, ಆತನಿಲ್ಲದೆ ಉಣ್ಣೆನೆಂದು ಹೇಳಿದ ಜಂಗಮ ವೇಷದ ಶಿವನಿಗೆ ನನ್ನನ್ನು ಸಿರಿಯಾಳಸೆಟ್ಟಿಯೆಂದು ಭಾವಿಸಿದೆಯಾ, ಶಿವದ್ರೋಹಿ ಯಾದ ಮಗನು ನನಗೆ ಬೇಡ, ನೀನು ಹೋದರೆ ಎನ್ನಾಣೆಯೆಂದು ಬಿಡದಿರಲು ಶಿವನು ಸಿರಿಯಾಳನ ಸಹಿತ ಊಟಮಾಡಿ ಹೊರಡಬೇಕಾಯಿತು. ಆಕೆಯ ಶುದ್ಧವಾದ ಮನಸ್ಸಿನ ನಿಷ್ಠೆಯನ್ನು ಕಂಡು ಸಿರಿಯಾಳನಿಗೆ ನಾಚಿಕೆಯಾಯಿತು. ಭಕ್ತರ ನಿಂಬಿಯೇ ತಾನೆಂದು ಭಾವಿಸಿದ ನಿಂಬಿಯಕ್ಕ ಬೇಡದೇ ಹೋದರೂ ಆಕೆಯ ಮಗನಿಗೆ ಶಿವನ ಕೃಪೆಯಿಂದ ಪ್ರಾಣ ಬಂದಿತು.

೮-೧೩, ೧೦-೫ ಕಲಿಗಣಪರ ಅಥವಾ ಕಲಿಗಣೇಶ್ವರ—ಈತನಿಗೆ ಕಲಿಗಣ ಪುಂಗವ, ಕಲಿಗಣನಾಥ ಎಂಬ ಹೆಸರುಗಳೂ ಉಂಟು ಎಂಬುದು ಶಾಂತಲಿಂಗ ದೇಶಿಕನಿಂದ ತಿಳಿದುಬರುವುದು. ಈ ಶರಣನ ಸಂಗತಿ ಹದಿನೇಳನೆಯ ಶತಮಾನದ ಕಥನಶೈಲಿಯ ಗದ್ಯದಲ್ಲಿ ಹೇಗೆ ಸಹಜವಾಗಿ ಮೂಡಿದೆ ನೋಡಿ:—

" ಚೋಳದೇಶದೊಳೊಪ್ಪುವ ಕಾಂಚಿಯಪುರದಲ್ಲಿ ಕಲಿಗಣನಾಥನೆಂಬ ಶರಣ

ನಿರ್ದು ವೀರಶೈವ ಭಕ್ತಿನಿಷ್ಠೆಯಿಂದಿರುತ್ತಂ, ಲಿಂಗಜಂಗಮದ ಭಕ್ತಿಯಂ ಮಾಡುತ್ತಂ ಶಿವಾಚಾರವನ್ನುದ್ಧರಿಸುವ ಬುದ್ಧಿಯಿಂದ ಅಂಗ ವಂಗ ಕಳಿಂಗ ಬರ್ಬರ ಘೋಟಕ ಮೊದಲಾದ ರಾಜರಿಂದ ಕಪ್ಪವಂ ತರಿಸುತ್ತಂ........ತನ್ನ ದೇಶದ ಭವಿಗಳನ್ನೆಲ್ಲಾ ಶಿವನ ಭಕ್ತರಂ ಮಾಡಿ ಚತುರಂಗ ಬಲಕ್ಕೆಲ್ಲ ಭಸ್ಮರುದ್ರಾಕ್ಷಿಯಂ ಧರಸಿಪ್ಪಂತೆ ಮಾಡಿ, ಭಕ್ತರಾಗದವರ ವೇದಾಗಮಪುರಾಣವಾಕ್ಯದಿಂದೊಡಂಬಡಿಸಿ, ಬಡವರಿಗೆ ಧನಕನಕವನಿತ್ತು ಭಕ್ತರಂ ಮಾಡಿ, ದೃಷ್ಟ ಪ್ರತ್ಯಕ್ಷಂಗಳ ತೋರಿ ಒಲ್ಲವರ ಸಂಹರಿಸಿ ಕೊಲ್ಲುತ್ತಿರೆ ಅಂಜಿ ಭಕ್ತರಾಗುವರು. ಒಲ್ಲದವರು ದೇಶವಂ ಬಿಟ್ಟು ಪೋಗಲು ವೀರಭಕ್ತಿವ್ರತದುದ್ರೇಕವು ಶಿವನಿಗೆ ಮುಟ್ಟಲು ಕಲಿಗಣನಾಥನ ಭಾಷೆಯ ನೋಡ ಬೇಕೆಂದು ಶಿವನು ಹರಕುಗಡ್ಡ ಕೆದರು ಮೀಸೆ ದೊಡ್ಡಕಚ್ಚೆ ಮೊರಗಾಲು ಮೊರಗೈ ಉರುಗಿದ ನಡು ಬರತೆದೆ ಕೈಯಲ್ಲಿ ರುಡ್ಡುಗೋಲು, ಹೆಗಲ ಮೇಲೆ ಕಂಬಳಿ ನೊರೆವಾಯಿಂದ ಗಾವುನಿಯಾಗಿ ನಡುಪಟ್ಟಣದೊಳು ಬರುತ ತೆರೆ ಹೊರೆ, ಸುಂಕ ಸೋದಿಗೆ ಕಾಣಿಕೆ ಕಡ್ಡಾಯ, ಬಿಟ್ಟಿ ಬಿಡಾರ ಬಾಹಳ. ಮಳೆಯಾದೀತೆ ಬೆಳೆಯಾದೀತೆ ಈ ಅನ್ಯಾಯದಿಂವ? ಎಂದು ಮೊರೆಯಿಡುತ್ತಂ ಉಟ್ಟಸೀರೆ, ಉಂಬ ಬಟ್ಟಲು, ದನಕರು ಮನೆಮಕ್ಕಳು ಮಾರಿ ತೆಱುಗೆಯ ಕೊಟ್ಟೆನು; ಮತ್ತೆ ಕಟ್ಟಿ ಕುಟ್ಟಿ ಕೊಲ್ಲುತ್ತಹರೆ. ಮಳೆಬೆಳೆಯಾಣೆ ಹುಲ್ಲುಗೊಬ್ಬರದಾಣೆ ಹುಸಿ ಯಲ್ಲ ಹಾಯೆಂದು, ನುಡಿಯೆ ಅರಸು ಕರಸಿ—ನಿನ್ನ ಹೆಸರೇನು? ಗೌಡ ಊರಾವುದು?—ಎನಲು ಆದಿಗೊಂಡನ ಮಗ ದೇವಗೊಂಡನೆಂಬರು. ಆದಿಪುರ ದಾಚೆ ತಿರಿಯೆಂಬ ಊರೂಯೆನಲು, ಸರ್ವಮಾನ್ಯವ ಬಿಟ್ಟೆನು ಲಿಂಗವ ಧರಿಸೂಯೆ ನಲು ಕೆಟ್ಟೆಕೆಟ್ಟೆ ನಮ್ಮವನೊಬ್ಬ ಕೊಬ್ಬಿ ಲಿಂಗವ ಕಟ್ಟಿರಲು ಮನೆಬೆಂದು ಬದುಕು ಹೋಗಿ ಕೆಟ್ಟೆನೆನಲು, ಬದುಕುವುದಕ್ಕೆ ಹೊಣೆ ನಾನೆಂದರಸು ನುಡಿಯಲು, ನಮ್ಮ ದೇವರು ಮಾರಿಮುಸಣಿ ಬೀರಮೈಲಾರ ಉರಿಚಿಕಾರಿ, ಬಾದುಮೈಯ್ಯನ ಬಿಡಲಾರೆ ನೆನಲು ತೆರೆಯ ಮರೆಯಲ್ಲಿರ್ದು ಲಿಂಗವ ಕಟ್ಟು ನೀನು ಕೊಂದರೆ ಕೊಲ್ಲು ಒಲ್ಲೆನೆನೆ ಖಡ್ಗದಿಂದ ಪೊಡೆಯಲು ಮೆಚ್ಚಿ ಪ್ರಸಂನನಾಗಿ ಬೇಡೂ ಎನಲು, ನೀನು ಲಿಂಗವ ಧರಿಸೆನೆ, ಮನಲಿಂಗವು ನಾನು ನನಗೆ ಲಿಂಗವೆಲ್ಲಿಯದು ದೀಕ್ಷೆಯ ಕೊಡುವರಾರೆನೆ ನಾ ಕೊಟ್ಟಹೆನೆಂದು ದೀಕ್ಷೆಯನಿತ್ತು ಚೋಳನೆ ಗುರುವಾಗಿ ದೀಕ್ಷೆಯಂ ಮಾಡಿದವನ ವೀರವ್ರತಾಚಾರಕ್ಕೆ ಮೆಚ್ಚಿ ಶಿವನು ಕಲಿಗಣನಾಥಂಗೆ ನಿತ್ಯಾನಂದ ನಿಜಲಿಂಗೈಕ್ಯವನಿತ್ತ ಶಿವನು."

ಭೈ.ಕಾ.ಸೂ.ರ.

೮-೧೫ **ಮಾರುಡಿಗೆಯ ನಾಚಿತಂದೆ**-ಲಿಂಗನಿಷ್ಠೆಯನ್ನು ಹೊಂದಿದ ಶಿವಭಕ್ತ. ಶಿಲಮರ್ದನ ಆತನ ಕಾಯಕ. ಶಿವಪುರ* ಆತನ ಸ್ಥಳ. ಒಂದು ದಿನ ಸಂಜೆ ತಮ್ಮೂರಿಗೆ ಬಂದು ತಂಗಿದ್ದ ಶಿವಭಕ್ತನೊಬ್ಬನನ್ನು ಮಾರುಡಿಗೆ*ಯ ಜೈನರು ಬಡಿದು ಹೊರಕ್ಕಟ್ಟಿದರು. ಆ ಶಿವಭಕ್ತನು ಶಿವಪುರದತ್ತ ಓಡಿಹೋಗಿ ಆ ಊರ ಹೊರಗೆ ನರಳುತ್ತ ಮಲಗಿದ್ದನು. ಆ ಭಕ್ತನ ಸಂಗತಿ ನಾಚಿತಂದೆಗೆ ತಿಳಿದೊಡನೆ ಆತನು ಮದುವೆಯ ಮೆರವಣಿಗೆಯ ನೆಪದಿಂದ ಶಿವಲಿಂಗಗಳನ್ನು ಬಂಡಿಗಳಲ್ಲಿ ಹೇರಿಕೊಂಡು ಮಾರುಡಿಗೆಗೆ ಹೋದನು. ಅಲ್ಲಿ ಏಳು ನೂರು ಬಸದಿಗಳಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿ ತೇರಸಗಣ ಸಹಿತ ವೀರಭಕ್ತಿಯನ್ನು ಮೆರೆದ ನಾಚಯ್ಯನ ಭಕ್ತಿಗೆ ಮೆಚ್ಚಿದ ಶಿವನು ಆತನಿಗೆ ಕೈಲಾಸ ಪದವಿಯನ್ನಿತ್ತನು. ಗಣಸಹಸ್ರದಲ್ಲಿ ಮಾರುಡಿಗೆ ನಾಚಿತಂದೆಯ ಹೆಸರಿದೆ.

೮-೧೫ **ವೆಲನಾಡ ಚೋಳ**—ಈತನ ಗುರು ಒಬ್ಬ ಬೌದ್ಧ. ಬೌದ್ಧ ಮತವೇ ಪರಮೋತ್ಕೃಷ್ಟವೆಂಬುದನ್ನು ತಾನು ಸ್ಥಾಪಿಸುವುದಾಗಿ ಹೇಳಿದ ಆ ಗುರುವಿನ ಅಪೇಕ್ಷೆಯಂತೆ ಚೋಳರಾಜನು ಸಭೆಯನ್ನು ಸೇರಿಸಿದನು. ಬಸವಣ್ಣನವರ ಸಮಕಾಲಿನರಾದ ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರು ಆ ರಾಜಸಭೆಯನ್ನು ಪ್ರವೇಶಿಸಿ "ಗರುಡಿಯನ್ನು ಹೊಕ್ಕ ಅಂಕಕಾರನಂತೆ" ವೇದವಾದ ಕರ್ಮವಾದವೇ ಮೊದಲಾದ ವಿವಿಧ ವಾದಗಳನ್ನು ಶ್ರುತಿ, ಸ್ಮೃತಿ, ಪುರಾಣೇತಿಹಾಸಗಳ ಆಧಾರದಿಂದ ಖಂಡಿಸಿದರು. ಶಿವಮಹಿಮೆಯ ಕಥೆಗಳನ್ನು ನಿರೂಪಿಸಿದರು. ಆಗ ಸಭೆಯಲ್ಲಿದ್ದ ಸಕಲ ಮತಧರ್ಮದವರೂ ಪಂಡಿತಾರಾಧ್ಯರನ್ನು ಕೀರ್ತಿಸಿದುದನ್ನು ನೋಡಿ ಬೌದ್ಧಗುರು ಸಹಿಸಲಾರದೆ ಧಿಕ್ಕರಿಸಿ ನುಡಿದು ಸಭೆಯನ್ನು ಬಿಟ್ಟು ಹೊರಟುಹೋದನು. ಅದನ್ನು ಕಂಡ ಪಂಡಿತಾರಾಧ್ಯರ ಶಿಷ್ಯರಾದ ರೇಮಯ್ಯ ದೇವಯ್ಯರೆಂಬ ಇಬ್ಬರು ನಡೆಸಿದ ಒಳಸಂಚಿನಿಂದ ದ್ವೀಪದ ಮಧ್ಯೆ ಒಂದು ದೇವಾಲಯದಲ್ಲಿದ್ದ ಆ ಬೌದ್ಧಗುರುವಿನ ವಧೆಯಾಯಿತು.

**ವೆಲನಾಡ ಚೋಳನು**† ಆ ಸಂಗತಿಯನ್ನು ಕೇಳಿದೊಡನೆಯೇ ಪಂಡಿತಾರಾಧ್ಯರನ್ನು ಬರಮಾಡಿ ಶಿಕ್ಷಿಸಲು ಹವಣಿಸಿದನು. ಆಗ ರಾಜನ ಮುಂದೆಯೇ ಎಲ್ಲರೂ

---

*ಶಿವಪುರ, ಮಾರುಡಿಗೆ ಎಂಬ ಗ್ರಾಮಗಳು ಕಲ್ಬುರ್ಗಿ ಜಿಲ್ಲೆಯಲ್ಲಿವೆ.

†ಹಾನುಗಲ್ಲೆಂಬ ಪಟ್ಟಣದಲ್ಲಿ ವೆಲನಾಡಚೋಳನಿದ್ದನೆಂದು ಪೈ.ಕಾ.ಕ.ಸೂ.ರದಲ್ಲಿ ಹೇಳಿದೆ. ಪ್ರೋಲಾಖ್ಯಪುರದಲ್ಲೆಂದು ಬೇರೆ ಹಲವು ಕೃತಿಗಳಲ್ಲಿ ಹೇಳಿದೆ.

ಕಾಣುವಂತೆ ಪಂಡಿತಾರಾಧ್ಯರು ತಮ್ಮ ಕಣ್ಣನ್ನು ತಾವೇಕಿತ್ತು ಹಾಕಿದರು. ಎರಡು ಸಾರಿ ಹಾಗೆ ಕಿತ್ತರೂ ಕಣ್ಣುಗಳು ಮತ್ತೆ ಬಂದುದನ್ನು ಕಂಡ ಚೋಳನ ಕ್ರೋಧ ಇನ್ನೂ ಹೆಚ್ಚಿತು. ಮೂರನೆಯ ಬಾರಿ ತಾನೇ ಸೇವಕನನ್ನು ಕರೆದು ಪಂಡಿತಾರಾಧ್ಯರ ಕಣ್ಣುಗಳನ್ನು ಕೀಳಿಸಿ ಎಕ್ಕದ ಹಾಲನ್ನು ಹಾಕಿಸಿದನು. ಒಡನೆ ಪಂಡಿತಾರಾಧ್ಯರು ಇಟ್ಟ ಶಾಪಾಗ್ನಿಯಿಂದ ವೆಲನಾಡಚೋಳನ ವಂಶವು ಭಸ್ಮವಾಯಿತು.

೮-೧೫ **ಉದಯ ಭೂಪ**—ವೆಲನಾಡ ಚೋಳನಿಂದ ಕಣ್ಣುಗಳು ಹೋದ ಮೇಲೆ ಪಂಡಿತಾರಾಧ್ಯರು ಅಮರಾರಾಮಕ್ಕೆ ಹೋಗಿ ಅಲ್ಲಿ ಹಿಂದೆ ತಾವು ಚೋಳ ನೊಡನೆ ಮಾತನಾಡಿ, ಬೌದ್ಧನು ಮಾಡಿದ ಹರನಿಂದೆಯನ್ನು ಕೇಳಿದ ತಪ್ಪಿಗಾಗಿ ಗಣಸಹಸ್ರನಾಮ ಸಂಕೀರ್ತನೆಯನ್ನು ಮಾಡಿ ಊರ್ಧ್ವನೇತ್ರವನ್ನು ಪಡೆದರು. ಅವರಿಗೆ ಬಸವಣ್ಣನವರು ಕಳುಹಿಸಿದ ವಿಭೂತಿಯ ಮಹಿಮೆಯಿಂದ ಕನ್ನಡಭಾಷೆಯೂ ಬಂದಿತು. ಆಗ ಬಸವಣ್ಣನವರನ್ನು ಕನ್ನಡದಲ್ಲಿ ಕೀರ್ತಿಸಿ, ಅವರನ್ನು ನೋಡಲು ಕಲ್ಯಾಣದ ಕಡೆಗೆ ಹೊರಟ ಪಂಡಿತಾರಾಧ್ಯರಿಗೆ ದಾರಿಯಲ್ಲಿ ಅನೇಕ ಶಿವಭಕ್ತರು ಪೂಜೆಯನ್ನು ಸಲ್ಲಿಸಿದರು. ಇರುಗುಡುಮುಲ ಎಂಬ ಊರಿನಿಂದ ಹಾನುಗಲ್ಲಿಗೆ ಪಂಡಿತಾರಾಧ್ಯರು ಆಗಮಿಸಿದರು.

ಉದಯಭೂಪನು ಹಾನುಗಲ್ಲಿನ ರಾಜ : ಶಿವಭಕ್ತನಾದ ಧವಳೇಶುನಾಮಯ್ಯ ಆತನ ಸೇವಕ. ಪಂಡಿತಾರಾಧ್ಯರು ತಮ್ಮ ಊರಿಗೆ ಬಂದಂದಿನಿಂದ ಅವರ ಸೇವೆ ಯಲ್ಲಿಯೇ ನಾಮಯ್ಯ ನಿರತನಾದನು. ಅದನ್ನು ನೋಡಿ ಸಹಿಸದೆಹೋದ ಇತರ ಸೇವಕರು ರಾಜನ ಬಳಿ ಚಾಡಿ ಹೇಳಿದರು. ನಾಮಯ್ಯನನ್ನು ರಾಜನುಬರಮಾಡಿ ತನ್ನ ತಂಬುಲವನ್ನು ಆತನಿಗಿತ್ತು ಅದನ್ನು ತಿನ್ನುವಂತೆ ಅಪ್ಪಣೆಮಾಡಿದನು. ಆದರೆ ಲಿಂಗನಿಷ್ಠಾಪರನಾದ ನಾಮಯ್ಯ ಅದನ್ನು ಬಿಸುಟು ಭಸ್ಮದಿಂದ ಕೈ ತೊಳೆದು ಕೊಂಡನು. ಜಂಗಮಸೇವಾರ್ಥವಾಗಿ ಅಂಗವಿಕ್ರಯ ಮಾಡಿಕೊಂಡಿರುವೆನಲ್ಲದೆ ಆಚಾರವನ್ನು ಮಾರಿಕೊಂಡಿಲ್ಲವೆಂದು ಹೇಳಿದ ನಾಮಯ್ಯನನ್ನು ಕುರಿತು ರಾಜನು— ಎಷ್ಟೋ ಭಕ್ತರು ರಾಜನಿಗೆ ಬಂಟರಾಗಿ ನಡೆದುಕೊಂಡಿರುವರು.

" ಬಾನಲೊಂಡೇಲ ಮೀ ಬಸವರಾಜಾದಿ-
ಗಾ ನಡವನೇ ಸೇವಕಪ್ರಕಾರಮುನ ?—ಮ.ಪಂ.ಚ.

ಸಾಕು, ಬಲುಮಾತೇಕೆ ? ನಿಮ್ಮ ಬಸವರಾಜನೇ ಮೊದಲಾದವರು ಸೇವಾಧರ್ಮವನ್ನ ವಲಂಬಿಸಿರಲಿಲ್ಲವೆ ? ಅವರಿಗಿಂತಲೂ ನೀನು ಭಕ್ತನೆ ?—ಎಂದು ದೂಷಿಸಿದನು. ಆಗ

ರಾಜನು ತನ್ನನ್ನು ದಂಡಿಸುವ ಮೊದಲೆ ನಾಮಯ್ಯ ಬಸವಮಹಿಮೆಯನ್ನು ರಾಜನಿಗೆ ತಿಳಿಸಿ, ತನ್ನ ತಲೆಯನ್ನು ತಾನೆ ಕತ್ತರಿಸಿಕೊಂಡು ಕೈಲಾಸಕ್ಕೆ ಹೋದನು. ರಾಜನು ಮಾಡಿದ ಅನ್ಯಾಯವನ್ನು ಕೇಳಿ ಕೆರಳಿದ ಪಂಡಿತಾರಾಧ್ಯರು ಇಟ್ಟ ಶಾಪದಿಂದ ಉದಯಾವನೀಶನ ಸಂತಾನ ಸಂಪೂರ್ಣವಾಗಿ ವಿನಾಶವನ್ನು ಹೊಂದಿತು.

೮-೩೦ ಮನುಜೋಳ—ಅನುಬಂಧದಲ್ಲಿರುವ "ಮನುಜೋಳರಗಳೆ" ನೋಡಿ.

೮-೩೦ ಪಗಲ್ಜೋಳ—ಜೋಳನಾಡಿನ ಉರ್ರೆಯೂರಿನಲ್ಲಿದ್ದ ಶಿವಭಕ್ತಿಸಂಪನ್ನನಾದ ರಾಜ. ಆತನು ಒಮ್ಮೆ ಸಾಮಂತರಾಜರಿಂದ ಬರಬೇಕಾಗಿದ್ದ ಕಪ್ಪಕಾಣಿಕೆಗಾಗಿ ಸಕಲಪರಿವಾರದೊಡನೆ ಆತನ ಬಂಧುಗಳ ರಾಜಧಾನಿಯಾದ ಕರುವೂರಿಗೆ ಬಂದು ಸೇರಿದನು. ಅಲ್ಲಿ ಶಿವಕಾಮಿ ಎಂಬ ಶೈವಬ್ರಾಹ್ಮಣನೊಬ್ಬನಿದ್ದನು. ಒಂದು ದಿನ ಆತನು ಶಿವಪೂಜೆಗಾಗಿ ಹೂವನ್ನು ತರುತ್ತಿದ್ದನು. ಎದುರಿಗೆ ಮದಿಸಿ ಬರುತ್ತಿದ್ದ ಪಗಲ್ಜೋಳನ ಪಟ್ಟದಾನೆಯ ಕೈಗೆ ಸಿಕ್ಕಿ ಶಿವಕಾಮಿ ಶಿವಪೂಜೆಯ ಹೂವು ಚಲ್ಲಿತಲ್ಲಾ ಎಂದು ಮೊರೆಯಿಡತೊಡಗಿದನು. ಒಡನೆ ಬಳಿಗೆ ಬಂದ ಇರಿಭಕ್ತನೆಂಬ ಮಹಾ ಶೂರನಾದ ಶಿವಭಕ್ತನು ತನ್ನ ಕೈಯ ಕೊಡಲಿಯಿಂದ ಆನೆಯ ಸೊಂಡಿಲನ್ನು ತುಂಡು ಮಾಡಿದನು. ರಾಜನಾದ ಪಗಲ್ಜೋಳನಿಗೆ ಸುದ್ದಿ ಮುಟ್ಟಿ—ಅಯ್ಯೋ ನನ್ನ ಆನೆ ಭಕ್ತರಿಗೆ ನೋವು ಮಾಡಿರಬೇಕು ; ಅದರಿಂದಲೆ ಅದನ್ನು ಅವರು ಇರಿದರೆಂದುಕೊಂಡು ಕೈಮುಗಿದು ತಲೆಬಾಗಿ ಆ ಶಿವಭಕ್ತರ ಕೈಗೆ ಕತ್ತಿಯನ್ನು ಕೊಟ್ಟು ರಾಜನು ತನ್ನನ್ನೂ ಕೊಲ್ಲಿರೆಂದು ಬೇಡಿದನು. ಆಗ ಇಂಥ ಮಹಾಭಕ್ತನ ಆನೆಯನ್ನು ತಾನಿರಿಯಬಹುದೇ ಎಂದು ವ್ಯಥೆಯುಂಟಾಗಿ ತನ್ನನ್ನು ತಾನು ತರಿದುಕೊಳ್ಳಲು ಇರಿಭಕ್ತನು ಕೊಡಲಿಯನ್ನು ಎತ್ತಿಕೊಂಡನು. ಒಡನೆ ಶಿವನು ಮೈದೋರಿ ಇರಿಭಕ್ತನಿಗೆ ಗಣಪದವಿಯನ್ನಿತ್ತನು.

ಆ ಬಳಿಕ ಪಗಲ್ಜೋಳನು ಒಮ್ಮೆ ತನಗೆ ಕಪ್ಪಕಾಣಿಕೆಯನ್ನು ಸಲ್ಲಿಸದೆ ಇದ್ದ ಅಧಿಕನೆಂಬ ಮಲೆಯ ಅರಸಿನ ಮೇಲೆ ದಂಡು ಕಳುಹಿಸಿ ಬಂಡಿಯಲ್ಲಿ ಶತ್ರುಗಳ ಹೆಣಗಳನ್ನು ತರಿಸಿದನು. ಆತನು ಆ ಶವಗಳ ರಾಶಿಯಲ್ಲಿ ಒಬ್ಬ ಶಿವಭಕ್ತನ ತಲೆಯನ್ನು ಕಂಡು ತಲ್ಲಣಿಸಿದನು. ಆ ಶಿವಾಪರಾಧಕ್ಕಾಗಿ ಒಡನೆ ತನ್ನ ತಲೆಯನ್ನೇ ಕತ್ತರಿಸಿಟ್ಟು ಶಿವನನ್ನೊಲಿಸಿಕೊಂಡ ಭಕ್ತ ಪಗಲ್ಜೋಳ.

೯-೧೫ ಚೀಲಾಳನ ಅಮ್ಮ—ಚಂಗಳೆ : ಕಾಂಚಿಯ ಸಿರಿಯಾಳಸೆಟ್ಟಿಯ ಸತಿ. ಜಂಗಮವೇಷವನ್ನು ತಾಳಿ ಬಂದ ಶಿವನ ಶಿಶುಮಾಂಸಭೋಜನವ್ರತಪಾಲನೆಗಾಗಿ

ತಮ್ಮ ಮಗನನ್ನು ಚಂಗಳೆ ಸಿರಿಯಾಳರಿಬ್ಬರೂ ತಾವೇ ಕತ್ತರಿಸಿ ಅಡುಗೆಮಾಡಿ ಬಡಿಸಿದರು. ತಾಯಿತಂದೆಯರ ಮನಸ್ಸಿನಲ್ಲಿ ಮಗನ ಮನಸ್ಸೂ ಒಂದಾಗಿದ್ದುದರಿಂದ ಆ ಮೂವರ ನಿಷ್ಠೆಗೆ ಮೆಚ್ಚಿ ಶಿವನು ಚೀಲಾಳನನ್ನು ಬದುಕಿಸಿ ಸಿರಿಯಾಳನಿಗೆ ಗಣಪದವಿಯನ್ನಿತ್ತನು. ಚೀಲಾಳನಿಲ್ಲದೆ ಊಟಮಾಡೆನು ಆತನನ್ನು ಕರೆಯೆಂದು ಹೇಳಿದ ಜಂಗಮನ ನುಡಿಯಲ್ಲಿ ದೃಢನಂಬಿಕೆಯಿಟ್ಟು ಮಗನನ್ನು ಕೂಗಿ ಕರೆದು, ಓಡಿಬಂದ ಮಗನನ್ನು ನೋಡಿ ಆನಂದಪಟ್ಟ ತಾಯಿ ಚಂಗಳೆ. ನಾಳೆಯೂ ಜಂಗಮನಿಗೆ ಮಗನಿಂದ ತೃಪ್ತಿಯಾಗುವುದೆಂಬ ಸಂತೋಷ ಆಕೆಯದು.

೯-೧೫ **ಅಣ್ಣಲದೇವಿ**—ಸೋಮಯ್ಯನ ಸತಿ. ಶಿವಶರಣೆಯಾದ ಈಕೆಗೆ ಮಲ್ಲಿನಾಥನೆಂಬ ಒಬ್ಬನೇ ಒಬ್ಬ ಮಗನಿದ್ದನು. ಒಮ್ಮೆ ಕದಿರೆ ರೇಮಯ್ಯನೆಂಬ ಶಿವಶರಣನು ತನ್ನ ಗುರು ರೇವಣಾರಾಧ್ಯರನ್ನು ನೋಡಿಕೊಂಡು ಬರಲು ಹೊರಟು ದಾರಿಯಲ್ಲಿ ಅಣ್ಣಲಾದೇವಿಯ ಮನೆಯಲ್ಲಿ ಲಿಂಗಾರ್ಚನೆಗೆ ಇಳಿದುಕೊಂಡನು. ಬಹು ಭಕ್ತಿಗೌರವಗಳಿಂದ ಸತ್ಕರಿಸಿ ಅಣ್ಣಲಾದೇವಿ ಆ ಶಿವಶರಣನನ್ನು ಉಪಚರಿಸಿ ಕಳುಹಿಸಿಕೊಟ್ಟು ಮಗನೊಡನೆ ಅಡವಿಗೆ ಬೆರಣಿಯನ್ನು ಆಯ್ದು ತರಲು ಹೋದಳು. ಆಕಸ್ಮಿಕವಾಗಿ ಹಾವು ಕಚ್ಚಿದ್ದರಿಂದ ಮಡಿದ ಮಗನನ್ನು ನೋಡಿ ಸ್ವಲ್ಪವೂ ದುಃಖಿಸದೆ ಗೋಳಿಡದೆ ಸತ್ತ ಮಗನ ಶವವನ್ನು ಮನೆಗೆ ಹೊತ್ತು ತಂದು ಸಮಾಧಿಯಲ್ಲಿರಿಸಿದಳು. ಗುರುವನ್ನು ನೋಡಿಕೊಂಡು ಏಳನೆಯ ದಿನಕ್ಕೆ ಹಿಂದಿರುಗಿದ ರೇಮಯ್ಯನವರಿಗೆ ಹಿಂದಿನಂತೆ ಸತಿಪತಿಯರು ಸತ್ಕರಿಸಿದರು. ರೇಮಯ್ಯನವರು ಅಣ್ಣಲಾದೇವಿಯ ಮಗನು ಕಾಣಿಸದಿದ್ದುದಕ್ಕೆ ಕಾರಣವೇನೆಂದು ಕೇಳಲು ಆತನು ಶಿವೈಕ್ಯನಾದನೆಂದು ತಿಳಿಸಿದ ಆ ತಂದೆತಾಯಿಗಳಿಂದ ಸಮಾಧಿಯನ್ನು ತೆಗೆಯಿಸಿ ವಿಕಾಸದೃಷ್ಟಿಯಿಂದ ಬಾಲಕನ ಮುಖವನ್ನು ನೋಡಿ, ಬಾರೆನ್ನಲು ಬಾಲಕನು ಮೇಲೆದ್ದು ಬಂದನು.

ಚಿಣ್ಣನುರಗನು ಕಡಿಯೆ ಕಣ್ಣೀರತಡೆದೆ ಮು
ಕ್ಕಣ್ಣ ನಿರ್ಮಿತದಿ ಮಣ್ಣಿನೊಳು ಮಡಗಿದ
ಅಣ್ಣಲಾದೇವಿ—ಶರಣಾಗು ॥ ಪು.ದೇ.ತ್ರಿ.

೧೦-೧೩ **ನಿಜಲಿಂಗಚಿಕ್ಕಯ್ಯ**— ಬಸವೇಶ್ವರರ ಸಮಕಾಲಿಕನಾದ ಒಬ್ಬ ಶಿವಶರಣ. ಉತ್ತರದೇಶದ ಆತನು ಕಲ್ಯಾಣಕ್ಕೆ ಮೊದಲು ಬಂದದ್ದು ಬಸವಣ್ಣನವರನ್ನು ಕೊಲ್ಲುವ ಉದ್ದೇಶದಿಂದ. ಬಸವಣ್ಣನವರ ದಾಸೋಹದ ಅರಮನೆಯಲ್ಲಿ ಜಂಗಮರೆಲ್ಲರೂ ಲಿಂಗಪೂಜೆ, ಪಾದೋದಕ ಪ್ರಸಾದ ಸ್ವೀಕಾರದಲ್ಲಿ ನಿರತರಾಗಿದ್ದಾಗ

ಕಪಟ ಜಂಗಮವೇಷದಿಂದ ಒಳಹೊಕ್ಕ ಧೀರ ಚಿಕ್ಕಯ್ಯನು ಕಠಾರಿಯನ್ನು ಕಾವಿಯ ಬಟ್ಟೆಯಲ್ಲಿ ಅಡಗಿಸಿಟ್ಟುಕೊಂಡು ಸುಮ್ಮನೆ ಕುಳಿತಿದ್ದನು. ಪೂಜೆ ಸಲ್ಲಿಸದ ಆತನನ್ನು ಬಸವಣ್ಣನವರು ನೋಡಿ ಏಕೆ ಪೂಜಿಸದೆ ಕುಳಿತಿರುವೆ, ತಪ್ಪೇನಾಯಿತು ಎಂದು ಒತ್ತಾಯಪಡಿಸಿ ಕೇಳಲು ಕೊರಳಲ್ಲಿ ಕಟ್ಟಿದ್ದ ಬದನೆಕಾಯಿ ಲಿಂಗವನ್ನು ಕೈಗೆ ತೆಗೆದು ಕೊಂಡ ಚಿಕ್ಕಯ್ಯನಿಗೆ ಒಂದು ಆಶ್ಚರ್ಯತೋರಿತು ನೋಟಪರುಷ ನುಡಿಪರುಷವಾದ ಬಸವಣ್ಣನವರ ದೃಷ್ಟಿಬಿದ್ದೊಡನೆ ಆ ತನ್ನ ಕೃತಕಲಿಂಗ ವರಲಿಂಗವಾಯಿತು. ಮನದ ಕ್ರೋಧ ಅಡಗಿತು. ಕೂಡಲೆ ಕ್ಷಮೆ ಬೇಡಿದನು. ಬಸವಣ್ಣನವರು ಕೃಪಾದೃಷ್ಟಿ ಯಿಂದ “ ನಿಜಲಿಂಗಚಿಕ್ಕಯ್ಯ ” ಬಾರೆಂದು ಕರೆದು ಸತ್ಯಕಾಯಕದಿಂದ ಅರ್ಥವಹು ದೆಂದು ಬೋಧಿಸಿ ನಿಜಲಿಂಗನಿಷ್ಠಾಪರನಾಗುವಂತೆ ಮಾಡಿದರು. ಆ ಬಳಿಕ ಓಲೆ ಮಾರಿಕೊಂಡು ನಿಜಲಿಂಗಚಿಕ್ಕಯ್ಯನು ಶಿವಾನುಭಾವಿಯಾದನು. ಆತನ ವಚನಗಳಲ್ಲಿ ಶಿವಾನುಭವತತ್ತ್ವಗಳ ಸುಂದರವಾದ ನಿರೂಪಣೆಯಿದೆ.

ಒಮ್ಮೆ ಕಲ್ಯಾಣದ ತಳವಾರನೊಬ್ಬನ ಸತಿಯ ದೂರನ್ನು ಕೇಳಿ ಬಿಜ್ಜಳನು ಚಿಕ್ಕಯ್ಯನನ್ನು ಕೊಲ್ಲುವಂತೆ ಅಪ್ಪಣೆಮಾಡಿದನು. ಲಿಂಗಧ್ಯಾನದಲ್ಲಿ ಕುಳಿತಿದ್ದ ಚಿಕ್ಕಯ್ಯನನ್ನು ಹಠಾತ್ತನೆ ಚಾರರು ವಧಿಸಿದರು. ಶಿರಸ್ಸು ಕತ್ತರಿಸಿ ಬಿದ್ದರೂ ಪಂಚಾಕ್ಷರಿಯನ್ನು ಜಪಿಸುತ್ತಿತ್ತು. ಬಿಜ್ಜಳನು ಅದನ್ನು ಕಂಡು ಆತನನ್ನುಳಿಸುವಂತೆ ಬಸವಣ್ಣನವರನ್ನು ಕೇಳಿಕೊಳ್ಳಲು ಬಸವಣ್ಣನವರು ಶಿವನನ್ನೂ ಪುರಾತನ ಶಿವಶರಣ ರನ್ನೂ ನೆನೆದು ಚಿಕ್ಕಯ್ಯನನ್ನು ಬದುಕಿಸಿದರು. “ ಚಿಕ್ಕಯ್ಯ ನೆಮ್ಮಯ್ಯ ಕಾಣಿರಯ್ಯ, ಚಿಕ್ಕಯ್ಯ ಚನ್ನಯ್ಯರೆತ್ತಿ ಮುದ್ದಾಡಿದರೆನ್ನ ಕೂಡಲ ಸಂಗಮದೇವ” ಎಂದು ಕೊಂಡಾಡಿರುವ ಬಸವಣ್ಣನವರಿಗೆ ಚಿಕ್ಕಯ್ಯನಲ್ಲಿ ಎಷ್ಟು ಪೂಜ್ಯಭಾವ !

೧೦-೧೩ **ಅಪ್ಪಣ್ಣ**—ಬಸವಣ್ಣನವರನ್ನು ಏಕನಿಷ್ಠೆಯಿಂದ ಎಡೆಬಿಡದೆ ಸೇವಿಸಿದ ಹಡಪದಪ್ಪಣ್ಣನೇ ಈತನಿರಬೇಕು. ಈತನು ಮಹಾ ಜ್ಞಾನಿ ; ವಚನಕಾರ. ಒಮ್ಮೆ ಬಸವಣ್ಣನವರ ಸನ್ನಿಧಿಯಿಂದ ಬಿಜ್ಜಳನ ಅರಮನೆಯ ಅತಿಥಿಗಳಿಗೆ ಸೇವೆ ಸಲ್ಲಿಸಲು ಅಪ್ಪಣ್ಣ ಹೋಗಬೇಕಾಯಿತು. ಬಸವಣ್ಣನವರ ಸನ್ನಿಧಿಯನ್ನು ಎಂದೂ ತಪ್ಪ ಬಾರದೆಂಬ ನೇಮ ಈತನಿಗೆ. ಆದುದರಿಂದ ಎಲೆಅಡಿಕೆಯನ್ನು ಸಿದ್ಧಗೊಳಿಸಿ ಅತಿಥಿಗಳಿಗೆ ನೀಡುವ ಕಾರ್ಯಕ್ಕೋಸ್ಕರ, ತಲೆಯನ್ನು ಕತ್ತರಿಸಿ ಬಸವಣ್ಣನವರ ಬಳಿಯಿಟ್ಟು, ಅಟ್ಟೆಯನ್ನು ಕಳುಹಿಸಿ ಮತ್ತೆ ಎರಡನ್ನೂ ಕೂಡಿಸಿಕೊಂಡು ತಮ್ಮ ಆಜ್ಞೆಯನ್ನು

ನಡಸಿರುವೆನೆಂದು ಹೇಳಿ ಕೈಮುಗಿದು ಬಸವಣ್ಣನವರ ಮುಂದೆ ನಿಂತ ಪವಾಡಪುರುಷ, ಅಪ್ಪಣ್ಣ.

೧೦-೧೩ **ರಾಮತಂದೆ**—ಗುಪ್ತವಾಗಿ ಶಿವಯೋಗದ ಏಕಾಂತವನ್ನು ಮಾಡಿಕೊಂಡಿರುತ್ತಿದ್ದ ಕಾರಣ ಏಕಾಂತರಾಮಯ್ಯನೆಂದು ಪ್ರಸಿದ್ಧನಾದ ಶಿವಶರಣ. ಒಮ್ಮೆ ಆತನು ಅಬ್ಬಲೂರಿನ ಶಿವಾಲಯದಲ್ಲಿ ಕುಳಿತಿದ್ದಾಗ ಕೆರವನ್ನು ಹಾಕಿಕೊಂಡು ದೇವಾಲಯದೊಳಕ್ಕೆ ನುಗ್ಗಿದ ಜೈನನನ್ನು ಲಿಂಗಕ್ಕೆರಗಿ ಕ್ಷಮೆಬೇಡೆಂದು ಹೇಳಲು ಆ ಜೈನನು ಶಿವನೇ ಪರದೈವವಾದಲ್ಲಿ ನಿನ್ನ ಶಿರಸ್ಸನ್ನು ಕತ್ತರಿಸಿಕೊಂಡು ಏಳನೆಯ ದಿನಕ್ಕೆ ಪಡೆ, ಆಗ ನೀನು ಹೇಳಿದಂತೆ ನಡೆದುಕೊಳ್ಳುವೆನೆಂದು ಪ್ರತ್ಯುತ್ತರವಿತ್ತನು. ಆಗ ಏಕಾಂತ ರಾಮಯ್ಯನು ಕೋಪಗೊಳ್ಳದೆ ಆತನಿಗೆ ವೀರಭಕ್ತಿಯನ್ನು ಮೆರೆದು ಶಿವಪಾರಮ್ಯವನ್ನು ಸಾರಿದ ಪುರಾತನಭಕ್ತರ ಕಥೆಗಳನ್ನು ಹೇಳಿ ತಾನೂ ಅದರಂತೆ ತನ್ನ ತಲೆಯನ್ನು ಕತ್ತರಿಸಿಕೊಂಡನು. ಎಡಗೈಯಲ್ಲಿ ಶಿವನಾಮವನ್ನುಚ್ಚರಿಸುವ ತಲೆ, ಬಲಗೈಯಲ್ಲಿ ಕತ್ತಿ ಹಿಡಿದು ನಿಂತು ಏಳನೆಯ ದಿನ ರುಂಡವನ್ನು ಮುಂಡದ ಮೇಲಿಡಲು ಜೀವ ಪಡೆದ ಮಹಾ ಶಿವಯೋಗಿಯಾದ ರಾಮತಂದೆಯಿಂದ ವೀರಶೈವ ಧರ್ಮದ ಪ್ರಸಾರಕಾರ್ಯ ಬಸವಣ್ಣನವರ ಕಾಲದಲ್ಲಿ ಬಹುಮಟ್ಟಿಗೆ ಸಾಗಿತ್ತು.

೧೦-೧೩ **ಜಂಬೂರ ಮಹಾಕಾಳದೇವ**—ಜಂಬೂರಿನಲ್ಲಿದ್ದ ಒಬ್ಬ ಶಿವಶರಣ. ಭಕ್ತಿಭಾವದಿಂದ ನಿತ್ಯವೂ ತನ್ನ ಶಿರವನ್ನರಿದು ಲಿಂಗಕ್ಕೆ ಅರ್ಪಿಸಿ ಮತ್ತೆ ಕೊರಲಿಗೆ ಸೇರಿಸಿ ಪ್ರಾಣವನ್ನು ಪಡೆಯುತ್ತಿದ್ದಾತ. ಆ ವೀರಶಿವಭಕ್ತನು ಶುನಕನಿಂದ ವೇದವನ್ನು ಓದಿಸಿ ಹೆಸರಾಂತವನು.

೧೦-೧೩ **ಗೋವಿಂದಭಟ್ಟಾರಕ**— ಶಿವನಿಗೆ ಅರ್ಪಿಸಿದ ಶಿರಸ್ಸನ್ನು ಧರಿಸಿಕೊಂಡು ಆ ನಿರ್ಮಾಲ್ಯವಾದ ಶಿರಸ್ಸನ್ನು ಮತ್ತೆ ಶಿವನಿಗರ್ಪಿಸುವುದು ತಪ್ಪು ಎಂದು ಕತ್ತರಿಸಿಕೊಂಡ ತನ್ನ ತಲೆಯನ್ನು ಶಿವನಿಗರ್ಪಿಸಿ, ಬೇರೊಂದು ತಲೆಯನ್ನು ಮೂರು ದಿನಗಳ ಬಳಿಕ ಪಡೆಯುತ್ತಿದ್ದ ಸಾಹಸಾಂಕನೂ ಆಚಾರಶೀಲನೂ ಆದ ಶಿವಭಕ್ತ.

೧೦-೧೩ **ಬಂಕಣ್ಣ**— ಭಕ್ತನು ತನ್ನ ಶಿರವನ್ನರಿದು ಶಿವನಿಗರ್ಪಿಸಿದ ಮೇಲೆ ಬೇರೊಂದು ತಲೆಯನ್ನು ಮೂರು ದಿನಗಳತನಕ ಶಿವನು ಕೊಡದಿರಬೇಕಾದರೆ ಅತನೇನು ದೀರ್ಘನಿದ್ರೆಯಲ್ಲಿದ್ದನೇ ? ಎಂದು ಹಾಸ್ಯಮಾಡಿ, ಖಡ್ಗದಿಂದ ತಲೆಯನ್ನು ಕತ್ತರಿಸಿಟ್ಟು ತನ್ನ ಭಕ್ತಿನಿಷ್ಠೆಯಿಂದ ಮತ್ತೆ ತಲೆ ಮೊಳೆಯುತ್ತಿರಲು ಅವುಗಳನ್ನು ಕಡಿದಿಡುತ್ತಲಿದ್ದ ಛಲದಂಕನಾದ ಶಿವಭಕ್ತನೇ ಈತ. ಎಲ್ಲಿ ನೋಡಿದರೂ

ನಲಿವತಲೆ ನಗುವತಲೆ ಕ।
ಣ್ಣಲರ್ಚಿ ನಿರೀಕ್ಷಿಸುವ ತಲೆ ಕಡಂಗುವ ತಲೆಯಾ।
ರ್ದುಲಿವ ತಲೆ ಮಲೆವ ತಲೆ ಕೆಲ।
ಕೊಲೆದುರ್ಬುವ ತಲೆ ಪೊದಳ್ದು ಪಾಡುವ ತಲೆಗಳ್* ॥

ಆಗ ಶಿವನು ಮೈದೋರಿ ಸಾಕು, ನಿಲ್ಲಿಸು. ನಿನಗೆ ನಾನು ಸೋತೆ ಎಂದು ಬಂಕಯ್ಯನ ಛಲವನ್ನು ಕೊಂಡಾಡಿ, ಹಿಡಿದ ಖಡ್ಗವನ್ನು ತಡೆದನು. ಹರನೊಡನೆ ಒಲಿದು ಗೆಲವು ಪಡೆದ ಬಂಕಿದೇವನ ಕೀರ್ತಿವಾರ್ತೆ ಶರಣರ ಮನೆಮಾತಾಯಿತು.



*ಷಡಕ್ಷರದೇವನ ವೃಷಭೇಂದ್ರವಿಜಯ ಆಶ್ವಾಸ ೩೪ ಪದ್ಯ ೨೧.

ಮಹಾಕವಿ
ಹಂಪೆಯ ಹರಿಹರದೇವವಿರಚಿತ

# ಮನುಜೋಳರಗಳೆ

ಕಂದ|

ಸುಜನಸ್ತುತ ಮನುಚೋಳಂ
ಗಜಬಜಿಸವೆ ಧರ್ಮನೀತಿಯಂ ನೆನೆದಾಗಳ್
ನಿಜಸುತನ ಮೇಲೆ ರಥವಂ
ವೃಜಿನಹರಂ ಪರಿಸಿ ಮೇಱಿದ ಹಂಪೆಯರಾಯಂ|| ೧

ಲಲಿತರಗಳೆ

ಶ್ರೀವಸುಮತಿಯ ತಿಲಕವಾಗಿ ರಂಜಿಸುತಿರ್ಪ
ಭಾವಕರ ಕಣ್ಗೆ ತಾನಾಶ್ಚರ್ಯವಾಗಿರ್ಪ
ಕಮಲಾಲಯಾಖ್ಯಪುರ*ಮೆಸೆದಿರ್ಪುದದು ನೋಡ
ವಿಮಳ ಚೋಳೋರ್ವರೆಯ ಭಾಗ್ಯದಂದದಿ ನೋಡ
ಶೈವಾಗಮಜ್ಞರಿಂ ವೈರಾಗ್ಯಯುಕ್ತರಿಂ-
ದಾವಾಗಳುಂ ಮೆಱೆವುದಭವ ಸದ್ಭಕ್ತರಿಂ-
ದೇನೆಂಬೆನದಱ ಪೆಂಪಂ ಶೂಲಿಯೇ ಬಲ್ಲ
ಮಾನವರ ಕಣ್ಮನಂಗಳಿಗೆ ಗೋಚರವಲ್ಲ
ಶೇಷನಾಱಂ ಬಣ್ಣಿಸಲ್ಕದಱ ಮಹಿಮೆಯುಂ
ದೂಷಣಂಗಳ್ ದೂರಮಾದವಱ ಪೆರ್ಮೆಯುಂ ೧೦

---

*ಪೆ ಪು. ದ. ಮನುನೀತಿಕಣ್ಣ ಪುರಾಣ ಪ್ರಕರಣದಲ್ಲಿ ಹೇಳಿರುವ 'ತಿರುನಗರ' ಎಂಬುದರೊಡನೆ ಹೋಲಿಸಿ.

ಅಂತಪ್ಪ ಪುರವನಾಳ್ವಂ ಧರ್ಮಪಾಲಕಂ
ಸಂತತಂಗೂಡಿ ಮನುವೆಂಬ ಭೂಪಾಲಕಂ
ವೇದೋಕ್ತಮಾರ್ಗದಿಂ ಶಿವನನರ್ಚಿಸುತಿರ್ಪ
ಮೋದದಿಂ ಭಕ್ತರ್ಗೆ ಬೆಸಕೈವುತಿರುತಿರ್ಪ
ಆತನುರು ತೇಜಕ್ಕೆ ಸೆಡೆದು ಪರನೃಪರಾಗ
ನೂತನ ಸುವಸ್ತುವಂ ನೆಱೆ ಪಿಡಿದು ತಂದಾಗ
ಬಾಗಿಲೊಳು ನಿಂದಿರ್ಪರವಸರವ ನೋಡುತ್ತೆ
ಬೇಗದಿಂ ಕಾಣದೆ ಮನಂನೊಂದು ಬೇವುತ್ತೆ
ಇರುತಿರ್ಪ ಕರ್ಣಾಟಲಾಳಾಂಧ್ರ ಭೂಪರಂ
ಕರುಣದಿಂದೀಕ್ಷಿಸುತವಭವ ಸತ್ಕಿಂಕರಂ ೨೦
ಮೆಱೆದಿರ್ದನತ್ಯಧಿಕ ಕೀರ್ತಿಸಂಯುತನಾಗಿ
ಕಱೆಕಂಠಸದ್ಭಕ್ತ ಪರಿಚರಿಯತುರನಾಗಿ

ಇರಲಾನೃಪಂಗೆ ಶ್ರೀರತ್ನಮಾಲಾಖ್ಯದಿಂ
ಪಿರಿದೊಪ್ಪುತಿರ್ಪಬಲೆ ವಧುವಾಗೆ ರಾಗದಿಂ
ಆಕೆಯುದರದೊಳು ಪುಟ್ಟಿದನೊರ್ವ ನಂದನಂ
ಬೇಕಾದ ಬಯಕೆಗಳನೀವ ಹರಿಚಂದನಂ
ಸೋಮಧರ ಕೃಪೆಯಿಂದೆ ಜನಿಸಿರ್ದ ಬಾಲಂಗೆ
ನಾಮವಾಗಲ್ಕೆ ಚಂಚಲ ಎಂಬುದಾತಂಗೆ
ಬೆಳವುತಿರ್ದಂ ದಿನದಿನಕ್ಕೆ ತಾಂ ಪೊಸತಾಗಿ
ನಳನಳಿಸುವೆಳೆಯ ಸಸಿಯಂದದಿಂ ಸೈತಾಗಿ ೩೦
ಕರಿತುರಗ ವರ ರಥಾರೋಹ ವಿದ್ಯಂಗಳಂ
ಚರಿತದಿಂ ಕಲ್ತು ತಾನಖಿಳ ಸತ್ಕಲೆಗಳಂ
ಯೌವನೋಚಿತವಾದ ಕಾಲವದು ಬರುತಿರಲು
ಯುವರಾಜ ಪಟ್ಟಕ್ಕೆ ಅರಸು ಚಿಂತಿಸುತಿರಲು
ನಿತ್ಯಲಿಂಗಾರ್ಚನಂ ಮಾಡಿ ಭಕ್ತರೊಳಿರ್ಪ
ಸತ್ಯನಿಧಿ ದಾನಧರ್ಮಂ ಮಾಡಿ ಸುಖಿಸಿರ್ಪ
ಓರೆಗೆಯ ರಾಜಪುತ್ರರ ಗಡಣದೊಳ್ಕೂಡಿ

ಚಾರುತರ ಭೋಗಸುಖಶರಧಿಯೊಳ್ತೇಂಕಾಡಿ
ಇರುತಿರಲ್ಕೊಂದು ದಿವಸಂ ಪರಮಹರ್ಷದಿಂ
ವರ ರಾಜಭವನದಿಂ ಪೊಱಮಟ್ಟು ಬೇಗದಿಂ ೪೦
ರಥದ ಮೇಲೇಱಿ ಪುರವೀಥಿಯೋಳ್ ಬರುತಮಿರೆ
ರಥದುಭಯಪಕ್ಕದೊಳ್ ವಂದಿಗಳು ಪೊಗಳುತಿರೆ
ಗದ್ಯಪದ್ಯಂಗಳಂ ಮಾಗದರ್ಪರಸುತಿರೆ
ಹೃದ್ಯಬಿರುದಾವಳಿಗಳುಸುರದೋದುತ್ತಮಿರೆ
ಬರುತಿರ್ಪ ಸೌಂದರ್ಯಕಂದರ್ಪನಂ ನೋಡಿ
ಪುರಕಾಂತೆಯರು ತಮ್ಮ ಮಱಿದೀಕ್ಷಿಸಲ್ಕಾಡಿ
ಭೋರೆಂದು ಮೊರೆವ ನಾನಾ ವಾದ್ಯರವಮುಣ್ಮೆ
ವಾರಾಂಗನಾಲಾಸ್ಯಮಲ್ಲಲ್ಲಿಗದು ಪೊಣ್ಮೆ
ಗುಣಿಯಾದ ತತ್ಕುಮಾರಕನನತಿ ಸ್ನೇಹದಿಂ
ಮಣಿವೀಥಿ ಧರಿಸಿತಾ ಪ್ರತಿಬಿಂಬ ಲಕ್ಷ್ಯದಿಂ ೫೦
ಬರುತಿರ್ದನಮಮ ಕುಲವರ್ಧನನಚಂಚಲಂ
ಬರುತಿರ್ದನರರೆ ಮನುವಿನ ಸುತನು ಚಂಚಲಂ
ಇಂತು ಬರುತಿರೆ ಮನುವಿನ ದೃಢಭಾವಮನಱಿಯ
ಲಂತಂತೆ ಧರ್ಮನೇ ಗೋರೂಪಮಂ ತಳೆಯ-
ಲದು ತಾನೆ ಕಱುವಿನೊಡಗೂಡಿ ಸುಳಿದಾಡುತಿರೆ
ಮುದದಿಂದೆ ಕಱು ಪಾಱಿ ಪಾಱಿ ನಲಿದಾಡುತಿರೆ
ಕಾಣಬಾರದ ತೆಱದೊಳಾ ವೀಥಿಯಂ ಪೊಗಲು
ಮಾಣಿಸಲ್ ಬಲ್ಲರಾರ್ವಿಧಿಲಿಖಿತಮಂತಿರಲು
ಶಿವಶಿವ ಮಹಾದೇವ ನುಡಿಯಲೆಡೆಯಿಲ್ಲೆನಿಸಿ
ತವಕದಿಂ ಕಱು ರಥದ ಮಾರ್ಗದೊಳು ಸಂಚರಿಸಿ ೬೦
ರಥದ ಗಾಲಿಯ ಕೆಳಗೆ ಬಿಳ್ದು ಜೀವಂಗಳೆಯೆ
ಮಥಿಸಿದಂದದಿ ದೇಹಮದು ಚೂರ್ಣಮಾಗಳಿಯೆ
ಕಱುವಳಿದ ತಾಣಕ್ಕೆ ಧೇನು ಮೆಲ್ಲನೆ ಬಂದು
ತಱಿಸಂದು ಮೂಸಿನೋಡುತ ತಿರುಗುತಂ ನಿಂದು

ಒಱಲುವುದು ಬಾಯ್ವಿಡುತ ಭೂತಳಕ್ಕೊಱಗುವುದು
ಬಱಿದೆ ಘಳಘಳನೆ ಪೋಪುದು ಮತ್ತೆ ತಿರುಗುವುದು
ಕಿಗ್ಗಣ್ಣಿನಿಂ ಕಱುವ ನೋಡಿ ಮೊಗವೆತ್ತುತಂ
ಅಗ್ಗದ ಜನಂಗಳಿಗೆ ದೈನ್ಯಮಂ ತೋಱುತಂ
ಮುಚ್ಚಿದಕ್ಷಿಗಳೆಳಲ್ವ ಕಿವಿಗಳುಱೆ ಕುಸಿದ ತಲೆ
ಅಚ್ಚುಗಂಗೊಂಡ ಭಾವಂ ಬೀಱಲಿಂತು ಸಲೆ ೭೦
ತಱಗೆಲೆಯು ಗಿಱಿಕೆನಲು ಕಱುವ ನೋಡುತ್ತಿಹುದು
ಕಱೆಗೊರಳ ಭಕ್ತರಂ ಕಂಡು ನೆಱೆ ಬಾಡುವುದು
ಶೋಕಮೇ ಗೋರೂಪಮಾದುದೋ ಪೇಳೆನಲು
ಮೂಕ ದೈನ್ಯಕ್ಕೆ ಕೋಡುಗಳು ಪುಟ್ಟಿದುವೆನಲು
ಅನುತಾಪ ಗುಣವದಂಬಾ ಎನಲ್ಕಲಿತುದೋ
ಘನತರಂ ಶೋಕವೀರೆಡು ಪದವಾದುದೋ
ಇಂತೆಂಬ ಜನದ ಬಗೆಗೆಡೆಯಾಗುತಿರೆ ಧೇನು
ಮುಂತೆ ಶೋಕಾಂಧಕಾರದೊಳು ಮುಳುಗಿರೆ ಧೇನು

ಅಂತದಂ ರಾಜಪುತ್ರಂ ಕಂಡು ಬೆಱಗಾಗಿ
ಸಂತಸಂ ಪೆಱಪಿಂಗಿ ಹಲಿ ಹೊಡೆದ ತೆಱನಾಗಿ ೮೦
ಮಿಕ್ಕು ಮೀಱುವ ದುಃಖ ತಲೆಗೇಱೆ ಮೈಮಱೆದು
ಬಿಕ್ಕುತಂ ಸೆರೆಬಿಗಿಯೆ ನುಡಿದನಾಗಳ್ತೊಱೆದು
ಕಣ್ಣೆರಡ ಮುಚ್ಚುತುಂ ಮೂರ್ಛೆಯೊಳ್ನೆಱೆ ಸಂದು
ಸಣ್ಣಸುಣ್ಣದಿ ನೀರ ಪೊಯ್ದಂತೆ ಬೆದಱೆಂದು
ಆವಗೆಯ ಕಿಚ್ಚಿನಂತೊಳಗೆ ಶೋಕಂ ಸುತ್ತಿ
ಭಾವಮಂ ಬಱಿಕ್ಕೈವುತಂ ಚಿತ್ತಮಂ ಮುತ್ತಿ
ಮುಂದಿರ್ದ ಗೋವ ನೋಡುತ ತಂದೆಯಂ ನೆನೆದ–
ನಂಮ ನಾನಾಧರ್ಮಸೂಕ್ಷ್ಮಮಂ ಮಿಗೆ ನೆನೆದ–
ನಿದಕೆ ಪ್ರಾಯಶ್ಚಿತ್ತಮಿಲ್ಲಾದಡಂ ಪೋಗಿ
ಸದಮಳ ಜ್ಞಾನಿಗಳಿಗಿದನುಸುರಿ ಸ್ಥಿತಾಗಿ ೯೦
ಅವರೆಂತು ಪೇಳ್ವರಂತೆ ಗೆಯ್ವೆನಾನೆಂದು

ಶಿವಪಾದಮಂ ನೆನೆದು ತಳುವಿಲ್ಲದೈತಂದು
ಗಜಬಜಿಸುತಂ ತಂದೆಗಱುಪದೆ ಮನಂ ಮಿಗಲು
ಗಜಚರ್ಮಧರಭಕ್ತ ಸಭೆಯಲ್ಲಿಗೈತರಲು

ಇತ್ತಲಾಧೇನು ಬಿಸುಸುಯ್ವುತುಂ ಮಿಗೆ ನೊಂದು
ಸತ್ತಿದ್ದ ಕಱುವನೀಕ್ಷಿಸಿ ದುಃಖದೊಳು ಸಂದು
ಬೆಱಗಾಗಿ ಪುರಜನಮುದೆವೆಯಿಕ್ಕದೀಕ್ಷಿಸಲು
ನೆಱೆ ಮತ್ತೆ ಗತಿಯಿಲ್ಲದದ ನೋಡುತುಂ ನಿಲಲು
ಮೆಲ್ಲಮೆಲ್ಲನೆ ರಾಜಭವನದಾ ದ್ವಾರಮಂ
ನಿಲ್ಲದೈತಂದು ನಿಲುತಂ ತನ್ನ ದುಃಖಮಂ ೧೦೦
ಅರಸಂಗೆ ಸೂಚಿಸಲ್ಕಾಜ್ಞಾ ಸುಘಂಟೆಯಂ
ವರ ಧೇನು ಶೃಂಗದಿಂ ಬಾಜಿಸಿತು ಘಂಟೆಯಂ
ಬಾಜಿಸಲ್ಕಣ್ಮಿತ್ತು ನಾದ ಪುರವೀಥಿಯೊಳು
೧ಸೋಜಿಗಂ ಮಿಗೆ ಕುಮಾರನ ಮೃತ್ಯುರಾಗದೊಳು
ಕಾಲಮಹಿಷನ ಕಂಠಘಂಟಾ ನಿನಾದಮೋ
ಮೇಲಣಪವಾದದುರು ಭೇರೀ ನಿನಾದಮೋ
ನಂದಿವಾಹನನ ಹೊಕ್ಕುಳ ಹೊನ್ನಘಂಟೆಯೋ
ಮಂದಾಕಿನೀಧರಂಗಿದಿರ್ವಪ ದುಂದುಭಿಯೊ
ಎಂದೆಂಬ ಬಗೆಗೆ ನೆಲೆಯಾದ ಘಂಟಾನಾದ-
ಮಂದು ನೃಪಕರ್ಣಮಂ ತೀವಿತಂತಾನಾದ೧-
೨ವೇನೆಂಜೆನದ ಕೇಳಿ ಸಿಂಹಾಸನಮನಿಳಿದು
ತಾನೆ ಬರುತಿರೆಯಾಗ ದ್ವಾರಪಾಲಕರಱಿದು
ಕೈಮುಗಿದು ಭೂಪಂಗೆ ನಿಶ್ಚಯಮನುಸುರಿದರು
ಸೋಮಧರಪಾದಭಕ್ತಂಗೆ ನೆಱೆ ಪೇಳಿದರು

---

೧. ಪಱಿಪ್ಪಱೈ ಮುಱಿಕ್ಕೋ ವಾರ್ಕ್ಕಾನ್ ಪಾವತ್ತಿನೊಲಿಯೋ ವೇನ್ದನ್
ವಱಿತ್ತಿರು ಮೈನ್ದ ನಾವಿ ಕೊಳವರು ಮಱಿಲಿ ಯೂರ್ತಿ-
ಕ್ಕಱಿತ್ತಣೆ ಮಣಿಯಿನಾಪ್ಪೊರ್ ಪೆನ್ನತ್ತನ್ ಕಡೈಮುನ್ ಕೇಳಾ-
ತ್ತೆಱಿತ್ತೆಱಿ ಮೋಶೈ ಮನ್ನನ್ ಶೆವಿಪ್ಪುಲಮ್ಬುಕ್ಕ ಪೋದು ॥ ಪೆ.ಪು. ೨೮

ದೇವ ಬಿನ್ನಪ ಒಂದು ಗೋವಾರ್ತದಿಂ ಬಂದು
ನಾವಱಿಯೆವೀ ಘಂಟೆಯಂ ಭಾಜಿಸಿತ್ತೆಂದು[೨]
ಇಂತಿವಱ ನುಡಿಯನುಱೆ ಕೇಳುತಂ ಪೊಱಮಟ್ಟು
ಮುಂತಿರ್ದ ಧೇನುವಂ ಕಾಣುತಚ್ಚರಿವಟ್ಟು
ತೃಣನೀರ್ಗಳಂ ತಂದು ಮಡಗಿರೆ ಧೇನುವಿಗೆ
ತೃಣವಿನಿತು ಕಷ್ಟವೆಂಬುದನೊಲ್ಲದಿರೆ ತನಗೆ ೧೨೦
ಮೇಯದೇ ನೀರ್ಗುಡಿಯದಿರೆ ಕಣ್ಣ ನೀರಿಕ್ಕೆ
ಬಾಯ ಬಿಟ್ಟೊಱಲುತ್ತವಿರೆ ದುಃಖದೊಳಗುಕ್ಕಿ
ಮಂತ್ರಿಗಳ ನೋಡಿ ಗೋಶೋಕಮೆಂತೆಂತೆನಲು
ಮಂತ್ರಿಗಳೊಳೊರ್ವನಾಗಳು ಕೌತುಕಂ ಮಿಗಲು
ಕರಕಮಲಮಂ ಮುಗಿದು ದೇವ ನಿಮ್ಮಯ ಸುತಂ
ಪುರವೀಥಿಯೊಳು ರಥವನೇಱಿ ನೆಱೆ ಪರಿಸುತಂ
ಪೋಗಪೋಗಲ್ಕಲ್ಲಿ ಬಾಲವತ್ಸಂ ಬಂದು
ಮೇಗಣ್ಗೆ ಚಿಮ್ಮುತಂ ರಥದ ಗಾಲಿಗೆ ಸಂದು
ಜೀವಮಂ ಕಳೆಯಲೊಡನೀ ಧೇನು ನಡೆತಂದು
ಭಾವದಿಂದಿಂತು ಮಾಡಿತ್ತು ನೆಱೆ ತಾನೆಂದು ೧೩೦
ಇಂತು ಬಿನ್ನೈಸೆ ತದ್ವಾಕ್ಯಮಂ ಕೇಳುತಂ
ಚಿಂತಿಸಲಾ ಗೋವಿನಂತೆ ತಾ ನೋವುತಂ
ವಿಷಾವಾವರಿಸಿದಂತೆ ಮೂರ್ಛೆಯೊಳು ನೆಱೆಸಂದು
ವೃಷಭವಾಹನಭಕ್ತನುಱೆ ಚಿತ್ತದೊಳ್ಬೆಂದು
ಈ ಕರ್ಮವೆನಗೆಂತು ಬಂದುದೋ ಶಂಕರಾ

೨. ಆಙ್ಗದು ಕೇಟ್ಟ ಪೇಸ್ದ ಸರಿಯಙ್ಕೈ ಯಿಱಿನ್ದು ಪೋನ್ದು
ಪೊಱ್ಕೊಡಿ ವಾಯಿ ಸಣ್ಣಕ್ಕಾವಲ ರೆದಿರೇ ಪೋಱಿ
ಯೀಙ್ಗದೋರ್ ಪಶುವನ್ದಿಯ್ದ್ದ ಯಿಱೈವನಿನ್ ಕೊಱ ವಾಯಿಲ್
ತೂಙ್ಗಿಯ ಮಣಿಯೈ ಕ್ಕೋಟ್ಟಾಲ್ ತುಳಕ್ಕಿಯದೆನು ಶೊನ್ನಾರ್.
ಶೇಕ್ಕಿೞಾರ್—ಪೆರಿಯ ಪುರಾಣಮ್ ೨೯.

ಶೋಕದುರಿಯೊಳು ಬೇಯಲಾಜಿ³ ಅಭಯಾಕರಾ
ಲೇಸು ಲೇಸೆನ್ನ ಧರ್ಮದೊಳಖಿಳ ರಾಜ್ಯದೊಳು
ಭಾಸುರ ಪ್ರಜೆಗಳಂ ಪಾಲಿಸಿದೆ ನೀತಿಯೊಳು॥
ಈ ಘೋರ ಪಾತಕಂ ಎನಗೆಂತು ಪೋದಪುದೊ
ಮೋಘವಿಲ್ಲವ ಶೋಕವೆಂತಿದಕೆ ಪೋದಪುದೊ ೧೪೦

ಅಕಟಕಟ ಕೆಟ್ಟೆ ನಾಂ ಕೆಟ್ಟೆ ನಾನೆಂದಿಂತು
ವಿಕಳನಾಗುತೆ ಗೋವಿನಂದದಿಂ ತಾನಿಂತು
ಶೋಕಸಾಗರದೊಳಗೆ ಮುಳುಗಿ ತೇಂಕಾಡುತಿರೆ
ಲೋಕನಿಂದೆಗೆ ಸೆಡೆದು ಚಿಂತಿಸುತ ಸುಮ್ಮನಿರೆ
ಇಂತು ದುಃಖದೊಳು ಮುಳುಗಿರ್ದ ಭೂಪತಿಗಂದು
ಮುಂತೆ ಮಂತ್ರಿಗಳು ನಮಿಸುತ ಪೇಳ್ದರು ನಿಂದು
ದೇವ ನಿಮಗೀ ದುಃಖವೇಕಿದಕೆ ಬೇಡೆಂದು
ಪಾವನೋಪಾಯಮಂ ದ್ವಿಜಮುಖ್ಯರಿಂ ತಿಳಿದು
ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತಮಂ ಮಾಡಿ
ಭೂಪ ನೀವೆಂದಿಂತು ನುಡಿಯಲ್ಕೆಲ್ಲರ ನೋಡಿ ೧೫೦

ಗಹಗಹಿಸಿ ನಕ್ಕು ನುಡಿದಂ ದೈನ್ಯಮುಣ್ಮುತಿರೆ
ಬಹಳ ದುಃಖದ ಧೇನು ತನ್ನನೇ ನೋಡುತಿರೆ
ಲೇಸಾಗಿ ನುಡಿವಿರೆಲೆ ಮಂತ್ರಿಗಳಿರಾ ನೀವೆ
ಘಾಸಿಯಾದಿದಕೆ ಪ್ರಾಯಶ್ಚಿತ್ತಮೌಷಧವೆ?
ಸುತನ ಬೈತಿಟ್ಟು ನೀವೆಂದುದಂ ನಾಂ ಮಾಡೆ
ನುತ ಧರ್ಮವೆಲ್ಲ ಕೆಡುವುದು ಬೇಗದಿಂ ನೋಡೆ
ಹರಣಮುತ್ತತನ ಸದ್ಧರ್ಮದಿಂದೆ ತಿಳಿಯ-
ಲರಿದೆನಿಪ ಪುತ್ರದುರಿತಮನೀಗಳಾಂ ಕಳಿಯ-

---

೩. ಅವ್ವುರ್ರೈ ಕೇಟ್ಟ ವೇನ್ದ ಸಾವುಜು ತುಯರಮೆಯ್ದಿ
ವೆವ್ವಿಡನ್ದಲೈಕ್ಕೊಣ್ಡಾಱ್ಪೋಲ್ ವೇದನೈಯಗತ್ತು ಮಿಕ್ಕ-
ಱ್ವಿನ್ನೈ ವಿಳೈನ್ದ ವಾಱೆನಿಡರುಱುಮ್ ಇರಜ್ಙುಮ್ ಏಜ್ಙುಮ್
ಶೆವ್ವಿದೆನ್ ಶೆಜ್ಗೋಲೆನ್ನ್ ನ್ದರುಮರುಮ್ ತೆಳಿಯುಮ್ ತೇಱಾನ್॥ ಪೆ. ಪು. ಪದ್ಯ ೩೩

ಉದಿತ ಪ್ರಾಯಶ್ಚಿತ್ತಮಂ ಮಾಡುತಂತಿರಲು
ಪಡೆದನೇನೊರ್ವನೀ ಪರಿಯ ಘೋರದೊಳಿರಲು ೧೬೦
ನಿರತದಿಂದವನ ವಧಿಸುವುದೆ ಎನ್ನಯ ಮತಂ
ಅರರೆ ಎನ್ನಿಂ ಮನುವಿನೊಂದುರೀತಿಯ ಮತಂ
ತೊಡೆಯಲ್ಕೆ ಪಟ್ಟುದಿದು ಲೇಸುಲೇಸದ್ಭುತಂ
ಪೊಡವಿಯೊಳಗೆಂತು ಜೀವಿಪೆನೆದಂ ಕೇಳುತಂ
ಎಂದಿಂತು ಬಿಱುನುಡಿಗಳಂ ನುಡಿಯೆ ಭೂವರಂ
ಮುಂದಿರ್ದ ಮಂತ್ರಿಗಳು ನಡುಗುತೆಲ್ಲರ್ ಕರಂ
ಕರಯುಗ್ಮಮಂ ಮುಗಿದು ಕಾರ್ಯಮಂ ಕಾಣ್ಬವರು
ಚರಿತದಿಂ ಬಿನ್ನೈಸಿದರು ಬೇಗದಿಂದವರು
ಇಲ್ಲಿಂತು ಪೂರ್ವಕ್ರಮಂಗಳೊಳವೆಲ್ಲಿಯುಂ
ಬಲ್ಲ ಹಿರಿಯರನಖಿಳ ವೇದಂಗಳಲ್ಲಿಯುಂ ೧೭೦
ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವಿರುತಿರಲು
ಕೋಪದಿಂ ಹಿಂಸೆಯಂ ಮಾಡಬೇಹುದೆಯೆನಲು
ಅಂತದಂ ಕೇಳ್ದು ಹೃದಯಂ ಕದಡುತಿರೆ ನುಡಿದ-
ನೆಂತುಂ ಕ್ರಮಂಗಳಂ ಪೇಳದಿರಿ ನೀವೆಂದ–
ನಕ್ಕಟಾ ಅಕ್ಕಟಾ ಎಂದಿಂತು ನುಡಿವುತಿರೆ
ಅಕ್ಕಜದ ಶೋಕಾಗ್ನಿಯಿಂ ಮೊಗಂ ಬಾಡುತಿರೆ
ಅನಲನುರಿದೆದ್ದಂತೆ ಕೋಪದಿಂ ಭುಗಿಲೆಂದ
ಘನಕಾಂತಿಯಂ ಪೋಲ್ತು ಕಾಣಲಾದಂತಾದ
ಏನೆಂಬೆನರಸು ನುಡಿದಂ ಧರ್ಮವಂತಿರಲಿ
ನಾನಿಲ್ಲಿ ಕೈಕೊಳ್ಳೆನಿಂತು ಮತಗಳುವಿರಲಿ ೧೮೦
೧ಆವ ಲೋಕದೊಳಾವ ಯುಗದೊಳಚ್ಚರಿವಡೆಯೆ
ಗೋವು ತಿರಿಗಿತ್ತು ವರ್ತಮಾನದಿಂ ಕಱು ಮಡಿಯೆ

---

೧. ಎವ್ವುಲಗಿಲೆಪ್ಪೊೞಿ ಮಿಪ್ಪೊೞುತ್ತಾ ಮಿಡರಾಲ್
ವೆವ್ವಾಯಿತ್ತುರ್ಕ್ಕೈದಱಿ ಮಣಿಯೆಱಿಸ್ದು ಪಿಱುನ್ದದು ವಿಳಮ್ಬಿೞೀರ್ ॥ಪೆ. ಪು. ಪದ್ಯಭಾಗಂ

ಶಾಸನದ ಘಂಟೆಯಂ ಬಾಜಿಸುತ್ತೊಱಲಿತ್ತು
ಘಾಸಿಯಾಗುತೆ ದೈನ್ಯಗುಣವ ನೆಱೆ ಪೊತ್ತಿತ್ತು।
ಹರಿವಿರಿಂಚಿ ಪ್ರಮುಖರಿಂ ನುತಿಸಿಕೊಳುತಿರ್ಪ
ಪರಮ ಕಮಲಾಲಯೇಶ್ವರನ ಕಿಂಕರರಪ್ಪ
ಭಕ್ತರೀ ನಗರ ಸೀಮೆಯೊಳಿರ್ದಪರ್ಕೂಡಿ
ಶಕ್ತಿಯಿಂದವರೊಳಾವನದಾವನಿಂ ಕಾಡಿ
ಕೊಲಿಸಿಕೊಂಬಂ ಬಯಕೆಯಿಂ ಬಯಸುವಂ ನೋಡಿ
ಸಲೆ ಸತ್ಯವ ತಮ್ಮ ಮಗನಾದೊಡಂ ನೋಡಿ ೧೯೦
ಕೊಲುವರೆನಲನ್ಯರಂ ಬಿಡುವರೇ ತಾವಱಿದು
ಬಲುಹುಗೊಳ್ಳದು ಭೂಪ ಧರ್ಮವೇನುಂ ಪೊಱದು
ಛಲವಿದೆನಗಿದು ಗೋವಿನಾ ದುಃಖವಳಿದಪೆಂ
ಸಲೆ ಗೋವಿನಂತೆ ನಾನುಂ ದುಃಖಿಯಾದಪೆಂ

ಇಂತು ನುಡಿವುತೆ ಬಹಳ ಚಿಂತೆಯಿಂ ನೃಪನಿರಲು
ಅಂತದಂ ನೋಡಿ ಸಚಿವರ್ ಶಂಕೆಯಿಂದಿರಲು
ಸಚಿವರೊಳಗೊರ್ವನಂ ಕರೆದಿಂತು ಬೆಸಸಿದಂ
ಕುಚರಿತ್ರನಾದೆನ್ನ ದುಷ್ಪುತ್ರನುಂಟದಂ
ನೀಂ ಪಿಡಿದು ರಥಪಾದದೊಳ್ನೂಂಕು ಪೋಗೆನಲು
ಭೂಪಶಾಸನಮನಂತಕ್ಕೆಂದು ಕೈಕೊಳಲು ೨೦೦
ಇಂತಮಾತ್ಯಂ ಕುವರನಂ ಕೊಲ್ಲಲಾಱದಿರೆ
ಚಿಂತೆಯಿಂ ಪ್ರಾಣಂಗಳಂ ತಾನೆ ಬಿಡುತಮಿರೆ
ಸಚಿವವೃತ್ತಾಂತಮಂ ಕೇಳ್ದಾ ನೃಪಂ ಪೋಗಿ
ಶುಚಿಯಾಗಿ ಸಾಹಸಂ ಮಿಗೆ ಧರ್ಮಯುತನಾಗಿ
ಕರದಿಂ ಕುಮಾರಕನನುಱೆ ಪಿಡಿದು ಧೈರ್ಯದಿಂ
ಪುರವೀಥಿಗೈತರುತ್ತಿರ್ದನತಿ ವೇಗದಿಂ
ಬರುತೆರಡು ಮೂಱಡಿಯ ತಂದೆಯಿಕ್ಕದ ಮುನ್ನ
ವರಪುತ್ರನೈದಾಱು ಹೆಜ್ಜೆಯಿಕ್ಕಿದ ಮುನ್ನ
ತನ್ನೊಳಗದಾವುದಕ್ಕಾವುದುಪಯೋಗ್ಯವದು

ಚೆನ್ನಾಗಿ ಬೇಗದಿಂ ಮಾಡುವುದೆ ಕಜ್ಜವದು ೨೧೦
ಅದಱಿಂದಲಾನು ಕೃತಕೃತ್ಯನಾಡೆಂದೆನಲು
ಸದಪಿನಿಂದಾದ ಮುಕ್ತಿಯನು ನೆನವುತ್ತಿರಲು
ಎಲ್ಲಿಯದು ಭೋಗಕ್ಕೆ ತಕ್ಕ ಯೌವನಗುಣಂ
ಎಲ್ಲಿಯದು ಕೊಲುವ ತಂದೆಯ ಬುದ್ಧಿಗನುಗುಣಂ
ಕಿನ್ನರರು ಕಿಂಪುರುಷರೆಲ್ಲರುಂ ನೋಡುತಿರೆ
ಪನ್ನಗರು ಸಿದ್ಧವಿದ್ಯಾಧರರು ನೋಡುತಿರೆ
ದೇವದುಂದುಭಿಗಳಂ ಮೇಳವಂ ಮಾಡುತಿರೆ
ಸುರರು ಹೂಮಳೆಗಳಂ ಪಿಡಿದು ನೋಡುತ್ತಮಿರೆ
ಥರಥರದಿ ರುದ್ರಕನ್ನಿಕೆಯರುಂ ನೋಪ್ಪುತಿರೆ
ಆಹ ಈ ನೀತಿ ಈ ಧರ್ಮವೆಂತೆಂತೆಂಬ ೨೨೦
ಸಾಹಸವೆ ಘನವಾದಡೊಬ್ಬನೇ ಮನಸೆಂಬ
ಎಣಿಕೆಯಂ ಬಿಟ್ಟು ಧಾರ್ಮಿಕನಾದ ಭೂವರಂ
ಮಣಿಖಚಿತ ರಥವನಾಲ್ದೇಱಿಶಿವಕಿಂಕರಂ
ಕುವರನಂ ರಾಜವೀಥಿಯೊಳಗಡ್ಡಂಗೆಡಹಿ
ರವಿರಥಕೆ ಹೂಡುವಶ್ವಂಗಳನೆ ನೆಱೆ ನೋಹಿ
ಶಿವಶಿವ ಮಹಾದೇವ ರಥವ ನೂಕಿದನಂದು
ಕುವರನೆದೆಯಿಬ್ಭಾಗವಾದ ಸಮಯದೊಳಂದು
ಅನಿಮಿಷರು ತಮತಮಗೆ ಅರಳಸರಿವೃಷ್ಟಿಯಂ
ತನುವಿನ ಶಿರೋಗ್ರದೊಳು ಪುಷ್ಪ ಹೊಸವೃಷ್ಟಿಯಂ
 ಅಂತು ಕಱೆವುತ್ತಿರಲು ಭಕ್ತಕಲ್ಪದ್ರುಮಂ ೨೩೦
ಸಂತತಂ ಭಕ್ತಿವತ್ಸಲ ಪಾರ್ವತೀಧವಂ
ಶತಸಹಸ್ರಾದಿತ್ಯ ತೇಜೋವಿಶೋಭಿತಂ
ನುತವಿಯದ್ಗಂಗೆಯಂ ಮೆಱೆವ ಮಸ್ತಕಯುತಂ
ಚಂದ್ರಾರ್ಧಶೇಖರಂ ಭಾಳಾಕ್ಷಶೋಭಿತಂ
ಸಾಂದ್ರದ ಕಟಾಕ್ಷದಿಂ ಕಱೆವ ಕೃಪಾಮೃತಂ
ಕಂಬಳಾಶ್ವತರೋರು ಮಣಿಕರ್ಣಕುಂಡಲಂ

ಇಂಬಾದ ಗರಳಕಾಧೇಯಶೋಭಿತಗಳಂ
ಭಸಿತ ಚಂದನದಲರ್ಚಿತ ಭಾಗ್ಯದಾಗರಂ
ಲಸಿತ ಬಿಲ್ವ ಸುವರ್ಣಮಾಲಾಮನೋಹರಂ
ಲಂಬಿಸುವ ಲೋಕೇಶಮಸ್ತಕದ ಮಾಲೆಯಿಂ ೨೪೦
ಬಿಂಬಿಸುವ ನಿತ್ಯತ್ವಮಂ ಪೇಳುತಳಿಯಿಂ
ಉಡಿಗೆಯಾ ಪುಲಿಚರ್ಮವೇಷ್ಟಿತ ಕಟೀತಟಂ
ತೊಡವಾದ ನವರತ್ನದಿಂ ಶೋಭಿಸುತಿರ್ಪ
ವೇದಾಗಮಂಗಳಿಗೆ ಜನನಿಯಾಗಿರುತಿರ್ಪ
ಗೌರಿಯಿಂ ಮೆಱೆವ ವಾಮಾಂಗದ ಮಹೇಶ್ವರಂ
ಚಾರುತರ ಮಹಿಮೆಯನುಳ್ಳ ಶಂಕರಂ
ಮುಂದೆ ಜಯಜೀಯೆನುತ್ತಿಂದ್ರನೊಪ್ಪುತ್ತಿರಲು
ಸಂದ ಪಾರ್ಶ್ವಂಗಳೊಳು ಹರಿವಿರಂಚಿಗಳಿರಲು
ಸುತ್ತಲುಂ ದಿಕ್ಪಾಲರುಂ ನಮಿಸಿ ಪೊಗಳುತಿರೆ ೨೫೦
ಬಿತ್ತರಿಪ ಗಗನದೊಳು ಭೃಂಗಿಯಾಡುತ್ತಮಿರೆ
ನೋಡುತಂ ಸ್ಮೇರಮುಖನಾಗುತಂ ಹಿಗ್ಗುತಂ
ನಾಡೆ ಸೇವಿಪ ಸಾರ ಪ್ರಮಥನಿಚಯಾರ್ಚಿತಂ
೧ಬೇಡು ಮನುಚೋಳ ನಿನಗಿಷ್ಟಾರ್ಥಮಂ ಕೊಡುವೆ
ಕೂಡೆ ಬಿನ್ನವಿಸಿದಂ ವತ್ಸಂಗೆ ಹರಣಮಂ
ಮತ್ತೊಂದ ಬೇಡೆನೆ ನಿಮ್ಮ ಸದ್ಭಕ್ತಿಯಂ
ಚಿತ್ತದೊಳು ನೆಲೆಗೊಳಿಸಿ ಎನ್ನ ಪಶುಯುಕ್ತಿಯಂ
ತೊಲಗಿಸಿಯೆ ನಿಮ್ಮ ಪಾದದ ಸೇವೆಯೊಳಗಿರಿಸು
ಜಲಜಸಖಕುಮುದಸಖನೇತ್ರ ಭಕ್ತಿಯೊಳಿರಿಸು೧

---

೧. "ವೀಥಿವಿಟಂಕೇಶ್ವರಂ ಕರುಣದಿಂದಂ ಬಂದು
ಯಾಥಾರ್ಥನೃಪನಿಗರುಪಿಂದಂ ತಾನಂದು
ಲಲಿತದಿಂ ಕರು ಸಚಿವ ರಾಜಪುತ್ರರ್ಗೆಯ್ದೆ
ವಿಲಸಿತ ಪ್ರಾಣಂಗಳಾಗ ಬರೆ ಸುಖವೆಯ್ದೆ. —ಮೈ. ಓ. ರಿ. ಇ. K. A. ೩೪೫

ಬಾಲಮಂ ಮೆಳ್ಳಿಸುತೆ ಕಱು ಪಾಱುತುಂ ಬಂದು ೨೬೦
ಲೋಲನಾಗುತೆ ತಾಯನೆಯ್ದು ತಿರಲದು ನಿಂದು
ಪಾಲು ಕಟವಾಯಿಂದ ಸುರಿ[ಯೆ] ಹರುಷಂಮಿಕ್ಕು
ಇಂತದಂ ಮನು ತನ್ನ ಬಾಗ್ಯವೆಂದೇ ಬಗೆದು
ಕಂತುಹರನಂ ಕಂಡು ಪೈಯಿಕ್ಕಿ ನಿಲಲಂದು
ಪೊಡಮಡುತ್ತಂ ಮತ್ತೆ ಮತ್ತೆ ನಮಿಸುತ್ತಿರಲು
ಪೊಡವೀಶನತಿ ಭಕ್ತಿಯಿಂ ತನ್ನ ಮಱೆದಿರಲು
ಶಿವದರ್ಶನಾನಂದದಿಂ ಮನಂ ಪೆರ್ಚುತಿರೆ
ಭವನನುಱೆ ಪೊಗಳಲ್ಕೆ ತೊಡಗಿದಂ ಮಚ್ಚುತಿರೆ
ಶಂಭುನೇ ಶಂಕರನೆ ಸರ್ವಜ್ಞಮೂರ್ತಿಯೇ
ದಂಭವಿರಹಿತ ಭುವನಚರಿತ ಸತ್ಕೀರ್ತಿಯೇ ೨೭೦
ಶರ್ವ ಸರ್ವೇಶ ಭೂತೇಶ ಗೌರೀಶ್ವರನೆ.
ಸರ್ವಾತ್ಮಭುವನೇಶ ಈಶ್ವರ ಸದಾಶಿವನೆ
ನೀನೆ ಭೂಜಲವಹ್ನಿ ವಾಯುಗಗನಂಗಳುಂ
ನೀನೆ ಚಂದ್ರಾರ್ಕಾತ್ಮಮೂರ್ತಿ ಭೇದಂಗಳುಂ
ನಿನ್ನ ಮಱೆಹೊಕ್ಕೆನಾಂ ಕಾವುದೆಲೆ ಶಂಕರಾ
ಸನ್ನುತ ಮಹಾಪ್ರಭುವೆ ಕಾವುದೆಲೆ ಶಶಿಧರಾ
ನಾನಾ ತಪಧ್ಯಾನಾ ದಾನಾಧ್ವರಂಗಳಿಂ
ನೀನಾರಿಗಂ ಸಿಲ್ಕೆ ತತ್ಪ್ರಪಂಚಂಗಳಿಂ
ಭಕ್ತಿಯಿಂ ವರವಪ್ಪೆ ನೀನೆಲೆ ಮಹೇಶ್ವರನೆ
ಮುಕ್ತಿಯಂ ಯೋಗಿಗಳಿಗೀವ ಗಂಗಾಧರನೆ ೨೮೦
ಪಂಚಾಕ್ಷರ ಸ್ವರೂಪಂ ನೀನೆ ನೋಡುವಡೆ
ಪಂಚಕೃತ್ಯಸ್ಥಿರಂ ನಿನ್ನ ನೆಱೆ ಬೇಡುವಡೆ
ಪಂಚಭೂತಂಗಳೊಳಗಿರ್ಪೆ ಕರುಣಾಕರನೆ
ಪಂಚಬ್ರಹ್ಮಾತ್ಮಕಂ ನೀನೆ ಜಯ ಪುರಹರನೆ
ಯುಕ್ತಿವಂತತಾರ್ಕಿಕರು ಸಿದ್ಧರುಂ ಕೂಡೆ
ಶಕ್ತಿಯಿಂ ಪರಮಪದಮಂ ಕಾಣರುಱೆ ನೋಡೆ

ಧನ್ಯನಾದೆಂ ಮಾನ್ಯನಾದೆಂ ಮನುಜರೊಳಗೆ
ಚೆನ್ನಾಗಿ ನಿನ್ನ ರೂಪಂ ಕಂಡೆನಿದರೊಳಗೆ
ಎಂದೆಂಬ ನುಡಿಯೊಳಗೆ ಮಚ್ಚುತುಸುರ್ದಂ ಕರಂ
ಮುಂದೆ ಗೌರಿಯ ಮೊಗಮನೀಕ್ಷಿಸುತ ಶಂಕರಂ ೨೯೦
ಎಲೆ ನಿನ್ನ ನುಡಿಯಲಿಂತೀ ಕಜ್ಜದಿಂದಲಾಂ
ಸಲೆ ತುಷ್ಟನಾದೆ ಮಚ್ಚಿದೆ ಭಕ್ತಿಯಿಂದಲಾಂ
ಅದಱಿಂದ ನಿನ್ನ ಸದ್ಧರ್ಮದೊಳಿರಲಲ್ಲಿ
ಮುದದಿಂದ ಮೇದಿನಿಯ ಪಾಲಿಸುತ ನೀನಿಲ್ಲಿ
ಧರ್ಮಮಂ ನೋಡಲ್ಕೆ ಧರ್ಮದೇವತೆ ಬಂದು
ಪೆರ್ಮೆಯಿಂ ಗೋವಾಗುತಿಂತು ಮಾಡಿದೆನೆಂದು
ಅಂತದಂ ನೀ ಗೆಲ್ದೆ ಸದ್ಧರ್ಮಶಕ್ತಿಯಿಂ
ಸಂತತಂ ಸುಜ್ಞಾನಭರಿತ ಸದ್ವ್ಯಕ್ತಿಯಿಂ
ಪುತ್ರಮಿತ್ರ ಕಳತ್ರಯುತನಾಗಿ ಬೇಗದಿಂ
ಚಿತ್ರಭೋಗಂಗಳಂ ಭೋಗಿಸುತ ಧರ್ಮದಿಂ ೩೦೦
ಭೂಮಿಯೊಳು ಧರ್ಮಮಂ ಬೀಱಿ ಸತ್ಪುತ್ರನಂ
ಪ್ರೇಮದಿಂ ರಾಜ್ಯದೊಳು ನಿಲಿಸಿ ಬುಧಮಿತ್ರನಂ
ಎನ್ನ ಸಾರೂಪ್ಯಮಂ ಕೊಡುವೆ ನಾಂ ಬೇಗದಿಂ
ಚೆನ್ನಾಗಿ ಸುಖಮಿರ್ಪೆ ಬಳಿಕ ನೀಂ ರಾಗದಿಂ
ನಿನ್ನ ಕುಲದೊಳಗೆ ಜನಿಸಿದರೆಲ್ಲರುಂ ಕೂಡೆ
ಮನ್ನಣೆಯ ಮದ್ಭಕ್ತರುಂ ಸತ್ಯರುಂ ಕೂಡೆ
ಮತ್ಪರಾಮರ್ಶರುಂ ಮತ್ಪರಾಯಣರ್ಬೈದೆ
ಮತ್ಪದಾಶ್ರಯರಪ್ಪರೆಂದು ಪೇಳುತ್ತೈದೆ

ಇಂತು ಪೇಳುತ್ತ ನವಪುಷ್ಪಕಂಗಳ ತರಿಸಿ
ಸಂತಸದೊಳೆಲ್ಲರೇಱಿಸಿ ಪೊಗಳುತುಂ ನುತಿಸಿ ೩೧೦
ರಜತಾದ್ರಿಗೈತಂದು ಬಹಳ ವೈಭವದಿಂದ
ರಜತಗಿರಿಯೊಳಗೆ ಕೊಂಡಾಡುತಿರೆ ಭರದಿಂದ
ಭುಜಗಧರಭೂಷಣಂ ಗಣಪದವನೀವುತಂ

ಅಜಹರಿಗಳಿಂ ನುತಿಸಿಕೊಳುತಮಿರೆ ಸಂತತಂ
ಇಂತೆಮ್ಮ ಪಂಪಾವಿರೂಪಾಕ್ಷನೊಪ್ಪಿದಂ
ಸಂತತಂ ಹಂಪೆಯ ವಿರೂಪಾಕ್ಷನೊಪ್ಪಿದಂ

ಕಂದ।

ವಿನುತಜನ ಕಲ್ಪವೃಕ್ಷಂ
ಮನುಚೋಳನ ಧರ್ಮನೀತಿಗುಱಿ ಮಚ್ಚುತುಂ
ವಿನುತ ಗಣಪದವನೀವು
ತ್ತನುಪಮ ಗುಣನೆಮ್ಮ ಹಂಪೆಯರಸಂ ಮೆಱೆದಂ ॥

॥ ಮನುಚೋಳರಗಳೆ ಸಂಪೂರ್ಣಂ ॥

# ಭಾವಚಿಂತಾರತ್ನ ಸಂಗ್ರಹದ ಶಬ್ದಕೋಶ

## ಅ

| ಶಬ್ದ | ಸ್ಥಾನ | ಅರ್ಥ |
| --- | --- | --- |
| ಅಗಜಾ | ೧–೧ | ಗಿರಿಜೆ, ಪಾರ್ವತಿ |
| ಅಗ್ಗ | ೨–೯ | ಪ್ರಥಮ, ಶ್ರೇಷ್ಠ |
| ಅಗುರ್ವು | ೩–೮ | ವಿಸ್ಮಯ |
| ಅಗೆ | ೪–೧೫ | ಮೊಳಕೆ |
| ಅಗ್ರೆ | ೬–೨೧ | ಚೂಡೆ |
| ಅಂಗಚಿತ್ತ | ೬–೩ | ಇಷ್ಟಾರ್ಥ, ಬಹುಮಾನ |
| ಅಂಗಜ | ೨–೮ | ಮನ್ಮಥ |
| ಅಘ | ೧–೭ | ಸಂಚಿತಕರ್ಮ, ಪಾಪ |
| ಅಂಘ್ರಿ | ೧–೪ | ಪಾದ |
| ಅಚಲ | ೨–೧ | ಪರ್ವತ, ಬೆಟ್ಟ |
| ಅಚ್ಚಿ | ೭–೯ | ಅಕ್ಷಿ (ಸಂ), ಕಣ್ಣು |
| ಅಜ | ೨–೮ | ಬ್ರಹ್ಮ |
| ಅಜಿನ | ೩–೨೦ | ಚರ್ಮ |
| ಅಜೇಯ | ೭–೨೦ | ಜಯಿಸಲಾಗದ |
| ಅಟ್ಟೆ | ೯–೨೧ | ಮುಂಡ |
|  | ೯–೨೫ | ತಲೆಹೋದ ದೇಹ |
| ಅಂಡಲೆ | ೩–೧೫ | ಸಮೀಪದಲ್ಲಿದ್ದು ಪೀಡಿಸು |
| ಅಣಿಯರ | ೨–೧೦ | ಅತಿಶಯ, ಅಧಿಕ |
| ಅಣಿಲೆ | ೬–೬ | ಅಳಲೆಮರ |
| ಅಣುಗ | ೨–೧೪ | ಮಗ |
| ಅಂತಕ | ೬–೫ | ಯಮ |
| ಅದಟ | ೨–೯ | ಸಾಹಸಿ, ಶೂರ |
| ಅಧರ | ೪–೧೩ | ಕೆಳದುಟಿ |
| ಅನಿಮಿಷ | ೩–೨೧ | ದೇವತೆ, ಮೀನು |
| ಅನೀಕ | ೭–೬ | ಸಮೂಹ |
| ಅನ್ವಯ | ೨–೯ | ಅರ್ಥ ; ವಂಶ |
| ಅಪಘನ | ೯–೬ | ಕೈ, ಕಾಲು, ಮೊದಲಾದ ಅಂಗ ; ದೇಹ |
| ಅಪಾಂಗ | ೩–೯ | ಕಣ್ಣಿನ ತುದಿ |

| ಪದ | ಸ್ಥಾನ | ಅರ್ಥ |
| --- | --- | --- |
| ಅಬ್ಜ | ೩–೪ | ಕಮಲ; ಚಂದ್ರ |
| ಅಬ್ಧಿ | ೨–೧೨ | ಕಡಲು |
| ಅಂಬರ | ೨–೩ | ಆಕಾಶ; ವಸ್ತ್ರ |
| ಅಂಬಿಕೆ | ೧–೨ | ಗೌರಿ, ಪಾರ್ವತಿ |
| ಅಂಬು | ೮–೭ | ಬಾಣ |
| ಅಂಬುಜ | ೨–೧೧ | ಕಮಲ |
| ಅಂಬುಧಿ | ೪–೮ | ಜಲಧಿ, ಸಮುದ್ರ |
| ಅಂಬುರುಹ | ೧–೭ | ಕಮಲ |
| ಅಭ್ರ | ೪–೧೪ | ಆಕಾಶ |
| ಅಭೀಷ್ಟ | ೪–೧ | ಪ್ರಿಯ, ಇಷ್ಟ, ಬಯಕೆ |
| ಅಮರ್ಚು | ೧೦–೧೯ | ಧರಿಸು, ತೊಡಿಸು |
| ಅಮರ್ದು | ೨–೨ | (ಕ್ರಿ) ಹೊಂದಿಕೊಂಡು |
| | ೪–೧೦ | (ನಾ) ಅಮೃತ |
| ಅರಳೆಲೆ | ೪–೩ | ಎಳೆಯ ಮಕ್ಕಳ ಹಣೆಯ ಮೇಲೆ ಧರಿಸುವ ಅರಳಿ ಎಲೆಯ ಆಕಾರದ ತೊಡವು. |
| ಅರಿ | ೧–೧೧ | (ಕ್ರಿ) ಕಡಿ, ಕತ್ತರಿಸು |
| | ೨–೬ | (ನಾ) ಶತ್ರು |
| ಅರಿದಳ | ೬–೧೯ | ಹಳದಿಬಣ್ಣ; ಶತ್ರುಸೇನೆ |
| ಅರಿದು | ೯–೨೩ | ಅಸಾಧ್ಯ |
| ಅರ್ಕ | ೪–೧೪ | ಸೂರ್ಯ |
| ಅಱತು | ೮–೨೦ | ಬತ್ತಿಹೋಗಿ; ಅದೃಶ್ಯವಾಗಿ |
| ಅಱಿ | ೧–೯ | ತಿಳಿ |
| ಅಱೆ | ೭–೧ | ಬಂಡೆ |
| ಅರ್ವ | ೭–೨೧ | ಕುದುರೆ |
| ಅಲಗು | ೭–೧೫ | ಕತ್ತಿ |
| –ಮೀನ್ | ೮–೨ | ಕತ್ತಿಗಳೆಂಬ ಮೀನು |
| ಅಲಘು | ೩–೨೨ | ಹಗುರವಲ್ಲದ, ಶ್ರೇಷ್ಠ, ಘನ. |
| ಅಲರ್ | ೪–೧೩ | (ಕ್ರಿ) ಅರಳು, ವಿಕಸಿಸು |
| | ೯–೨೦ | (ನಾ) ಹೂವು |
| ಅಲರಂಬು | ೩–೨೦ | ಪುಷ್ಪಬಾಣ |
| ಅಲರ್ವಕ್ಕಿ | ೫–೧ | ತುಂಬಿ |

| | | |
|---|---|---|
| ಅಲೆ | ೩–೨೨ | ಪೀಡಿಸು |
| | ೯–೨ | ಅಲುಗು, ಅಲ್ಲಾಡು |
| ಅವಧಾನ | ೯–೨೧ | ಗಮನ, ಎಚ್ಚರಿಕೆ, ಭಕ್ತಿ |
| ಅವಧಾರು | ೩–೧೬ | ಎಚ್ಚರ, ಜೋಕೆ |
| ಅವನೀಜ | ೨–೨ | ಮರ |
| ಅಷ್ಟವಿಧಪೂಜೆ | ೨–೫ | ಎಂಟು ಬಗೆಯ ಅರ್ಚನೆ; ಅಭಿಷೇಕಜಲ, ಗಂಧ, ಅಕ್ಷತೆ, ಪುಷ್ಪ, ದೂಪ, ದೀಪ, ನೈವೇದ್ಯ, ತಾಂಬೂಲ. |
| ಅಸಿ | ೮–೧ | ಕತ್ತಿ |
| ಅಸಿತ | | ಕಪ್ಪು |
| —ಕಂಠ | ೩–೪ | ವಿಷಕಂಠ, ಶಿವ |
| —ಗಳ | ೭–೪ | |
| —ಗ್ರೀವ | ೭–೩ | |
| ಅಸ್ತೋಕ | ೨–೧೫ | ಶ್ರೇಷ್ಠ, ಹಿರಿಯ |
| × ಅಹನೆ | ೬–೯ | ಇದ್ದಾನೆ |
| ಅಹಿ | ೩–೧೩ | ಹಾವು |
| ಅಳಕ | ೪–೯ | ಮುಂಗುರುಳು |
| ಅಳವಟ್ಟ | ೩–೮ | ವಶವಾದ, ಪಡೆದ, ಹೊಂದಿದ |
| | ೬–೨೨ | ಕಟ್ಟೆ ಸಿದ್ಧವಾದ ; ಸೊಗಸಿದ |
| ಅಳ್ಕಱ್ | ೧–೧ | ಪ್ರೇಮ, ಅಕ್ಕರೆ |
| ಅಳ್ತಿ | ೧–೧೧ | ವಿನೋದ, ಸಂತೋಷ, ಪ್ರೀತಿ |

ಆ

| | | |
|---|---|---|
| ಆಕೀರ್ಣ | ೨–೪ | ತುಂಬಿದ, ಮುತ್ತಿದ |
| ಆಗಾರ | ೭–೧ | ಮನೆ |
| ಆಟೋಪ | ೬–೭ | ಸಂಭ್ರಮ ; ಆಡಂಬರ ; ಕೋಪ |
| ಆಢ್ಯ | ೨–೫ | ಸಂಪನ್ನ ; ಬಲ್ಲವ |
| ಆಣ್ಮ | ೩–೯ | ಪತಿ, ಗಂಡ |
| | ೬–೧೭ | ಅಧಿಪತಿ, ಒಡೆಯ |
| ಆನ್ | ೬–೧೦ | ತಳೆ ; ಎದುರುನಿಲ್ಲು ; ಧರಿಸು |
| ಆಭ | ೫–೧೦ | ಕಾಂತಿ |

| | | |
|---|---|---|
| ಆಯುಕನ್* | ೮–೨೪ | ಆ ಅಕ್ಕ, ಆ ಸತಿ |
| ಆಯತಿಕೆ | ೯–೪ | ಘನತೆ, ಗಾಂಭೀರ್ಯ |
| ಆರ್ಜು | ೨–೧೩ | ಸಾಮರ್ಥ್ಯಹೊಂದು, ಶಕ್ತನಾಗು |
| ಆಱುಮೊಗನ್ | ೮–೨೮ | ಷಣ್ಮುಖ, ಕುಮಾರ |
| ಆರ್ | ೯–೨೦ | ಗಟ್ಟಿಯಾಗಿ ಕೂಗು, ಆರ್ಭಟಿಸು |
| ಆಲ್ | ೬–೧೩ | |
| ಆಲಯ | ೯–೧೬ | ಮನೆ |
| ಆಲೋಕ | ೩–೧೮ | ನೋಟ |
| ಆವಳಿ | ೪–೧೫ | ಸಮೂಹ |
| ಆವುಗೆ | ೩–೧೬ | ಮರದ ಪಾದರಕ್ಷೆ |
| ಆಸುರ | ೯–೨೦ | ಭಯಂಕರ |
| ಆಸೆ | ೭–೨ | ದಿಕ್ಕು |
| ಆಳ್ | ೧೦–೧೧ | ಮುಳುಗು |
| ಆಳಿಮುಳುಗು | ೪–೬ | ಬಹಳ ಆಳದವರೆಗೆ ಮುಳುಗು |

ಇ

| | | |
|---|---|---|
| ಇಟ್ಟಣಿಸ | ೮–೧೧ | ಸಂದಣಿಸುವ, ಕಿಕ್ಕಿರಿಯುವ |
| ಇನ | ೨–೮ | ಸೂರ್ಯ |
| ಇನಿದು | ೪–೧೩ | ಸೊಗಸು; ಇಂಪು, ಸವಿ |
| ಇನಿವಿಲ್ಲು | ೩–೨೦ | ಕಬ್ಬಿನ ಬಿಲ್ಲು |
| ಇರ್ಕೆಲ | ೩–೬ | ಎರಡು ಪಕ್ಕ |
| ಇಂದ್ರಗೋಪ | ೬–೮ | ಮಳೆ ಬಂದಮೇಲೆ ಕಾಣಿಸಿಕೊಳ್ಳುವ ಕೆಂಬುಳು |
| ಇಳೆ | ೬–೧೨ | ಭೂಮಿ; ನೆಲ |

ಈ

| | | |
|---|---|---|
| ಈಡಾಡು | ೪–೧೩<br>೮–೧೨ | ಬಿಸುಡು, ಎಸೆ |

---

*ಹೋಲಿಸಿ :- "ಈಯುಕನ್" (ಭೈ.ಕಾ.ಕ.ಸೂ.ರ.ದ ೧೮೧ನೆಯ ಪದ್ಯದ ಕಥಾಭಾಗದಲ್ಲಿಯೂ, ಸಾ. ಭೈ. ಕಾ.ದ ಓಲೆಪ್ರತಿ ೧-೨೫ರಲ್ಲೂ ಈ ರೂಪವಿದೆ) = ಈ ಅಕ್ಕ, ಈಕೆ. ಈ ಪದದಲ್ಲಿ ಅಕ್ಕ ಎಂಬುದರ ದ್ವಿತ್ವ ಸರಳವಾಗಿದೆ. ಪುಲ್ಲಿಂಗ ಸೂಚಕ ಪ್ರತ್ಯಯವಾದ 'ಅನ್' ಸ್ತ್ರೀಲಿಂಗದಲ್ಲಿ ಬಂದಿದೆ.

| | | |
|---|---|---|
| ಈಳ್ | ೭–೧೮<br>೧೦–೧೧ | ಸೆಳೆ, ತೆಗೆ |
| ಈಸು | ೮–೧೯ | ಈಜು |

ಉ

| | | |
|---|---|---|
| ಉಗ್ಗಡ | ೮–೨ | ಅಧಿಕ, ಹೆಚ್ಚಿಗೆ |
| ಉಂಗುರ | ೨–೨ | ಬೆರಳ ತೊಡವು; ತೆರೆ, ಅಲೆ |
| ಉಘೆ | ೩–೧೬ | ಜಯವಾಗಲಿ |
| ಉಚ್ಚವ | ೪–೧೮ | ಉತ್ಸವ (ಸಂ) |
| ಉಡುವರ | ೨–೩ | ತಾರಾಪತಿ, ಚಂದ್ರ |
| ಉಡಿ | ೧೦–೧೪ | ಕಟಿ, ಸೊಂಟ |
| ಉಣ್ಮು | ೧–೨ | ಹೊರಹೊಮ್ಮು |
| ಉದ್ರೇಕ | ೬–೧೧ | ಗರ್ವ |
| ಉಪಲ | ೭–೧ | ಕಲ್ಲು |
| ಉಪವನ | ೩–೭ | ಉದ್ಯಾನ |
| ಉಪ್ಪವಡಿಸು | ೭–೨೬ | ಮೇಲೇಳು, ಎಚ್ಚರವಾಗು |
| ಉರ | ೩–೧ | ಎದೆ |
| ಉರ್ವರೆ | ೭–೨೩ | ಭೂಮಿ |
| ಉಱುವ | ೬–೧೭ | ಒಪ್ಪುವ, ಘನವಾದ |
| ಉಲಿವ | ೨–೭ | ಮೊರೆವ, ಶಬ್ದಮಾಡುವ |
| ಉಲುಪು | ೭–೩೦ | ಧ್ವನಿ, ವಾಣಿ |
| ಉಳ್ಳಲರ್ | ೫–೫ | ಒಳಗೇ ಅರಳಿರುವ ಮೊಗ್ಗು |

ಎ

| | | |
|---|---|---|
| ಎಡವು | ೯–೪ | ಮುಗ್ಗರಿಸು |
| ಎಡ್ಡ | ೨–೨ | ಸೊಗಸು, ರಮ್ಯ |
| ಎಡೆದಿಟ್ಟು | ೬–೧೩ | ನಡುದಿಣ್ಣೆ, ದ್ವೀಪ |
| ಎಣೆ | ೪–೨ | ಸಮಾನ, ಸದೃಶ |
| ಎರಲೆ | ೨–೬ | ಚಿಗರಿ, ಜಿಂಕೆ |
| ಎರವು | ೩–೧೮ | ಭಿನ್ನ; ಅಂಸಗತ |
| ಎಱಿಕ | ೯–೧೯ | ಪ್ರೇಮ |
| ಎಱಗು | ೪–೧೭ | ನಮಸ್ಕರಿಸು |

| | | |
|---|---|---|
| ಎಱತಿ | ೪–೧೫ | ಹೊಯ್ಯ್, ಸುರಿ |
| ಎಱತಿಯ | ೯–೧೯ | ಪ್ರಭು, ದೊರೆ |
| ಎಲರ್ | ೫–೧ | ಗಾಳಿ |
| ಎಲುಡೋಱು | ೧–೩ | ಮೂಳೆಬಿಟ್ಟುಕೊಳ್ಳು, ಎಲುಬುಕಾಣಿಸು |
| ಎಳ್ತರ್ | ೮–೧೮ | ಎದ್ದು ಬಾ |
| ಎಳಸು | ೧೦–೧೭ | ಬಯಸು, ಇಚ್ಛಿಸು |
| | ಏ | |
| ಏಣ | ೬–೧೬ | ಜಿಂಕೆ |
| ಏಸು | ೬–೧೭ | ಎಷ್ಟು |
| | ಐ | |
| ಐದಳೆ | ೮–೨೩ | ಇದ್ದಾಳೆ |
| ಐಸು | ೯–೨೦ | ಅಷ್ಟು |
| | ಒ | |
| ಒಟ್ಟಿಲು | ೧೦–೨೩ | ರಾಶಿ |
| ಒತ್ತು | ೯–೨೦ | ಮಗ್ಗಲು, ಪಕ್ಕ |
| ಒದಱು | ೪–೯ | ಕೊಡಹು |
| | ೩–೧೩ | ಅಬ್ಬರಿಸು, ಧ್ವನಿಮಾಡು, ಕೂಗು |
| ಒಂದು | ೨–೫ | ಕೂಡು, ಐಕ್ಯವಾಗು |
| ಒರೆ | ೭–೧೧ | (ನಾ) ರೇಖೆ, ಗೀರು, ಎಳೆ |
| | ೧–೧೦ | (ಕ್ರಿ) ಹೇಳು, ತಿಳಿಸು |
| ಒಱಲು | ೮–೧೯ | ಅಳುವ ಶಬ್ದ |
| ಒಸಗೆ | ೨–೨ | ಶುಭ, ಮಂಗಳ; ಸಂತೋಷ |
| | ೪–೧೫ | ಶುಭವಾರ್ತೆ ; ಆನಂದ |
| ಒದಗು | ೮–೧೦ | ಕೂಡು |
| | ೮–೧೧ | ಅಟ್ಟು |
| | ಓ | |
| ಓರಗೆ | ೪–೨೦ | ಸಮಾನತೆ, ಹೋಲಿಕೆ |
| ಓತು | ೩–೨೦ | ಅಕ್ಕರೆಗೊಂಡು |
| ಓಪ | ೨–೧೪ | ಪ್ರೇಮಪಾತ್ರ, ಪ್ರೀತಿಯ |

| | | |
|---|---|---|
| ಓವು | ೨–೨೩ | ಅಕ್ಕರೆಯಿಂದ ಕಾಣು, ಉಪಚರಿಸು |
| ಓಸರಿಸು | ೯–೨೦ | ಓರೆಯಾಗು, ಒಂದು ಪಕ್ಕಕ್ಕೆ ಸರಿ |

ಕ

| | | |
|---|---|---|
| ಕಟಕಿ | ೨–೧೧ | ವ್ಯಂಗ್ಯ, ಚುಚ್ಚುನುಡಿ |
| ಕಟುನೈವೇದ್ಯ | ೭–೮ | ಕಾರಕೂಡಿದ ಷಡ್ರಸ |
| ಕಂಟಕಂಬಡೆ | ೩–೬ | ಮೊನೆಮೋರು, ಸುಂಕುವಡೆ |
| ಕಠಾರಿ | ೩–೫ | ಇರಿಯುವ ಆಯುಧ ; ಚೂರಿ |
| ಕಂಠೀರವ | ೭–೧೪ | ಸಿಂಹ |
| ಕಡವರ | ೯–೧೪ | ಚಿನ್ನ |
| ಕಡ್ಡಿ | ೬–೧೯ | ಚಿತ್ರಗಾರನ ಲೇಖಣಿ ; ಹುಲ್ಲುಕಡ್ಡಿ |
| ಕಡೆಮಾಡು | ೬–೧೯ | ತುದಿಯನ್ನು ಒಂದುಕಡೆ ಮಾಡು, ನಿಕೃಷ್ಟವಾಗಿ ಕಾಣು |
| ಕತ | ೧–೫ | ಕಾರಣ |
| ಕದಂಬ | ೪–೮ | ಸಮೂಹ, ಗುಂಪು |
| ಕದಿರ್ | ೬–೨೧ | ಕಿರಣ |
| ಕಂದ | ೪–೧೩ | ಗೆಡ್ಡೆ |
| | ೬–೪ | ಮೂಲ, ಬೇರು |
| ಕಂದಲ್ | ೭–೧೮ | ಮಣ್ಣಿನ ಗಿಂಡಿ ; ಕೊಡ |
| ಕಂಧರ | ೯–೧೬ | ಕುತ್ತಿಗೆ, ಕೊರಳು |
| ಕಪ್ಪ | ೬–೧೦ | ಕಾಣಿಕೆ, ಪೊಗದಿ |
| ಕಮಠ | ೮–೬ | ಆಮೆ |
| ಕಮಲಜ | ೧–೪ | ಬ್ರಹ್ಮ |
| ಕಮ್ಮಲರ್ | ೪–೧೯ | ಮುಗಮುಗಿಸುವ ಹೂವು |
| ಕರ | ೭–೧೧ | ರಾಜಾರ್ಥ, ಸಿದ್ಧಾಯ ; ಕಿರಣ |
| ಕರಂಡ | ೩–೭ | ಸಂಪುಟ; ಭರಣಿ |
| ಕರಣಿಕ | ೬–೧೦ | ಕರ್ಣಿಕ, ಗಣಕ |
| ಕರವಾಳ್ | ೯–೨೬ | ಕತ್ತಿ |
| ಕರವೀರ | ೫–೨ | ಕಣಗಿಲೆ, ಕಣಗಿಲೆ ಹೂವು |
| ಕರೋಟಿ | ೯–೧ | ರುಂಡ |
| ಕರ್ಣಧಾರ | ೮–೨೨ | ಕಿವಿಯ ರಂಧ್ರ |
| ಕರ್ಣಿಕೆ | ೨–೨ | ಬೀಜಕೋಶ |

| | | |
|---|---|---|
| ಕಾಲ | ೩–೫ | ಯಮ |
| —ಪರಣಿ | ೬–೭ | ಜ್ವಾಲಾಪರಂಪರೆ, ಉರಿಯ ಮಾಲೆ |
| ಕಾಲ್ | ೩–೭ | ಕಾಲುವೆ |
| ಕಾಲ್ಗಡೆಯ | ೮–೨ | ಕಾಲಿನ ಕಡಗ, ಗಗ್ರ |
| ಕಾಲಾರಿ | ೩–೫ | ಯಮವೈರಿ, ಶಿವ |
| ಕಾಲಿ | ೩–೨೧ | ಕಾಳಿ, ದುರ್ಗಿ |
| ಕವಾಟ | ೨–೪ | ಕದ, ಬಾಗಿಲು |
| ಕವಿ | ೩–೪<br>೮–೧೧ | (ನಾ) ಕಾವ್ಯಕರ್ತೃ, ಶುಕ್ರ<br>(ಕ್ರಿ) ಮುತ್ತಿಕೊಳ್ಳು |
| ಕಶಾದಂಡ | ೨–೯ | ಚಮ್ಮಟಿಗೆಯ ಕೋಲು |
| ಕಳಮೆ | ೩–೬ | ನೆಲ್ಲು, ಬತ್ತ |
| ಕಾಪಾಲಿ | ೮–೨೨ | ಶಿವ |
| ಕಾಮದುಘ | ೩–೩ | ಕಾಮಧೇನು |
| ಕಾವ | ೨–೪<br>೩–೨ | (ಕ್ರಿ) ಕಾಯುವ, ರಕ್ಷಿಸುವ<br>(ನಾ) ಕಾಮ, ಮನ್ಮಥ |
| ಕಾಷ್ಠ | ೨–೫<br>೭–೧೭ | ಉದಾತ್ತಗುರಿ<br>ಕೀಲು; ಸಾಮವೇದ |
| ಕಾಸಾರ | ೫–೪ | ಕೊಳ |
| ಕಾಹು | ೭-೧೨ | ಕಾಪು, ಕಾವಲು |
| ಕಾಳಹಸ್ತಿ | ೮–೧ | ಕರಿಯ ಆನೆ, ಒಂದು ಕ್ಷೇತ್ರ |
| ಕೀರಣದ | ೮–೨ | ತೆತ್ತಿಸಿದ, ಕೀಲಿಸಿದ |
| ಕೀಲಕ | ೩–೧೯ | ಸಪ್ತಕುಲಪರ್ವತಗಳು |
| ಕುಕ್ಷಿ | ೪–೧೧ | ಹೊಟ್ಟೆ |
| ಕುಜ | ೩–೪ | ಮರ; ಮಂಗಳಗ್ರಹ |
| ಕುಟ್ಮಲ | ೪-೧೩ | ಕೋರಕ, ಮೊಗ್ಗು |
| ಕುಮುದ | ೩–೧೩<br>೪–೧೧ | ಕನ್ನೈದಿಲೆ<br>ಕಠೋರ, ನಿಷ್ಠುರ |
| ಕುಱುಗೋಲು | ೭–೪ | ಪುಟ್ಟ ಕೋಲು, ದಡಿ. ಆಟ್ಟೆಗೋಲು |
| ಕಱುಹು | ೬–೬ | ಗುರುತು |
| ಕುಶ್ರಮ | ೩–೫ | ಭೂಮಿಯ ಆಯಾಸ |
| ಕುಳಿರ್ಕೊಳ್ | ೧೦–೧೧ | ಶೈತ್ಯಹಿಡಿ |

| | | |
|---|---|---|
| ಕೂರ್ | ೬–೧೩ | ಹರಿತ |
| ಕೂರ್ತು | ೭–೧೬ | ಪ್ರೀತಿಸಿ |
| ಕೂಲ | ೪–೧೧ | ದಡ |
| ಕೃಷ್ಣ | ೨–೧ | ಕಪ್ಪು |
| —ಗಳ | ೧೦–೨೧ | ನೀಲಗ್ರೀವ, ವಿಷಕಂಠ |
| —ಗಿರಿಸುತ | ೨–೧೧ | ಕರಿಯ ಆನೆ |
| ಕೇತು | ೩–೪ | ಬಾವುಟ; ನವಗ್ರಹಗಳಲ್ಲಿ ಒಂದು |
| ಕೈಪೆ | ೯–೨ | ಕಹಿ |
| ಕೈಯೊಡನೆ | ೯–೨೩ | ಕೂಡಲೆ, ಈಗಲೆ, ಒಡನೆ |
| ಕೈಸೆಕೆ | ೭–೧೨ | ಕಿರಣದ ಶಾಖ; ಕೈಬಿಸಿ |
| ಕೊತ್ತಳ | ೨–೪ | ಕೋಟೆಯ ಗೋಡೆ ಬುರುಜು, ಆಳುವೇರಿ |
| ಕೋಕ | ೮–೩ | ಚಕ್ರವಾಕ |
| ಕೋಟೀರ | ೪–೮ | ಮುಡಿ, ಮೌಳಿ, ಕಿರೀಟ |
| ಕೋಹಳೆ | ೧೦–೧೯ | ಲಿಂಗದ ಮೇಲೆ ಧರಿಸುವ ಚಿನ್ನ, ಬೆಳ್ಳಿ ಮೊದಲಾದವುಗಳ ಕೊಳಗ ಅಥವಾ ಹೊದ್ದಿಕೆ; ಕರಡಿಗೆ ಮುಚ್ಚಳ; ಮೊಗ್ಗು |
| ಕ್ರತುಭುಜ | ೨–೧ | ದೇವತೆ |
| ಕ್ರತುಕರ್ತೃ | ೭–೧೫ | ಯಾಗವನ್ನುಮಾಡುವವನು, ಯಜಮಾನ |
| ಕ್ಷುರಿಕ | ೬–೧೩ | ಕತ್ತಿ |

## ಖ

| | | |
|---|---|---|
| ಖಗ | ೭–೨೪ | ಸೂರ್ಯ; ಪಕ್ಷಿ |
| ಖಗದ ಮಱಿ | ೭–೨೪ | ಸೂರ್ಯನ ಮರಿ, ಸೊಡರು; ಹಕ್ಕಿಯಮರಿ |
| ಖರ್ಜೂರಪರ್ವತ | ೫–೧೨ | ರಜತಗಿರಿ, ಬೆಳ್ಳಿಯಬೆಟ್ಟ |
| ಖಂಡೆಯ | ೮–೧೩ | ಖಡ್ಗ, ಕತ್ತಿ |
| ಖೋ | ೬–೭ | ಎದುರಾಳಿಯನ್ನು ಪ್ರತಿಭಟಿಸುವಾಗ ಮಾಡುವ ಶಬ್ದ, ಘುಡುಘುಡಿಸುವಿಕೆ |

## ಗ

| | | |
|---|---|---|
| ಗಜಮುಖ | ೨–೬ | ಗಣಪತಿ, ವಿನಾಯಕ |
| ಗದ್ದುಗೆ | ೨–೧೨ | ಪೀಠ, ಸಿಂಹಾಸನ |
| ಗಮ್ಮನೆ | ೮–೬ | ತೀವ್ರವಾಗಿ, ಬೇಗನೆ |

ಗಾಡಿ ೭–೧೮ ಸೊಬಗು, ಚೆಲುವು
ಗಾತ್ರ ೯–೯ ಶರೀರ
ಗಾನಂ ೭–೧೭ ಗಾಯಕ, ಹಾಡುಗಾರ
ಗಾಂಧರ್ವವರ ೮–೧ ಕುಬೇರ
ಗಾಜಾಗು ೮–೨೧ ಭ್ರಾಂತಿಗೊಳ್ಳು, ಉದ್ರೇಕಹೊಂದು
ಗುಡಿಗಟ್ಟು ೬–೧೫ ಹರ್ಷಗೊಳ್ಳು, ಹಿಗ್ಗು
ಗುಲ್ಮ ೫–೫ ಪೊದೆ
ಗುಹ ೨–೧೨ ಷಣ್ಮುಖ
ಗೂಡು ೭-೨೪ ದೀಪದ ಗೂಡು, ಕೊನ್ನವಾಡ, ಹಕ್ಕಿಯ ವಾಸಸ್ಥಾನ
ಗೇಹ ೩–೮ ಮನೆ
ಗೋತ್ರ ೪–೧೨ ವಂಶ; ಬೆಟ್ಟ
ಗೋಮೇದಾಗ್ರೆ ೬–೨೧ ನವರತ್ನಗಳಲ್ಲಿ ಒಂದಾದ ಗೋಮೇದಿಕವನ್ನು ತಲೆವಣಿಯಾಗುಳ್ಳ ಸ್ತ್ರೀ

ಘ

ಘಟ ೩–೧೨ ಮಣ್ಣಿನ ಕೊಡ, ಹರವಿ
ಘನಮಾರ್ಗ ೧೦–೨೨ ಆಕಾಶ
ಘನೋಪಲ ೭–೧ ಆಲಿಕಲ್ಲು, ಆನಿಕಲ್ಲು
ಘೋಟಕ ೭–೨೮ ಕುದುರೆ

ಚ

ಚಂಡಕೀರ್ತಿ ೨–೬ ಶಿವನ ಸ್ತುತಿಪಾಠಕ
ಚಂಡಿಕೆ ೧೦–೧೨ ದುರ್ಗಿ, ಪಾರ್ವತಿ
ಚಾಗಿ ೪–೪ ತ್ಯಾಗಿ, ದಾನಿ
ಚಾಂಗು ! ಬೊಲ್ ೩–೧೬ ಭೇಷ್ ! ಭಲಾ !
ಚಾರಿವರಿ ೮–೭ ಎಡ-ಬಲಕ್ಕೆ ಚಾತುರ್ಯದಿಂದ ಚಲಿಸು, ಚಲ್ಲವರಿ
ಚಿತ್ರ ೬–೧೯ ಚಿತ್ರಪಟ, ವರ್ಣಚಿತ್ರ; ಆಶ್ಚರ್ಯ,
ಚಿತ್ರಶಿಖಂಡಿಜ ೩–೧೦ ಚಿತ್ರಶಿಖಂಡಿ ಎಂದರೆ ಅಂಗಿರಸ್ಸು ಎಂಬ ಋಷಿ. ಆತನ ಮಗ ಬೃಹಸ್ಪತಿ
ಚಿಂತಾಮಣಿ ೫–೪ ಒಂದು ಬಗೆಯ ಬತ್ತ; ಬೇಡಿದುದನ್ನು ನೀಡುವ ಸ್ವರ್ಗದಲ್ಲಿರುವ ಒಂದು ರತ್ನ

| | | |
|---|---|---|
| ಚಿಲುಪಾಲು[1] | ೩–೧೦ | ಕಾಯಿಸಿ ನೀರುಬತ್ತಿಸಿದ ಹಾಲು, ಬಟ್ಟೆವಾಲು, ಕೆನೆಹಾಲು |
| ಚೂತ | ೫–೭ | ಮಾವು |
| ಚೆಲ್ಲೆಗಣ್ಣು | ೪–೩ | ನೀಳವಾದ ಕಣ್ಣು |

ಛ

| | | |
|---|---|---|
| ಛವಿ | ೬–೨೧ | ಕಾಂತಿ |

ಜ

| | | |
|---|---|---|
| ಜಕ್ಕುಲಿಸು | ೪–೧೯ | ಚಕ್ಕಲಗುಳಿ ಇಕ್ಕು |
| ಜಡ | ೧–೨ | ಜಲ ; ಮಂದ ; ಮೂರ್ಖ |
| ಜಡಿ | ೯–೨೦ | ಝಳಪಿಸು |
| ಜಲದುರ್ಗ | ೭–೧೧ | ಸುತ್ತಲು ನೀರಿನ ಕಂದಕವಿರುವ ಕೋಟೆ |
| ಜಱಿ | ೨–೧೦ | ಹೀನಾಯಮಾಡು |
| ಜಾಲಕ | ೮–೯ | ಕಿಟಿಕಿ |
| ಜಾಂಬೂನದ | ೩-೨೦ | ಚಿನ್ನ |
| ಜಿಹ್ವೆ | ೨-೧೧ | ನಾಲಗೆ |
| ಜೀವ | ೩-೧೦ | ದೇವತೆಗಳನ್ನು ಬದುಕಿಸುವವನು, ಬೃಹಸ್ಪತಿ |
| ಜೀವನ | ೮-೧೬ | ನೀರು |
| ಜೀವನಿಧಿ | ೨-೨ | ಸಮುದ್ರ ; ಅಭಿಮಾನಪೂರ್ಣ |
| ಜೀವಾಳ[2] | ೭-೧೭ | ನಾದಕಟ್ಟು ; ಸಾರ |
| ಜೂಟ | ೫-೧೨ | ಜಡೆಮುಡಿ, ಜುಟ್ಟು |
| ಜೇನೆಯ್ | ೭-೧೮ | ಜೇನುತುಪ್ಪ |
| ಜೊನ್ನವಕ್ಕಿ | ೭-೧೧ | ಚಕೋರ |
| ಜೋಕೆ | ೮-೯ | ಮರೆ ; ರಕ್ಷೆ , ಕಾವಲು ; ಎಚ್ಚರ |

ಝ

| | | |
|---|---|---|
| ಝಲ್ಲರಿ | ೮-೨ | ಕೂದಲಿನ ಕುಚ್ಚು , ಗೊಂಡೆ |
| ಝುಂಕಿಸು | ೨-೧೩ | ಹೆದರಿಸಿ ಬಯ್ಯು |

೧ "ಎಂಟು ಭಾಗ ಕ್ಷೀರದಲ್ಲಿ ಎರಡು ಭಾಗ ನೀರು ಕೂಡಿಸಿ ಆ ನೀರು ಅಱತು ಕಾಸಿದುದೆ ಚಿಲುಪಾಲು"—ಟೀಕಾಕಾರ: ಮರಿಸಿದ್ಧಲಿಂಗದೇಶಿಕ.

೨ "ಬಿರಟೆ, ಚಕ್ಕು, ಸನ್ನೆ ಬಿಗಿ, ಜಬ್ಬು, ಜೀವಾಳವೆಂಬಾರು ಬಗೆಯಾದ ನಾದ ಕಟ್ಟುಗಳಿಂ ತಂತ್ರಿಗಳಂ ಸವರಿಸಿ"—ವಿವೇಕ ಚಿಂತಾಮಣಿ: ೪ನೆಯ ಪ್ರಕರಣ

**ಡ**

| | | |
|---|---|---|
| ಡಮರು | ೩-೧೯ | ಶಿವನ ಕೈಯಲ್ಲಿರುವ ಒಂದು ಚರ್ಮದ ವಾದ್ಯ, ಡಕ್ಕೆ |
| —ಧ್ವಾನ | ೪-೧೯ | ಡಮುಡಮುವೆಂಬ ಡಕ್ಕೆಯ ಧ್ವನಿ |

**ತ**

| | | |
|---|---|---|
| ತಟಾಕ | ೩-೪ | ಜಲಾಶಯ, ಕೆರೆ |
| ತಟಿತ್ | ೫-೧೦ | ಮಿಂಚು |
| ತಟ್ಟಗಿ | ೮-೨೪ | ತಾಕಿ ನಾಟು |
| ತಡಿ | ೮-೨ | ತೇಪೆಹಾಕಿ ಮಾಡಿದ ಬೆನ್ನ ಕವುದಿ, ಮೇಲುಹಾಸು, ಜೀನು |
| ತಡೆಗಾಲ್ | ೮-೧೧ | ತೊಡರುಗಾಲು |
| ತಣ್ಣಸ | ೭-೯ | ತಂಪು |
| ತಪ್ತ | ೩-೨೦ | ಕಾದ |
| ತಮ | ೭-೨೫<br>೮-೨೦ | ಕತ್ತಲೆ<br>ರಾಹು |
| ತಕ್ಕೈಸು | ೯-೩ | ಆಲಿಂಗಿಸು, ಅಪ್ಪು |
| ತವರಾಜ | ೩-೧೦ | ಪರಿಶುದ್ಧವಾದ ಸಕ್ಕರೆ |
| ತಳರ್ದು | ೮-೪ | ಬಿಟ್ಟುಹೊರಟು |
| ತಳೆ | ೫-೪ | ಸತ್ತಿಗೆ, ಕೊಡೆ |
| ತಾಣ | ೮-೨೧ | ಸ್ಥಾನ (ಸಂ), ಸ್ಥಳ, ಎಡೆ |
| ತಾಮ್ರಪರ್ಣಿ | ೪-೧೪ | ಮಲಯಪರ್ವತದಲ್ಲಿ ಹುಟ್ಟುವ ಒಂದು ನದಿ |
| ತಾರಹಾರ | ೮-೧೨ | ಮುತ್ತಿನ ಸರ |
| ತಿಮಿರ | ೩-೨೨ | ಕತ್ತಲೆ |
| ತಿರುವು | ೩-೨೦ | ಬಿಲ್ಲಿನ ಹಗ್ಗ, ಹೆದೆ |
| ತಿಲ್ಲೆ | ೨-೧೪ | ಚಿದಂಬರ ಕ್ಷೇತ್ರ |
| ತ್ರಿಪುಂಡ್ರ | ೪-೧೦ | ವಿಭೂತಿಯ ಮೂರು ರೇಖೆ |
| ತಿಂತಿಣಿ | ೪-೧೮ | ಸಮೂಹ |
| ತೀವು | ೭-೨ | ತುಂಬು |
| ತುಲಾಪಾದಪ | ೯-೬ | ತಕ್ಕಡಿಯ ಮರದ ಕಾಲ್ಮಣೆ(?) |

| | | |
|---|---|---|
| ತುಷಾರ | ೯-೩ | ಹಿಮ, ಹಿಮಕಣ |
| ತುಹಿನ | ೧-೧ | ಮಂಜು |
| ತುಂಗ | ೩-೯ | ಶ್ರೇಷ್ಠ |
| ತೂಳ | ೧೦-೨ | ಹತ್ತಿ, ಅರಳೆ |
| ತೆಜಿಪುಮಾಡು | ೫-೧ | (ಸ್ವರಕಟ್ಟಿಕೊಂಡಿರುವ ಕೊರಲನ್ನು) ತೆ ಧ್ವನಿಮಾಡು |
| ತೇಜಿ | ೭-೨೧ | ಅರಬ್ಬಿ ಕುದುರೆ |
| ತೊಡಂಬೆ | ೫-೫ | ತೊಟ್ಟು |
| ತೊಡರು | ೮-೧೧ | ಸಿಕ್ಕಿ ಬೀಳು, ಎಡವಿಬೀಳು |
| ತೊಡೆ | ೬-೧೯ | ಬಳಿ, ಹಚ್ಚು; ಹಾಳುಮಾಡು |
| ತೊಂಡುಗೆಡೆ | ೫-೨ | ಗಳಹು, ಹರಟು |
| ತೋಯಜ | ೬-೧೨ | ಜಲಜ, ಕಮಲ |
| ತೋರ | ೭-೨೧ | ಸ್ಥೂಲ(ಸಂ), ಗಾತ್ರ |
| ತೋಹು | ೬-೭ | ಮರಗಳ ಗುಂಪು, ತೋಪು |

ದ

| | | |
|---|---|---|
| ದವಶಿಖಿ | ೧೦-೨ | ಕಾಳ್ಕಿಚ್ಚು |
| ದಳ | ೭-೧೨ | ಹೂವಿನ ಎಸಳು; ಸೇನೆ |
| ದಂಡು | ೫-೨ | ಪೌಜು, ಸೇನೆ. |
| ದಂಡಿಗೆ | ೭-೧೭ | ವೀಣೆ |
| ದಂತಿ | ೬-೫ | ಆನೆ |
| ದಿನಪ | ೭-೨ | ಸೂರ್ಯ |
| ದುಂದುಭಿ | ೧೦-೧ | ನಗಾರಿ, ಭೇರಿ |
| ದೇವಮಣಿ | ೭-೨೬ | ಕುದುರೆಯ ನಡುಗೊರಲ 'ಶ್ರೀವತ್ಸ' ಸುಳಿ |
| ದೇವಾಂಗ | ೪-೧೦ | ರೇಷ್ಮೆಬಟ್ಟೆ; ದಿವ್ಯವಸ್ತ್ರ |
| ದೇವಾಂಬರ | ೬-೨೩ | |
| ದೋಷಕರಿ | ೯-೨೧ | ಪಾಪವೆಂಬ ಆನೆ |
| ದೌವಾರಿಕ | ೮-೨೨ | ಬಾಗಿಲು ಕಾಯುವವನು |
| ದ್ರೌಣಿ | ೨-೧ | ದ್ರೋಣಾಚಾರ್ಯ; ದೋಣಿ |

## ಧ

ಧರ್ಮರಕ್ಷಕ ೫-೪ ಧರ್ಮವನ್ನು ಕಾಪಾಡುವವನು ;ಯಮ
ಧೃತಿ ೮-೧೪ ಧೈರ್ಯ
ಧಾನುಷ್ಕೋಟಿ ೮-೧ ರಾಮೇಶ್ವರದ ಬಳಿಯ ಒಂದು ಯಾತ್ರಾಸ್ಥಳ; ಬಿಲ್ಲಿನ ಕೊಪ್ಪು
ಧಾಮ ೩-೧೪ ನೆಲೆ; ಶರೀರ

## ನ

ನಗ ೪-೧೪ ಬೆಟ್ಟ
ನಜುಹರೆಯ ೯-೧೩ ಮುಗಮುಗಿಸುವ ತಾರುಣ್ಯ
ನಳನಳಿಪ ೫-೪ ಕೋಮಲವಾಗಿಬೆಳೆದಿರುವ
ನಳಿನಸಖ ೩-೮ ಕಮಲಮಿತ್ರ, ಸೂರ್ಯ
ನಾಕಾಧಿಪತಿ ೮-೯ ದೇವೇಂದ್ರ
ನಾಗ ೩-೨೦ ಆನೆ
ನಾದ ೫-೬ ನಾಂದ, ಒದ್ದೆಯಾದ
ನಾದಿಸು ೧೦-೩ ಧ್ವನಿಮಾಡು
ನಾಭಿ ೪-೧೧ ಹೊಕ್ಕುಳು
ನಿಚಯ ೭-೧೧ ಸಮೂಹ
ನಿರ್ಜರ ೩-೧೦ ದೇವತೆ
—ಗುರು ೭-೧೫ ಬೃಹಸ್ಪತಿ
—ಧೇನು ೭-೧೭ ಕಾಮಧೇನು
—ಅಧೀಶ ೩-೧೦ ಮುಪ್ಪಿನ ಒಡೆಯ ; ದೇವೇಂದ್ರ
ನಿವಾಳಿ ೪-೧೬ ಆರತಿ
ನಿಸ್ಸಾಹಣ* ೬-೧೨ ನಿಸ್ಸಾಣ, ರಾಯಭೇರಿ
ನೀಗು ೭-೨೫ ಬಿಡು, ಕಳೆದುಕೊಳ್ಳು
ನೀಱ ೮-೨೧ ಸೊಬಗ, ಪ್ರೀತಿಪಾತ್ರ
ನೀಲಾಂಬರ ೭ ೧ ನೀಲವಸ್ತ್ರ, ನೀಲಾಕಾಶ
ನೆಲಗಟ್ಟು ೬-೧೯ ಕುಟ್ಟಿಮಸ್ಥಲ, ನಯಗಾರೆಯ ನೆಲ

---

* ನೀ. ತ್ರೈ. ಪು. (ಕಾಂಡ ೨, ಸ. ೩. ಪ ೪೪); "ನಿಸ್ಸಾಹಣಂ ಧಾಂಪಳಂ ಧಳಮೆನಲ್" (ಕಾಂ. ೨, ಸಂ. ೪, ಪ. ೧೭): "ಅನಿತಕ್ಕೆ ಮನ್ಮಥಂ ಸೇನೆಗಂ ಕೈವೀಸೆ ದನಿಮಾಡಿದುವು ತುಂಬಿಯೆಂಬ ನಿಸ್ಸಾಹಣಂ"

## ಪ

| | | |
|---|---|---|
| ಪಕ್ಕೆ | ೬-೬ | ಮೃಗಗಳ ತಾಣ, ನೆಲೆ, ಇಕ್ಕೆ |
| ಪಂಕ | ೭-೭ | ಕೆಸರು |
| ಪಂಕೇಜ | ೧೦-೩೩ | ಕಮಲ |
| ಪಂಚಕೃತ್ಯ | ೧೦-೨೧ | ಶಿವನ ಐದು ಕಾರ್ಯಗಳು : ಸೃಷ್ಟಿ, ಸ್ಥಿತಿ, ಲಯ, ತಿರೋಧಾನ ಮತ್ತು ಅನುಗ್ರಹ |
| ಪಂಚಮಹಾವಾದ್ಯ | ೨-೭ | ಕೊಂಬು, ತಮ್ಮಟೆ, ಶಂಖ, ಭೇರಿ ಮತ್ತು ಜಾಗಟೆ |
| ಪಂಚವದನ | ೯-೨೧ | ಸಿಂಹ |
| ಪಂಚವರ್ಣ | ೫-೮ | ಪಂಚಾಕ್ಷರಿ |
| ಪಜ್ಜೆ | ೬-೬ | ಹಜ್ಜೆ, ಕಾಲಿನ ಗುರುತು |
| ಪಟ್ಟೆವಸ್ತ್ರ | ೬-೧೫ | ರೇಷ್ಮೆ ಬಟ್ಟೆ |
| ಪಠನಾಗಾರ | ೨-೯ | ಪಾಠಶಾಲೆ |
| ಪನ್ನತಿಕೆ | ೭-೧೧ | ಪರಾಕ್ರಮ |
| ಪನಿನೀರು | ೩-೧೦ | ಸುವಾಸನೆಯ ನೀರು, ಪನ್ನೀರು |
| ಪಂತಿ | ೩-೨೩ | ಸಾಲು |
| ಪಯೋಧರ | ೭-೮ | ಕುಚ ; ಮೇಘ ; ಸಾಗರ |
| ಪರಕಲಿಸಿ | ೮-೧೫ | ಹಬ್ಬಿ, ಹರಡಿ |
| ಪರ್ವತ | ೮-೧ | ಬೆಟ್ಟ ; ಶ್ರೀಶೈಲ |
| ಪರಿಕಿಸು | ೭-೨೬ | ಪರೀಕ್ಷಿಸು |
| ಪರಿಖಾ | ೨-೪ | ಕಂದಕ, ಅಗಳು |
| ಪರಿಣಮಿಸು | ೯-೮ | ಹರ್ಷಗೊಳ್ಳು, ಸಂತೋಷಪಡು |
| ಪರಿತೋಷ | ೨-೬ | ಆನಂದ |
| ಪರೀತ | ೪-೮ | ಸುತ್ತುಗೊಂಡ |
| ಪರೆ | ೩-೧೮ | ಪರಾಶಕ್ತಿ |
| ಪರೇತಾಧಿಪ | ೯-೬ | ಯಮ |
| ಪರವೆ | ೫-೫ | ದುಂಬಿ |
| ಪಱಿ | ೯-೧೭ | ಕತ್ತರಿಸು |
| ಪಲ್ಗಿರಿ | ೫-೨ | ಹಲ್ಲುಕಿರಿ |
| ಪಳಿ | ೯-೫ | ಪಡಿ, ಪ್ರತಿ, ಜೋಡಿ |
| ಪ್ರಣವ | ೨-೧೧ | ಓಂಕಾರ |

| | | |
|---|---|---|
| ಪ್ರವಾಳ | ೨-೧ | ಹವಳ; ಹೊಳವು, ವೀಣೆಯ ದಂಡ |
| ಪ್ರಸೂನ | ೫-೨ | ಪುಷ್ಪ, ಹೂ |
| ಪಾಂಗು | ೬-೨೧ | ರೀತಿ, ಕ್ರಮ, ಹಾಗೆ |
| ಪಾದರಿಗ | ೭-೧೦ | ವ್ಯಭಿಚಾರಿ |
| ಪಾವನ | ೫-೪ | ಪವಿತ್ರ; ವಾಯು |
| ಪಾಶ | ೪-೭ | ಹಗ್ಗ; ಸಮೂಹ |
| —ಅಜ್ಞಾನಪಾಶಚ್ಛೇದ | | ಕೆಟ್ಟಜ್ಞಾನವನ್ನು ಬಡಿದೋಡಿಸುವವ, ವರುಣ. |
| ಪಿಕ | ೫-೨ | ಕೋಗಿಲೆ |
| ಪಿಂಗು | ೨-೮ | ಬಿಡು; ಉಳಿ |
| ಪಿಡಿ | ೯-೯ | ಕೈಮುಷ್ಟಿ |
| ಪಿತೃಪತಿ | ೯-೧೩ | ಯಮ |
| ಪೀಯೂಷ | ೨-೪ | ಅಮೃತ |
| ಪುಟ್ಟಿಗೋಲು | ೭-೧೬ | ಪುಟ್ಟ ಕಟ್ಟಿಗೆ, ದಾಂಡು |
| ಪುಂಡರೀಕ | ೪-೯<br>೭-೧೫ | ಬಿಳಿಯ ತಾವರೆ; ಒಬ್ಬ ಋಷಿ |
| ಪುತ್ಥಳಿ | ೬-೨೧ | ಬೊಂಬೆ |
| ಪುರಂತರು | ೩-೧೩ | ಪುರಾತನರು |
| ಪುರೆಯಿಡು | ೨-೮ | ಹುಬ್ಬಿನಿಂದ ಸಂಜ್ಞೆಮಾಡು |
| ಪೂಣ್ | ೬-೧೩ | ಹೂಳು, ತುಂಬು |
| ಪೂಣಿಸು | ೯-೯ | ಹೂಡು; ನಾಟು; ಅಳವಡಿಸು |
| ಪೂರ್ವಾಮರ | ೭-೨೨ | ರಾಕ್ಷಸ |
| ಪೆಱಪಿಂಗು | ೮-೨೦ | ಹಿಮ್ಮೆಟ್ಟು |
| ಪೆಱತಿ | ೧೦-೧೪ | ಚಂದ್ರ |
| ಪೊಡ | ೪-೧೭ | ಪುಟ (ಸಂ.) ಅಂಜಲಿ, ಬೊಗಸೆ |
| —ಮಡಸು | ” | ಕೈಮುಗಿಯಿಸು |
| ಪೊಣರ್ | ೬-೧೩ | ಹೋರು, ಕಾಳಗಮಾಡು |
| ಪೊಂಬೆಟ್ಟು | ೩-೮ | ಕನಕಾದ್ರಿ, ಮೇರುಪರ್ವತ |
| ಪೌಜು | ೮-೧ | ಒಡ್ಡು, ಸೇನೆ |
| ಪೌಷ್ಯಾರುಣ | ೬-೨೧ | ಪುಷ್ಯರಾಗ |

### ಫ

ಫಣಿಪತಿ ೯-೫ ಆದಿಶೇಷ
ಫೇನ ೮-೨ ನೊರೆ

### ಬ

ಬಟ್ಟೆ ೪-೧೦ ವೃತ್ತ(ಸಂ), ದುಂಡು.
ಬಂಡು ೫-೨ ಪರಾಗ
ಬಂಬಲ್ ೭-೧೮ ಹೊರಳಿ, ತಂಡ, ಸಮೂಹ
ಬರ್ದು ೭-೨೭ ಪ್ರೌಢಿಮೆ; ಸಾವು
ಬರ ಸೆಳೆ ೪-೧೯ ಸಮೀಪಕ್ಕೆ ಬರುವಂತೆ ಎಳೆ.
ಬಲಗೊಳ್ ೮-೫ ಪ್ರದಕ್ಷಿಣೆಮಾಡು
ಬಲಮೂಲ ೩-೨೧ ರಾಕ್ಷಸ
ಬಾಂದೊಱೆ ೧೦-೧೪ ದೇವಗಂಗೆ
ಬಾಯಳಿ ೮-೨೩ ಬಹಳ ರೋದಿಸು
ಬಾಯಾಱು ೧-೨ (ಹಲವ ಹಂಬಲಿಸಿ) ಬಾಯೊಣಗು
ಬಾಳ್ ೬-೧೩ ಕತ್ತಿ
ಬಾಳುದಲೆ ೧೦-೨ (ಕತ್ತರಿಸಲ್ಪಟ್ಟದ್ದರೂ) ಬದುಕಿರುವ ತಲೆ
ಬಿಗುರ್ ೭-೨೫ ಭಯ, ತಲ್ಲಣ
ಬಿಟ್ಟಿ ೯-೫ ವಿಷ್ಟಿ(ಸಂ), ನರಕದಪಾಲು ಮಾಡುವಿಕೆ
ಬಲಾತ್ಕಾರದಿಂದ ನರಕಕ್ಕೆ ನೂಕುವಿಕೆ.
ಬಿನ್ಮು ೮-೬ ಬಿಂಕ; ಹೆಮ್ಮೆ
ಬಿಸ ೨-೧೩ ಕಹಿ; ವಿಷ
ಬೆಸಲಾಗು ೮-೧೭ ಹಡೆ, ಹೆರು
ಬೇಟ ೧೦-೧೫ ವಿರಹ, ಪ್ರೇಮ
ಬೇಹಳ್ ೭-೧೨ ಪ್ರಿಯೆ
ಬೈತು ೮-೨೧ ಮುಚ್ಚಿಟ್ಟು, ಬಚ್ಚಿಟ್ಟು
ಬೊಪ್ಪ ೯-೭ ತಂದೆ
ಬೊಬ್ಬುಳಿಕೆ ೮-೨ ನೀರಗುಳ್ಳೆ

### ಭ

ಭಂಗಸಮಿತಿ ೪-೧೧ ಅಲೆಯ ಸಮೂಹ; ಅಪಮಾನ ಪರಂಪರೆ
ಭರಭಾರಿ ೩-೫ ಹೊರೆ ಹೊತ್ತವ; ಪೋಷಕ, ವಿಶ್ವಾಸಿ

| | | |
|---|---|---|
| ಭಸಿತ | ೫-೮ | ಭಸ್ಮ, ವಿಭೂತಿ. |
| ಭಾಂಡ | ೫-೧೨ | ಪಾತ್ರೆ |
| ಭಾಂಡಿಕ | ೭-೧೦ | ನಗೆಗೀಡಾದ |
| ಭಾಪುರೆ | ೨-೬ | ಭೇಷ್ |
| ಭಾರತಿ | ೧-೩ | ಸರಸ್ವತಿ |
| ಭಾವಜ | ೫-೬ | ಮನ್ಮಥ |
| ಭುವನಜ | ೨-೨ | ಕಮಲ |
| ಭೂಜ | ೪-೧೭ | ಮರ |
| ಭೃಂಗಿರಿಟಿ | ೨-೭ | ಶಿವನ ಸಭೆಯಲ್ಲಿ ಕುಣಿಯುವ ಮೂರು ಕಾಲಿನ ನರ್ತಕ |
| ಭೈತ್ರ | ೮-೨೬ | ಹಡಗು |
| ಭೋಗಿ | ೯-೫ | ಸುಖಲೋಲುಪ; ಸರ್ಪ |
| ಭೋ | ೬-೧೩ | ಅಹೋ! ಅದೋ! |

## ಮ

| | | |
|---|---|---|
| ಮಕರತೋರಣ | ೪-೧೬ | ದೇವರ ಉತ್ಸವ ಮೊದಲಾದ ಸಂದರ್ಭಗಳಲ್ಲಿ ಬಿರುದಿನ ಸಂಕೇತವಾಗಿ ಮೆರವಣಿಗೆಯಲ್ಲಿ ಹಿಡಿದುಕೊಂಡು ಹೋಗುವ ಮಕರಾಕಾರದ ಒಂದು ತೋರಣ |
| ಮಕುಟವರ್ಧನ | ೩-೮ | ಕಿರೀಟವನ್ನು ಧರಿಸಿದ ರಾಜ |
| ಮಂಗಲ | ೮-೨೦ | ಶುಭ, ಅಂಗಾರಕ ಗ್ರಹ |
| ಮಡ | ೭-೨೮ | ಹಿಮ್ಮಡಿ |
| ಮಡಲಿಱು | ೬-೨೩ | ಕುಡಿಯಿಡು, ಹಬ್ಬು |
| ಮಂಡನ | ೬-೧೧ | ಭೂಷಣ, ಅಲಂಕರಣ |
| ಮಡಿ | ೩-೬ | ಗದ್ದೆಯ ಪಾತೆ |
| ಮಂಡೆ | ೪-೯ | ತಲೆ |
| ಮದೇಭ | ೯-೯ | ಮದಿಸಿದ ಆನೆ |
| ಮನದನ್ನ | ೫-೧೨ | ಮನಃಪ್ರಿಯ |
| ಮರೀಚಿ | ೭-೧೫ | ಒಬ್ಬ ಋಷಿ; ಕಾಂತಿ |
| ಮರೀಚಿಕ ಜಲ | ೬-೪ | ಬಿಸಿಲ್ಗುದುರೆ, ಬಯಲ್ದೊರೆ |
| ಮಱುಗು | ೯-೧೩ | ಕುದಿ, ಸಂಕಟಪಡು |
| ಮಾಗಾಯ್ | ೪-೩ | ಮಾವಿನ ಕಾಯ ಆಕಾರದ ಕಿವಿಯ ತೊಡವು |

| | | |
|---|---|---|
| ಮಾಣಿಕ | ೪-೮ | ರಜಸ್ಸು, ಮುಟ್ಟು |
| ಮಾರ್ತಾಂಡ | ೮-೨೬ | ಸೂರ್ಯ |
| ಮಿತ್ರ | ೪-೧೨ | ಸ್ನೇಹಿತ ; ಸೂರ್ಯ |
| ಮಿಥುನ | ೮-೩ | ಜೋಡಿ, ಜೊತೆ |
| ಮಿಸುನಿ | ೩-೧೦ | ಚಿನ್ನ |
| —ಕೆಲಸ | ,, | ರತ್ನವನ್ನು ಚಿನ್ನದಿಂದ ಕಟ್ಟುವ ಕುಂದಣ ಕೆಲಸ |
| ಮುಕ್ತ | ೬-೨೭ | ಮುತ್ತು |
| ಮುಂಗುಡಿ | ೮-೧೦ | ಸೇನೆಯ ಮುಂಭಾಗ, ಚೂಣಿ |
| ಮುಂಡಾಡು | ೪-೩ | ಮುತ್ತಿಡು ; ಮುದ್ದಾಡು |
| ಮುತ್ತಲೆ | ೧೦-೬ | ಮೂರು ತಲೆ |
| ಮುನ್ನೀರು | ೮-೨೬ | ಸಮುದ್ರ |
| ಮುಸಲಿ | ೭-೧ | ಬಲರಾಮ |
| ಮೂಡೆ | ೩-೬ | ಧಾನ್ಯವನ್ನು ತುಂಬಿಡುವ ಗುಡಾಣದ ಆಕಾರದ ಹುಲ್ಲಿನ ಮೂಟೆ ; ಪೆಂಡೆ |
| ಮೂದಲೆ | ೧೦-೩ | ಚುಚ್ಚುವಿಕೆ, ಕೆಣಕುವಿಕೆ |
| ಮೂಲ | ೬-೬ | ಬೇರು, ಬುಡ |
| ಮೇಲುದು | ೭-೬ | ಉತ್ತರೀಯ, ಮೇಲು ಹೊದಿಕೆ |
| ಮೇಲುಪ್ಪರ | ೭-೧೪ | ಇನ್ನುಮೇಲೆ ಎತ್ತರ, ಮುಂದೆ ದಿಣ್ಣೆ |
| ಮೇಲ್ವಲಗೆ | ೬-೧೯ | ಹಲಗೆಯ ಮೇಲ್ಕಟ್ಟು |
| ಮೇಳಿಸು | ೧೦-೨ | ಕೂಡಿಸು |
| ಮೊದಲ್ | ೪-೧೯ | ಅಪೂರ್ವ |
| ಮೊರಹು | ೮-೨ | ಮೊರೆತ, ಅಬ್ಬರ |
| ಮೊಳಗು | ೩-೧೧ | ವಾದ್ಯಘೋಷ ; ಗುಡುಗು |
| ಮೋದ | ೯-೧೨ | ಹರ್ಷ, ಸಂತೋಷ |
| ಮೋಹಿಸು | ೯-೨೦ | ಹೂಡು ; ಸಂಧಿಸು |

## ಯ

| | | |
|---|---|---|
| ಯಕ್ಷ | ೭-೩೧ | ಅತಿಮಾನುಷ ವ್ಯಕ್ತಿ ; ದೇವತೆ |
| —ಗ್ರಹದ | ೬-೧೪ | ಮೈಮೇಲೆ ದೇವತೆ ಬಂದವರ ; ಮರುಳು ಹಿಡಿದವರ |

## ರ

| | | |
|---|---|---|
| ರಕ್ತ | ೫-೨ | ಕೆಂಪು |
| ರಮಾಕರ | ೮-೨ | ಶ್ರೀಮಂತ |
| ರಮೆ | ೪-೧೧ | ಭಾಗ್ಯವಂತೆ, ಸಂಪನ್ನೆ |
| ರವಿ | ೨-೨ | ಪರ್ವತ; ನಿಧಿ, ಭಾಗ್ಯ |
| | ೭-೧೧ | ದೊರೆ |
| ರಾಜ | ೭-೧೨ | ಚಂದ್ರ |
| —ರಾಜ | ೪-೭ | ರಾಜರ ರಾಜ, ಕುಬೇರ |
| —ವೃಕ್ಷ | ೬-೬ | ಸ್ವರ್ಣಪುಷ್ಪಿ, ಕಕ್ಕೆಯಮರ |
| ರಾಜೀವ | ೬-೧ | ಕಮಲ |
| ರೋಹಣಾದ್ರಿ | ೭-೧೮ | ಮೇರು ಪರ್ವತ |

## ಲ

| | | |
|---|---|---|
| ಲಲಾಮ | ೩-೧೪ | ತಿಲಕ; ಶ್ರೇಷ್ಠ |
| ಲೆಂಕ | ೬-೩ | ಭೃತ್ಯ, ಸೇವಕ |
| ಲೆಪ್ಪ | ೭-೧೮ | ಎರಕ, ಪ್ರತಿಮೆ |
| ಲೇಖ | ೩-೨೦ | ದೇವತೆ |
| —ವಲ್ಲಭ | ,, | ದೇವೇಂದ್ರ |
| ಲುಬ್ಧಕ | ೬-೫ | ಬೇಡ |
| ಲೋಕನೇತ್ರ | ೮-೬ | ಜಗದ ಕಣ್ಣು, |
| ಲೋಕಬಾಂಧವ | ೭-೨೬ | ಜಗತ್ತಿನ ನಂಟ, ಸೂರ್ಯ |
| ಲೋಕಾಲೋಕ | ೮-೫ | ಈ ಭೂಮಿಯನ್ನು ಗೋಡೆಯಂತೆ ಸುತ್ತುಗಟ್ಟಿ ಅವ್ಯಕ್ತಲೋಕವ ಕತ್ತಲೆಯಿಂದ ಬೇರ್ಪಡಿಸುವ ಪೌರಾಣಿಕ ಪರ್ವತಶ್ರೇಣಿ, ಚಕ್ರವಾಳ; ದಿಗಂತ |
| ಲೋಚನಶ್ರುತಿಪ | ೨-೧ | ಕಣ್ಣೇ ಕಿವಿಯಾಗುಳ್ಳವನು, ಸರ್ಪ |
| ಲೋಲಸೂತ್ರ | ೬-೨೧ | ಬೊಂಬೆಯನ್ನು ಆಡಿಸುವ ಸೂತ್ರ; ಕೊರಳ ಸರ, ಹಾರ |

## ವ

| | | |
|---|---|---|
| ವಡಬ | ೬-೧೦ | ಕಡಲ ಬೆಂಕಿ, ಬಡಬಾಗ್ನಿ |
| ವಣಿಕ್ | ೩-೮ | ವ್ಯಾಪಾರಗಾರ, ವರ್ತಕ |
| ವಣಿಜ | ೮-೨೫ | |

| | | |
|---|---|---|
| ವತ್ಸರ | ೭-೧ | ಅಬ್ದ, ವರ್ಷ |
| ವರ್ಷ | ೭-೧ | ಮಳೆ |
| ವಲ್ಲಿ | ೫-೫ | ಬಳ್ಳಿ |
| ವಸನ | ೨-೨ | ವಸ್ತ್ರ ; ಹೊದಿಕೆ |
| ವಾರಣ | ೭-೨೭ | ಆನೆ ; ಕವಚ ; ಮರೆ |
| ವಾರಣಾಸಿ | ೮-೧ | ಕಾಶೀಕ್ಷೇತ್ರ ; ನೈಜೋಡಿಗೆ ಬಿಗಿದ ರಕ್ಷಾಖಡ್ಗ |
| ವಾರಿಜವಿರೋಧಿ | ೭-೩ | ಕಮಲವೈರಿ, ಚಂದ್ರ |
| ವಾರುವ | ೮-೧೪ | ಕುದುರೆ |
| ವಾಹಿನಿ | ೮-೯ | ಸೇನೆ |
| ವ್ಯಾಜ | ೧-೨ | ನೆಪ |
| ವಿಜಾತಿ | ೪-೧೧ | ಪಕ್ಷಿ ; ಹೀನಜಾತಿ |
| ವಿದಾರಿಸು | ೪-೨೦ | ಸೀಳು |
| ವಿದ್ರುಮ | ೬-೨೧ | ಹವಳ |
| ವಿಧು | ೩-೪ | ಚಂದ್ರ |
| ವಿಪಿನ | ೬-೫ | ಕಾಡು |
| ವಿಭಾಕರ | ೭-೨ | ಸೂರ್ಯ |
| ವಿಯತ್ | ೭-೨ | ಆಕಾಶ |
| ವಿಲಯ | ೬-೧೪ | ಪ್ರಳಯ ಕಾಲ |
| ವಿಲೋಚನ | ೮-೨೦ | ಕಣ್ಣು ; ಸೂರ್ಯಗ್ರಹ |
| ವಿಂಶತಿ | ೨-೭ | ಇಪ್ಪತ್ತು |
| ವೀಚಿ | ೩-೫ | ಅಲೆ |
| ವೀಟಿಕೆ | ೬-೨೩ | ವೀಳೆಯ |
| ವೃದ್ಧಶ್ರವ | ೩-೧೦ | ವಿಭವವನ್ನುಳ್ಳವನು ; ಇಂದ್ರ |
| ವೇಡೆಯವನಿಕ್ಕು | ೮-೫ | ಸುತ್ತುವರಿ, ಬಳಸು ಹಾಕು, ಮಂಡಲಾಕಾರದಲ್ಲಿ ಸವಾರಿ ಮಾಡು |
| ವೈಹಾಳಿ | ೭-೨೭ | ವಾಹ್ಯಾಳಿ ; ಕುದುರೆಯ ಪೇರಿ, -ಸವಾರಿ ಪ್ರದರ್ಶನ |

ಶ

| | | |
|---|---|---|
| ಶಬರ | ೬-೧ | ಬೇಡ |

| | | |
|---|---|---|
| ಶಾಂಭವಲೋಕ | ೩–೧೮ | ಶಿವಲೋಕ, ಕೈಲಾಸ |
| ಶಿಖಿ | ೫–೪ | ನವಿಲು ; ಅಗ್ನಿ |
| | ೯–೧೦ | ಚಂಡಿಕೆ ; ಜುಟ್ಟು |
| —ವಾಹನ | ೨–೬ | ನವಿಲ್ದೇರ, ಷಣ್ಮುಖ |
| ಶಿವದೋ* | ೮–೨೧ | ಶಿವನೇ, ಶಂಕರಾ ಎಂದು ಶಿವನನ್ನು ನೆನೆದು ಮೊರೆಯಿಡುವುದು, ದೂರುವುದು |
| ಶೀತಕರ | ೭–೫ | ಹಿಮಕರ, ಚಂದ್ರ |
| ಶ್ರೀಕಾಳಿ | ೨–೧೫ | ಶೀರ್‌ಕಾಟಿ, ಶೀಯಾಳಿ–ಒಂದು ಊರು |

**ಷ**

| | | |
|---|---|---|
| ಷಟ್ತ್ರಿಂಶ | ೫–೯ | ಮೂವತ್ತಾರು |
| ಷಟ್ಪದಿ | ೧–೪ | ದುಂಬಿ; ಹಾಡುಗಬ್ಬದ ಒಂದು ಪದ್ಯಜಾತಿ |
| ಷಡ್ವದನ | ೨–೯ | ಷಣ್ಮುಖ, ಕುಮಾರಸ್ವಾಮಿ |
| ಷಂಡ | ೬–೧೧ | ರಾಶಿ, ಗುಂಪು |
| ಷೋಡಶ | ೨–೧೩ | ಹದಿನಾರು |

**ಸ**

| | | |
|---|---|---|
| ಸಗ್ಗಿಗ | ೭–೧೮ | ದೇವತೆ |
| ಸಂಜೋಗ | ೮–೨ | ಮುಸ್ತೈದೆ, ಸನ್ನದ್ಧ, ಸಿದ್ಧ |
| ಸಂಪಾದನೆ | ೯–೫ | ಪ್ರಸಂಗ, ಚರ್ಚೆ, ಸಂವಾದ |
| ಸತ್ಕೀರ್ತಿ | ೬–೨೮ | ಶುಭವಾರ್ತೆ |
| ಸಹಕಾರ | ೫–೧ | ಮಾವಿನ ಮರ |
| ಸ್ಕಂದ | ೫–೩ | ಕುಮಾರ, ಗುಹ |
| ಸ್ವೇದ | ೪–೧೫ | ಬೆವರು |
| ಸಾಟಿ | ೭–೧೮ | ಸಮಾನ |
| ಸಾಣಿ | ೮–೨ | ಸಹಣಿ, ಕುದುರೆಯನ್ನು ಪಳಗಿಸುವವನು |
| ಸಾತಿ | ೭–೬ | ಸ್ವಾತಿ |
| ಸಾರಸ | ೧೦-೧೩ | ಕಮಲ |

---

*ಶಿವಧೊ, ಶಿವಧಾ, ಶಿವದಾ ಎಂಬ ರೂಪಗಳೂ ಉಂಟು. ಶಿವದೋ ಎಂಬುದರ ಓ' ಕೂಗಿ ಮೊರೆಯಿಡುವಲ್ಲಿ ಬಳಸುವ ಒಂದು ಭಾವಸೂಚಕಾವ್ಯಯ. 'ಶಿವದಿಡು', ಶಿವದಿಟ್ಟಂ' ಎಂಬ ಕ್ರಿಯಾಪದಗಳಲ್ಲಿ ಅಲ್ಪಪ್ರಾಣವಿರುವುದನ್ನು ಗಮನಿಸಬಹುದು.

ಸಾಲಭಂಜಿಕೆ ೮–೯ ಬೊಂಬೆ
ಸಿತ ೩–೨೦ ಬಿಳಿದು
–ವ್ಯಾಲ ,, ಬಿಳಿಯ ಆನೆ, ಐರಾವತ
ಸಿಂಧು ೭–೨೧ ಒಂದು ದೇಶ
೭–೨೩ ಸಮುದ್ರ
ಸಿಂಪು ೪–೧೪ ಮುತ್ತಿನ ಚಿಪ್ಪು
ಸಿಂಹವಿಷ್ಟರ ೩–೧೬ ಸಿಂಹಪೀಠ, ಸಿಂಹಾಸನ
ಸುರಗಿ ೫–೨ ಬಹು ಸುವಾಸನೆಯ ಹೂವನ್ನು ಬಿಡುವ ಒಂದು ಮರ
ಸುಲಭಶೌರಿ ೮–೧೦ ಸುಲಭಪರಾಕ್ರಮಿ, ಕವಿ (?)
ಸುವರ್ಣ ೭–೧೭ ಚಿನ್ನ, ಸುಸ್ವರ
ಸೂಡು ೮–೨೮ ಧರಿಸು
ಸೂತ ೭–೧೫ ಒಬ್ಬ ಋಷಿ; ಹೊಗಳುಭಟ್ಟ
ಸೂತ್ರಿಕ ೨–೨ ಯಂತ್ರವಾಹಕ
ಸೆರೆ ೮–೧೩ ರಕ್ತನಾಳ
ಸೇಸೆ ೬–೨೨ ಅಕ್ಷತೆ
ಸೈಂಧವ ೮–೨ ಕುದುರೆ; ಸಿಂಧು ದೇಶಕ್ಕೆ ಸೇರಿದ
ಸೈಪು ೩–೭ ಪುಣ್ಯ
ಸೊರೆವಾತು ೭–೧೭ ಸೋರೆಬುರುಡೆಯಿಂದ ಬರುವ ಸ್ವರ; ಹಾಲು ಕರೆಯುವಾಗ ಆಗುವ ಸೊರೆಯ ಕರೆತ
ಸೋಗೆ ೫–೪ ನವಿಲ ಗರಿ; ನವಿಲಿನ ಬಾಲ, ತೋಕೆ
ಸೌರಂಭ ೮–೪ ಸಡಗರ

## ಹ

ಹತಿ ೯–೩ ಹೊಡೆತ, ಗಾಯ
ಹದ ೨–೮ ಬಗೆ, ರೀತಿ
ಹಮ್ಮೈಸು ೮–೧೬ ಮೂರ್ಛೆಹೊಂದು

ಹಯ ೬–೧೧ ಕುದುರೆ
ಹರಣ ೯–೮ ಪ್ರಾಣ
ಹರವರಿ ೭–೨೪ ಸೂಚನೆ; ವಿಸ್ತಾರ
ಹರಿ ೬–೮ ಸಿಂಹ
ಹರ್ಮ್ಯ ೭–೫ ಉಪ್ಪರಿಗೆಯ ಮನೆ
ಹಲ್ಲಣ ೮–೨ ಜೀನು
ಹಸಾದ ೯–೮ ಅಪ್ಪಣೆ
ಹಂಸ ೩–೪ ಹಂಸಪಕ್ಷಿ; ಸೂರ್ಯ
ಹಾಲಾಹಲ ೩–೨೧ ವಿಷ
ಹಿಕ್ಕು ೪–೯ ಕೂದಲಿನ ಸಿಕ್ಕು ಬಿಡಿಸು
ಹಿಳಿ ,, ಹಿಂಡು
ಹುಡಿ ೭–೧೨ ನುಚ್ಚುನೂರು, ಪುಡಿ; ಪರಾಗ
ಹುಡುಕುನೀರು* ೩–೫ ಸೆಕೆನೀರು, ಸೇಕನೀರು, ಸುಡುನೀರು



---

*ರಾತ್ರಿಯ ವೇಳೆಯಲ್ಲಿ ಬತ್ತವನ್ನು ತಣ್ಣೀರಿರುವ ಪಾತ್ರೆಯಲ್ಲಿ ಸುರಿದು ಬೆಳಿಗ್ಗೆ ಮೂಡೆಕಟ್ಟಿ, ಹಗಲಲ್ಲಿ ಗಾಳಿ, ಬಿಸಿಲು ತಾಕದ ಕಡೆ ಹುದುಗಿಸಿಡುವರು. ನೀರಿನಲ್ಲಿ ನೆನೆದು ಆರದಂತೆ ಮುಚ್ಚಿಟ್ಟ ಕಾರಣ ಮೂಡೆಯ ಬತ್ತ ಶಾಕಹೊಂದಿ, ಮತ್ತೆ ಅದನ್ನು ನೀರಿನಲ್ಲಿ ಮುಳುಗಿಸಿ ಎತ್ತಿದಾಗ ಇಲ್ಲವೆ ತಣ್ಣೀರನ್ನು ಅದರ ಮೇಲೆ ಹಾಕಿದಾಗ, ಅದರಿಂದ ಸೋರುವ ನೀರು ಬಹು ಬಿಸಿಯಾಗಿರುತ್ತದೆ. ಇದನ್ನೇ ಹುಡುಕು ನೀರು, ಸೆಕೆನೀರು ಅಥವಾ ಸೇಕನೀರು ಎಂದು ಕರೆಯುವರು. ಎರಡು ರಾತ್ರಿ ಹೀಗೆ ನೀರಿನಲ್ಲಿ ಅದ್ದಿ ಇಡುವುದರಿಂದ ಮೂಡೆಯ ಬತ್ತ ಉಬ್ಬಿ ಮೊಳಕೆಯಾಗುವುದು. ಆ ಬಳಿಕ ಮೊಳೇ ಬತ್ತವನ್ನು ಮೊನೆ ಮುರಿಯದಂತೆ ಅಗೆಪಾತೆಯಲ್ಲಿ ಬಟ್ಟು ಹೊಯ್ಯುವ ರೂಢಿ ಈಗಲೂ ಕೆಲವೆಡೆ ಉಂಟು.

" ಕ್ಷೇತ್ರದೊಳು ಬೀಜಮುಷ್ಣೋದಕದಿನುಬ್ಬುತ....
ಪುತ್ರಕೇಳಾ ಬಿತ್ತು ಬೇರುಬಿಡುವುದು ವಿಲಸದುದ್ಭಿದೋತ್ಪತ್ತಿ "

ವೀ. ಶೈ. ಪು. ಕಾ. ೪, ಸಂ. ೨೦, ಪ. ೭

**ಪರಿಶಿಷ್ಟ**

# ಆಧಾರ ಗ್ರಂಥಗಳು

## ಕನ್ನಡ

| ಗ್ರಂಥ : | ಗ್ರಂಥಸೂಚಿ : | ಗ್ರಂಥಕರ್ತರು : |
|---|---|---|
| **ಓಲೆಯ ಪ್ರತಿಗಳು** | | |
| ೧ ಕರ್ಣರಸಾಯನ* | ಕ.ರ. | ಮಲ್ಲಿಕಾರ್ಜುನ |
| ೨ ಗಣಭಾಷ್ಯರತ್ನಮಾಲೆ | ಗ.ಭಾ.ರ. | ಗುಬ್ಬಿಯ ಮಲ್ಲಣ್ಣ |
| ೩ ಗಣಸಹಸ್ರನಾಮ | ಗ.ಸ.ನಾ. | ಪಾಲ್ಕುರಿಕೆ ಸೋಮನಾಥ |
| ೪ ಚೇರಮ ಕಾವ್ಯ | ಚೇ.ಕಾ. | ಚೇರಮ |
| ೫ ಬಸವ ಪುರಾಣ | ಬ.ಪು. | ಭೀಮಕವಿ |
| ೬ ಶುದ್ಧಾಖ್ಯ ತಂತ್ರ—ಕನ್ನಡ ಟೀಕೆ | ಶು.ತಂ. | ಮಲ್ಲಿಕಾರ್ಜುನ (ಗುಬ್ಬಿಯ ಮಲ್ಲಣ್ಣ) |
| ೭ ಷಟ್ಸ್ಥಲ ತಿಲಕ | ಷ.ತಿ. | ಸಿದ್ಧರಾಮ |
| ೮ ಸತ್ಯೇಂದ್ರಚೋಳ ಸಾಂಗತ್ಯ | ಸ.ಚೋ. ಸಾಂ. | ಶಾಂತಕವಿ |
| ೯ ಸಾಸಲಭೈರವೇಶ್ವರ ಕಾವ್ಯ | | |
| ೧೦ ಸಾಸಲ ಭೈರವೇಶ್ವರ ಕಾವ್ಯದ ಕಥಾಸೂತ್ರ-ರತ್ನಾಕರ | ಸಾ.ಭೈ.ಕಾ.ಕ.ಸೂ. | ಶಾಂತಲಿಂಗದೇಶಿಕ |
| ೧೧ ಸಿದ್ಧೇಶ್ವರ ಪುರಾಣ | ಶಾಂ.ಸಿ.ಪು. | ಶಾಂತೇಶ |
| ೧೨ ಹರಿಹರನ ರಗಳೆಗಳು | ಹ.ರ. | ಹಂಪೆಯ ಹರಿಹರದೇವ |

*ಕರ್ಣಾಟಕ ಕವಿಚರಿತ್ರೆಯಲ್ಲಿ ಈ ಗ್ರಂಥವಿಚಾರ ಬರುವುದಿಲ್ಲ.

**ಹಸ್ತಪ್ರತಿಗಳು :**

| | | | |
|---|---|---|---|
| ೧೩ | ಕರ್ಣಾಟಕ ಕುವಲಯಾನಂದಾಲಂಕಾರ ಶಾಸ್ತ್ರ | ಕ.ಕು, | ಜಾಯಿಗೊಂಡದೇಶಾಯಿ (ಜಾಯೇಂದ್ರ) |
| ೧೪ | ನಿಜಲಿಂಗಚಿಕ್ಕಯ್ಯನ ಸಾಂಗತ್ಯ | ನಿ.ಚಿ. ಸಾಂ. | ಚನ್ನಬಸವ |
| ೧೫ | ಭುವನಕೋಶ | ಭು.ಕೋ. | ಉತ್ತರದೇಶದ ಬಸವಲಿಂಗದೇಶಿಕ |
| ೧೬ | ಶಿವತತ್ತ್ವಚಿಂತಾಮಣಿ | ಶಿ.ಚಿಂ. | ಲಕ್ಕಣ್ಣದಂಡೇಶ |

**ಮುದ್ರಿತ ಪ್ರತಿಗಳು :**

| | | | |
|---|---|---|---|
| ೧೭ | ಉದ್ಭಟಕಾವ್ಯ | ಉ.ಕಾ. | ಸೋಮರಾಜ |
| ೧೮ | ಕರ್ಣಾಟಕ ಕವಿಚರಿತ್ರೆ(ಮೂರು ಸಂಪುಟಗಳು) | ಕ.ಕ.ಚ. | ಆರ್. ನರಸಿಂಹಾಚಾರ್ಯರು |
| ೧೯ | ಗುರುರಾಜಚಾರಿತ್ರ | ಗು.ಚಾ. | ಸಿದ್ಧನಂಜೇಶ |
| ೨೦ | ಚೆನ್ನಬಸವಪುರಾಣ | ಚೆ.ಪು. | ವಿರೂಪಾಕ್ಷ ಪಂಡಿತ |
| ೨೧ | ತ್ರಿಷಷ್ಟಿಪುರಾತನ ಚರಿತ್ರೆ | ತ್ರಿ.ಪು.ಚ. | ಸುರಂಗ |
| ೨೨ | ಪಾಲ್ಕುರಿಕೆ ಸೋಮೇಶ್ವರ ಪುರಾಣ | ಪಾ.ಸೋ.ಪು. | ವಿರಕ್ತತೋಂಟದಾರ್ಯ |
| ೨೩ | ಪುರಾತನ ತ್ರಿವಿಧಿ | ಪು.ತ್ರಿ. | ನಿಜಗುಣಶಿವಯೋಗಿ |
| ೨೪ | ಪುರಾತನ ದೇವಿಯರ ತ್ರಿವಿಧಿ | ಪು.ದೇ.ತ್ರಿ. | |
| ೨೫ | ಮಲ್ಹಣಸ್ತೋತ್ರ* | ಮ.ಸ್ತೋ. | |
| ೨೬ | ರಾಘವಾಂಕ ಕಾವ್ಯ | ರಾ.ಕಾ. | ಸಿದ್ಧನಂಜೇಶ |
| ೨೭ | ರಾಜಶೇಖರವಿಲಾಸ | ರಾ.ವಿ. | ಷಡಕ್ಷರದೇವ |
| ೨೮ | ವೀರಶೈವಾಮೃತ ಪುರಾಣ | ವೀ.ಶೈ.ಪು. | ಗುಬ್ಬಿಯ ಮಲ್ಲಣಾರ್ಯ |
| ೨೯ | ವೃಷಭೇಂದ್ರವಿಜಯ | ವೃ.ವಿ. | ಷಡಕ್ಷರದೇವ |

ಶಿವಾನುಭವ, ಶರಣಸಾಹಿತ್ಯ, ಪ್ರಬುದ್ಧಕರ್ಣಾಟಕ, ಪರಿಷತ್ ಪತ್ರಿಕೆ ಇತ್ಯಾದಿ

---

*ಶ್ರೀ ಹೊಸಮಠದ ಚರಮೂರ್ತಿ ಬಸವಲಿಂಗಸ್ವಾಮಿಯವರ ಕನ್ನಡ ಟಿಪ್ಪಣಿ.

| | | |
|---|---|---|
| ೩೦ ಶಿವಶರಣರ ಚರಿತ್ರೆಗಳು | ಶಿ.ಚ. | ಫ. ಗು. ಹಳಕಟ್ಟಿಯವರು |
| ೩೧ ಸಿದ್ಧೇಶ್ವರಪುರಾಣ | ಸಿ ಪು. | ವಿರಕ್ತತೋಂಟದಾರ್ಯ |

## ತಮಿಳು

| | | |
|---|---|---|
| ಕಂದರ್ ಕಲಿವೆಣ್ಬಾ | | ಕುಮಾರಗುರುಪರಸ್ವಾಮಿಗಳ್ |
| ತಿರುತ್ತೊಣ್ಡರ್ ಪುರಾಣಮ್ (ಪೆರಿಯಪುರಾಣ) | ಪೆ. ಪು. | ಶೇಕ್ಕಿಳಾರ್ |
| ತಿರುಪ್ಪುಹಳ್ | | ಅರುಣಗಿರಿನಾಥರ್ |
| ತಮಿಳು ಪಾಠಗಳು | | ಎಸ್. ರುದ್ರಪತಿ, ತಮಿಳ್ ಅಸಿಸ್ಟೆಂಟ್ ಪ್ರೊಫೆಸರ್ |
| ಅಭಿಧಾನಚಿಂತಾಮಣಿ | | ಎ. ಸಿಂಗಾರುವೇಲುಮುದಲಿಯಾರ್ |
| Tamil Literature | | ಪ್ರೊ। ಎಂ. ಎಸ್. ಪೂರ್ಣಲಿಂಗಂಪಿಳ್ಳೈ |

## ತೆಲುಗು

| | | |
|---|---|---|
| ನವಚೋಳ ಚರಿತ್ರ | ನ.ಚ. | ಪೋಸೆಟ್ಟಿಲಿಂಗನಕವಿ |
| ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯರ ಚರಿತ್ರೆ | ಮ.ಪಂ.ಚ. | ಪಾಲ್ಕುರಿಕೆ ಸೋಮನಾಥ |

## ಚರಿತ್ರೆ ಮತ್ತು ಇತರ ಗ್ರಂಥಗಳು

| | |
|---|---|
| Colas | Prof. K.A. Nilakanta Sastry |
| Mysore Gazetteer | Hayavadana Rao |
| Archaeological Survey of Mysore | |
| Epigraphica Carnataka | B. Lewis Rice |




## RESEARCH AND LITERARY WORKS PUBLISHED BY
**Sri C. Mahadevappa, M.A.,**

1. College Translation
2. Bhavachintharathna of Gubbi Mallanarya
3. Manuchola Ragale of Harihara
4. Shelliya Kavya Samarthane
5. Sampadane Sri Channanje Devaru Serisida Shankaradevara Kanda.
6. Shadakshara Devana Kavya Dristi
7. Shakunthalada Bhramara
8. Aksharamalika Gadhya
9. Srisailanathankitha Pancharathnam
10. The unknown pages in the History of Kannada Literature-1.
    Research Corner Series No. 1
11. Kannada Sahithyadalli Sathkavi Marga
    —Research Corner Series No.—2

## *IN PRINT*

***Shankaradevara Kanda*** (complete)

***Shankara Shathaka***

